# ಮುನ್ನುಡಿ

ಸನಾತನ ವೀರಶೈವ ಮತಸ್ಥಾಪಕರಾದ ಶ್ರೀಜಗದ್ಗುರು ಪಂಚಾಚಾರ್ಯರು ಯುಗಯುಗಗಳಿಂದಲೂ ತಮ್ಮ ಕೀರ್ತಿಧ್ವಜವನ್ನು ಆಸೇತು ಹಿಮಾಚಲಪರ್ಯಂತ ಮೆರೆಯಿಸುತ್ತ ಬಂದಿದ್ದುದು. ಶಿವಾಗಮ-ಪುರಾಣಾದಿಗಳಿಂದ ಪ್ರಸಿದ್ಧವಾಗಿರುವುದು ಸರಿಯಷ್ಟೆ! ಆದರೂ ಇತಿಹಾಸವೇ ಪ್ರಧಾನವಾಗುಳ್ಳ ಈ ಕಲಿಕಾಲದಲ್ಲಿ ಆ ಆಚಾರ್ಯಭಗವತ್ಪಾದರ ಧರ್ಮಕೀರ್ತಿಯೆಂಬ ಸೂರ್ಯನಿಗೆ ಅಸಂಸ್ಕೃತಿಯೆಂಬ ಮೋಡ ಮುಸುಕಿ ಮತದ ವೈಶಿಷ್ಟ್ಯವೇ ಹಾಳಾಗಿ ಹೋಗುತ್ತಿರುವಾಗ್ಗೆ ಪಂಚಾಚಾರ್ಯರ ಶಕ್ತಿಯೇ ಸಮನ್ವಯಗೊಂಡು ಕಾಶೀನಾಥಶಾಸ್ತ್ರಿಗಳ ಸ್ವರೂಪದಲ್ಲಿ ನಿಂತು ಯಥಾಪ್ರಕಾರ ಪಂಚಾಚಾರ್ಯರ ಕೀರ್ತಿಯನ್ನೂ ಗುರುಪೀಠಗಳ ವೈಭವವನ್ನೂ ಮತತತ್ವಪ್ರಚಾರವನ್ನೂ ವಿಸ್ತಾರಗೊಳಿಸಿದುದಕ್ಕೆ ಅವರನ್ನು ವೀರಶೈವ ಸಮಾಜವಿಷ್ಟೇ ಅಲ್ಲಾ ಇಡೀ ಜಗತ್ತೇ ತ್ರಿಕಾಲಗಳಲ್ಲಿ ಸ್ಮರಿಸುವಂತಾಗಿದೆ. ಅವರ ಸ್ಮರಣೆಯು ಚಿರಕಾಲ ಉಳಿಯಬೇಕಾಗಿದೆ. ಇದಕ್ಕಾಗಿ ಅವರ ಜೀವನ ಚರಿತ್ರೆ ಅಗತ್ಯವಾದುದೆಂಬ ಅಂಶವು ಜಗತ್ತಿನ ನಾನಾ ಭಾಗಗಳಿಂದ ನಮ್ಮ ತಿಳಿವಳಿಕೆಗೆ ಬರುತ್ತಿರುವಷ್ಟರಲ್ಲಿಯೇ ರಾಯಚೂರು ಜಿಲ್ಲಾ ಮಸ್ಕಿ ಶ್ರೀ॥ ಷ॥ ಬ್ರ॥ ಷಡಕ್ಷರಾನಂದ ಶಿವಾಚಾರ್ಯರು ತಮಗೆ ತಿಳಿದಷ್ಟು ವಿಷಯಗಳನ್ನು ಸಂಗ್ರಹಿಸಿ ಬರೆದು ತಂದುಕೊಟ್ಟರು. ನಾವು ಅದನ್ನು ಅನೇಕ ಆಧಾರಯುತ ಹೆಚ್ಚಿನ ವಿಷಯಗಳೊಡನೆ ಮುಂದುವರಿಸಿ. ವಾಚಕರಲ್ಲೂ ಭಾವೀ ವೀರಶೈವ ಧರ್ಮಸಾಮ್ರಾಜ್ಯದಲ್ಲೂ ಕಾಶೀನಾಥ ಪಂಡಿತರ ಅದ್ವಿತೀಯ ಕೀರ್ತಿಯು ಬೆಳಗುವಂತೆ " ಕಾಶೀನಾಥವಿಜಯ " ಎಂಬ ಹೆಸರಿನಲ್ಲಿ ಈ ಗ್ರಂಥವನ್ನು ಪ್ರಕಟಿಸಿದ್ದೇವೆ. ಇದನ್ನು ಸಂಪೂರ್ಣವಾಗಿ ಓದಿದವರೆಲ್ಲರೂ ಶ್ರೀಕಾಶೀನಾಥಶಾಸ್ತ್ರಿಗಳವರು ಪಂಚಾಚಾರ್ಯರ ಅವತಾರಿಗಳೆಂದು ಹೇಳದೆ ಇರಲಾರರು. ಇಷ್ಟೇ ಅಲ್ಲ ಈ ಗ್ರಂಥಪಠನದಿಂದ ಮತತತ್ವಜ್ಞಾನವೂ, ಗುರುಭಕ್ತಿಯೂ, ಧರ್ಮಪ್ರೇಮ-ರಾಷ್ಟ್ರಪ್ರೇಮಗಳೂ ಉದಯಿಸಿ ವಾಚಕರು ಮೋಕ್ಷಮಾರ್ಗಗಾಮಿಗಳಾಗಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಆ ಮಹಾತ್ಮರ ಈ ಜೀವನಚರಿತ್ರೆಗೆ ಮೂಲಕಾರಣರಾದ ಮಸ್ಕಿ ಶ್ರೀಗಳವರಿಗೆ ನಮ್ಮ ಕೃತಜ್ಞತೆಯನ್ನರ್ಪಿಸುತ್ತೇವೆ.

ಪ್ರಕಾಶಕರು.

# ವಿಷಯಾನುಕ್ರಮಣಿಕೆ

॥ ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ಕಾಶೀನಾಥವಿಜಯ

## ಚರಿತ್ರನಾಯಕರ ಜನ್ಮಸ್ಥಳದ ಪರಿಚಯ

ಧಾರವಾಡ ಜಿಲ್ಲಾ ನವಲಗುಂದ ತಾಲೂಕು ನರಗುಂದ ಪೇಠಾ ಬೆಣ್ಣೀಹಳ್ಳದ ದಡದಲ್ಲಿ ನಾಗನೂರು ಎಂಬ ಗ್ರಾಮವು ಪೂರ್ವಕಾಲದಲ್ಲಿ ಲಿಂಗಧಾರಿಗಳಾದ ರಡ್ಡೀ ಸಮಾಜದವರಿಂದಲೂ ಪಂಚಮಸಾಲಿ ಮೊದಲಾದ ಇತರ ಲಿಂಗವಂತ ಸಮಾಜದವರಿಂದಲೂ ಪರಿಪೂರ್ಣವಾಗಿದ್ದು ಕೃಷಿಕರ್ಮದಿಂದ ಶೋಭೆಗೊಂಡಿತ್ತು. ಈ ವೀರಶೈವರಿಗೆಲ್ಲಾ ಗುರುಗಳಾದ ಶ್ರೀ॥ ಷ॥ ಬ್ರ॥ ಸಿದ್ಧೇಶ್ವರಶಿವಾಚಾರ್ಯಮಹಾಸ್ವಾಮಿಗಳವರು ಸದರಿ ಗ್ರಾಮದ ಹಿರೇಮಠದ ಚರಪಟ್ಟಾಧಿಕಾರಿಗಳಾಗಿ ಸುತ್ತುಮುತ್ತಲಿರುವ ಖಾನಾಪುರ, ಗಂಗಾಪುರ, ಭೋಪಳಾಪುರ, ಮಾಳವಾಡ ಗ್ರಾಮಗಳಲ್ಲಿ ತಮ್ಮ ಮಠಗಳನ್ನು ಸ್ಥಾಪಿಸಿದ ಕಾರಣದಿಂದಲೇ ನಾಗನೂರು ಹಿರೇಮಠವು ಐದು ಮಠಗಳನ್ನೊಳಗೊಂಡು ಪಂಚಗ್ರಹ ಹಿರೇಮಠವೆಂದು ಪ್ರಸಿದ್ಧಿಯಾಯಿತು. ಶ್ರೀಸಿದ್ಧೇಶ್ವರಶಿವಾಚಾರ್ಯರು ದೇಶಮಧ್ಯದಲ್ಲಿ ಸಂಚರಿಸಿ ಧರ್ಮಬೋಧೆಯನ್ನು ಮಾಡುತ್ತ ಸಾವಿರಾರು ಕುಟುಂಬಗಳಿಗೆ ವೀರಶೈವ ಧರ್ಮದೀಕ್ಷೆಯನ್ನು ಕೊಟ್ಟು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಈ ಮಠವು ಕಾಶೀಪೀಠದ ಶಾಖಾಮಠವಾಗಿದ್ದು ಸ್ಕಂದಗೋತ್ರವುಳ್ಳದ್ದಾಗಿದೆ. ಈ ಮಠಕ್ಕೆ ೧೨ ಎಕರೆ ಭೂಮಿ ಇನಾಂ (ಜೂಡಿ) ಉಂಟು. ಶ್ರೀ ಸಿದ್ಧೇಶ್ವರಶಿವಾಚಾರ್ಯಮಹಾಸ್ವಾಮಿಗಳು ಜ್ಞಾನಿಗಳೂ, ತಪಸ್ವಿಗಳೂ, ಶಾಪಾನುಗ್ರಹ ಸಮರ್ಥರೂ ಆಗಿದ್ದುದರಿಂದ ಜನಗಳು ತಂಡೋಪತಂಡವಾಗಿ ಬಂದು ಜ್ಞಾನೋಪದೇಶವನ್ನು ಹೊಂದಿ ಇಷ್ಟಾರ್ಥಸಿದ್ಧಿಯನ್ನು ಪಡೆಯುತ್ತಿದ್ದರು. ಎಂದಿನಿಂದಲೂ ಈ ಗ್ರಾಮದಲ್ಲಿ ಸರ್ಪಗಳ ವಸತಿಯು ವಿಶೇಷವಾಗಿತ್ತು. ಆ ಹುತ್ತಗಳ ಜಾಗೆಯಲ್ಲಿಯೇ ಮಠವಿದ್ದಿತು. ಒಂದೊಂದು

ಸಮಯ ಶ್ರೀಗಳವರು ಸರ್ಪಗಳ ಕೂಡ ಆಟವಾಡುತ್ತಿದ್ದರು ; ಕೊರಳಲ್ಲಿ ಧರಿಸುತ್ತಿದ್ದರು ; ಈ ಪ್ರಕಾರ ಅವರು ವಿಶೇಷವಾಗಿ ಸರ್ಪಗಳೊಡನೆ ಹೆಚ್ಚಾಗಿ ವಿಹರಿಸುತ್ತಿದ್ದುದರಿಂದ, ಅವರು ಶಿವೈಕ್ಯರಾದನಂತರ ಅವರ ಗದ್ದುಗೆಯ ಮೇಲೆ ಬೆಳ್ಳಿ ಅಥವಾ ತಾಮ್ರದ ಸರ್ಪಗಳನ್ನಿಟ್ಟು ಪೂಜಿಸ ಹತ್ತಿದರು. ಆ ಕರ್ತೃಗದ್ದಿಗೆಯ ಮಹಿಮಾಪ್ರಭಾವವು ಈಗ್ಯೂ ನಡೆಯು ತ್ತಿದೆ. ಈ ಮಠಕ್ಕೆ ಸಿದ್ಧೇಶ್ವರಮಠವೆಂದು ಹೆಸರು.

ಪ್ರತಿವರ್ಷದ ಶ್ರಾವಣಮಾಸದಲ್ಲಿ ಭಕ್ತಾದಿಗಳು ಗದ್ದಿಗೆಗೆ ವಿಶೇಷ ಅಲಂಕಾರ ಪೂಜೆಯನ್ನು ಮಾಡಿಸುವರಲ್ಲದೆ ಜಂಗಮಾರಾಧನೆಯನ್ನು ಮಾಡಿಸಿ ತೃಪ್ತಿಪಡಿಸುವರು.

## ತಂದೆತಾಯಿಗಳ ವಿಚಾರಮಾಲೆ

ಪೂರ್ವದಲ್ಲಿ ಮುಸ್ಲೀಮರ ಆಳ್ವಿಕೆ ಮೊದಲುಮಾಡಿಕೊಂಡು ಅನೇಕ ಜಾತೀಯ ರಾಜರು ಸ್ವಧರ್ಮಪ್ರತಿಷ್ಠೆಯಿಂದ ಇತರೆ ಧರ್ಮಗಳನ್ನು ಹತ್ತಿಕ್ಕಿ ಬಿಟ್ಟಿದ್ದರಮೂಲಕ ಆವಾಗಿನಿಂದಲೂ ನಮ್ಮ ವೀರಶೈವಮತವು ಕಳೆಗುಂದಿ ದಂತಾಗಿ ಅವೈದಿಕಧರ್ಮಗಳಂತೆ ಕಾಣುತ್ತಿದ್ದಿತು. ವೈದಿಕವಿದ್ಯಾರ್ಜನೆಗೆ ಎಡೆ ಇಲ್ಲದಂತಾಗಿ ಧಾರ್ಮಿಕಕಾರ್ಯಗಳನ್ನು ಅಪ್ರಸಿದ್ಧವಾಗಿ ಮಧ್ಯರಾತ್ರಿ ಯಲ್ಲಿ ಪೂರೈಸಿಕೊಳ್ಳುವ ಕಾಲವು ಅದಾಗಿತ್ತು. ಹೀಗೆಂದು ಧರ್ಮದ ದುರ ವಸ್ಥೆಯನ್ನು ಹೇಳುತ್ತಿದ್ದ ನಾಗನೂರು ಹಿರೇಮಠ (ಸಿದ್ಧೇಶ್ವರಮಠ) ದ ಶ್ರೀ ವೇ|| ಸಿದ್ಧಯ್ಯನವರು ಶಾಲಿವಾಹನ ಶಕ ೧೭೮೦ ರ ಸುಮಾರಿನಲ್ಲಿ ಜನಿಸಿ ಅಷ್ಟಾವರಣ–ಪಂಚಾಚಾರಗಳ ಸತ್ವದಲ್ಲಿ ಬೆಳೆದು ಹಗಲಿರುಳು ಧರ್ಮದ ಕಳಕಳಿಯುಳ್ಳವರಾಗಿ, ನಮ್ಮ ಸಮಾಜದಲ್ಲಿ ಸಂಸ್ಕೃತ ಶಿಕ್ಷಣವು ಸುಲಭವಾಗಿ ನಡೆದು ನಮ್ಮ ಗುರುವರ್ಗದವರು ದಿವ್ಯಪಂಡಿತರಾಗಿ ವೈದಿಕ ವಾಙ್ಮಯವನ್ನು ಪ್ರಚುರಗೊಳಿಸಿ ಮನ್ನಣೆ ಪಡೆಯುವುದನ್ನು ನಾನು ಎಂದು ಕಣ್ಣಾರೆ ಕಾಂಬೆನೆಂದು ಹಂಬಲಿಸುತ್ತಿದ್ದರು.

ವೇ|| ಸಿದ್ಧಯ್ಯನವರ ಧರ್ಮಪತ್ನಿಯವರಾದ ಶ್ರೀಮತಿ ನಾಗಮ್ಮ ನವರು ಕೂಡ ಧರ್ಮನಿಷ್ಠಾಪರರೂ, ಕುಶಲಮತಿಯುತರೂ ಆಗಿದ್ದು ತಮ್ಮ

ಪತಿದೇವರಲ್ಲಿ ಭಕ್ತಿಸಂಪನ್ನರಾಗಿ ವರ್ತಿಸುತ್ತಿದ್ದರು. ಈ ಸಾಧ್ವೀಶಿರೋಮಣಿಯಳು ಒಮ್ಮೆ ಒಳ್ಳೇ ವಿಚಾರಶೀಲಳಾಗಿ ಪತಿರ್ದೇವರು ಧರ್ಮಾಭ್ಯುದಯಕ್ಕಾಗಿ ಚಿಂತಿಸುತ್ತಿರುವುದನ್ನು ಕಂಡು ಸ್ವಾಮಿ! ಧರ್ಮಕ್ಕಾಗಿ ನಾವೊಬ್ಬರೇ ವೃಥಾ ಚಿಂತಿಸಿ ಫಲವಿಲ್ಲ. ಅದನ್ನು ಬೆಳೆಸುವ ಸ್ವತಂತ್ರ ಶಕ್ತಿ ನಮ್ಮ ಕೈಯ್ಯಲ್ಲಿಲ್ಲ. ನಾವು ಮೊದಲು ದೇವರಲ್ಲಿ ಅರಿಕೆಮಾಡಿಕೊಳ್ಳೋಣ; ಆ ಪರಮಾತ್ಮನ ಕೃಪೆಯಾದರೆ ಆವಾಗಲೆ ನಮ್ಮ ಧರ್ಮವು ಪೂರ್ವದ ವೈಭವ ಪಡೆಯುವುದರಲ್ಲಿ ಯಾವ ಅನುಮಾನವೂ ಇಲ್ಲ.

ಮುಗ್ಧೇ! ಶ್ರೀಜಗದ್ಗುರು ರೇಣುಕಾದಿಪಂಚಾಚಾರ್ಯರು ನಮ್ಮ ಧರ್ಮದ ಮೂಲಗುರುಗಳು. ಅವರು ನಮ್ಮ ಶ್ರೇಷ್ಠವಾದ ಈ ವೀರಶೈವ ಧರ್ಮವನ್ನು ಸ್ಥಾಪನೆಗೊಳಿಸಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಬೋಧಿಸಿದವರಾಗಿರುತ್ತಾರೆ. ಈ ಧರ್ಮವು ಸರ್ವಶ್ರೇಷ್ಠವಾದುದೆಂಬುದಕ್ಕೆ ಲಿಂಗಧಾರಣ, ಶಿವದೀಕ್ಷೆಗಳೇ ಸಾಕ್ಷಿಯಾಗಿವೆ. ಇವುಗಳಿಂದಲೇ ಮೋಕ್ಷ ಹೊಂದಲು ಸುಲಭ ಮಾರ್ಗಾವಲಂಬಿಗಳಾಗಿದ್ದೇವೆ. ಗುರುಗಳಿಂದ ಶಿವದೀಕ್ಷೆಯನ್ನು ಹೊಂದಿ ಷಟ್‌ಸ್ಥಲೋಪದೇಶವನ್ನು ಪಡಕೊಂಡವನಿಗೆ ಬಾಹ್ಯಕರ್ಮಗಳಾವುವೂ ಸಂಬಂಧವಾಗುವುದಿಲ್ಲ. ಅವನು ಲಿಂಗಾಂಗಸಮರಸದಿಂದ ಕೊನೆಗೆ ಐಕ್ಯನೆಂದು ಪ್ರಸಿದ್ಧಿಯಾಗಿ ಶಿವಸ್ವರೂಪನಾಗಿ ಕಾಣುತ್ತಾನೆ. ಇಂಥಾ ಮಹತ್ತರವಾದ ತತ್ವಗಳು ಯಾವ ಧರ್ಮದಲ್ಲಿಯೂ ಇಲ್ಲ.

ಓಹೋ ಪೂಜ್ಯರೆ! ಈ ತತ್ವಗಳು ಬಹಳ ಮಹತ್ವವಾದುವೆಂದು ಹೇಳುವುದು ಸತ್ಯವೇ ಸರಿ. ಆದರೆ ಶಿವದೀಕ್ಷಾಕಾರ್ಯವು ನಮ್ಮ ಹಳ್ಳಿಗಳಲ್ಲಿ ವಿಶೇಷ ಪ್ರಚಾರದಲ್ಲಿಲ್ಲವಲ್ಲ. ಯಾಕೆ?

ಸಾಧ್ವೀ! ಕೇಳು ಇದಕ್ಕೆ ಕೆಲವು ಕಾರಣಗಳುಂಟು. ಔರಂಗಜೇಬನ ಕಾಲದಲ್ಲಿ ಮುಸ್ಲೀಮರು ಹಿಂದುಗಳ ಧಾರ್ಮಿಕಕಾರ್ಯಗಳಿಗೆ ಆತಂಕ ಮಾಡಿದ್ದರಿಂದ ಅದನ್ನುಳಿಸಿಕೊಳ್ಳಲು ಮುಚ್ಚುಮರೆಯಾಗಿ ಈ ಕಾರ್ಯಗಳನ್ನು ಮಧ್ಯರಾತ್ರಿಯಲ್ಲಿ ಮಾಡಿಕೊಳ್ಳಬೇಕಾಯಿತು. ನಂತರ ಪೇಷ್ವೆಯವರ ಆಳ್ವಿಕೆಯಲ್ಲಿಯೂ ಕೂಡ ಅದೇ ಪ್ರಕಾರ ತೊಂದರೆ ಒದಗಿತು. ಆ ಕಾರಣದಿಂದ ವೀರಶೈವರು ಭಯಪಟ್ಟು ಶಿವದೀಕ್ಷಾದಿ ಕಾರ್ಯಗಳಿಗೆ ವಿಶೇಷ ಲಕ್ಷ ಕೊಡದವರಾದರು. ಅಂದಿನಿಂದ ಈ ಧಾರ್ಮಿಕ ಕಾರ್ಯಗಳು

ಬಹಳ ಹಿಂದುಳಿದು ಹೋದವು. ಈಗ ಪುನಃ ಪ್ರಚಾರದಲ್ಲಿ ತರುವುದು ಪ್ರಯಾಸವಾಗಿಬಿಟ್ಟಿದೆ. ಅದಕ್ಕಾಗಿ ನಮ್ಮವರು ಮೊದಲು ವಿದ್ಯಾವಂತರಾಗ ಬೇಕು.

ಯಜಮಾನರೇ! ಈ ಧರ್ಮದ ವಿಷಯವು ಬಹಳ ದೊಡ್ಡ ಪ್ರಮಾಣದಲ್ಲಿರುವುದು. ಅದಕ್ಕಾಗಿ ಆಲೋಚಿಸದೆ ಮೊದಲು ಮನೆಗೆದ್ದು ಮಾರುಗೆದಿಯಬೇಕೆಂಬುವ ನಾಣ್ಣುಡಿಯಂತೆ ನಡೆಯುವುದೇ ವಿಹಿತ.

ಸಾಧ್ವೀ ಅದಾವುದು?

ಸ್ವಾಮಿ! ನಮಗೆ ಸಂತಾನವಿಲ್ಲವೆಂಬ ಬಂಜೆತನವೇ ಚಿಂತೆಯಾಗಿ ಹಗಲಿರುಳು ಕಾಡುತ್ತಿದೆ. ಈ ಬಗ್ಗೆ ತಾವು ಸ್ವಲ್ಪವೂ ಕೂಡ ಯೋಚನೆ ಮಾಡಲೊಲ್ಲಿರಿ. ಯಾವ ವ್ರತನೇಮಾದಿಗಳನ್ನು ಮಾಡಿದರೆ ದೇವರ ಕೃಪೆಯಾದೀತೆಂಬುದನ್ನು ಕೂಡ ಹೇಳಿಕೊಡಲೊಲ್ಲಿರಿ. ಮುಂದೆ ಮುಂದೆ ನಮ್ಮ ದೈವಭಾಗ್ಯ ಹೇಗಿದೆಯೋ ಎಂದು ಮಿಡುಕಿದಳು.

ಮಾನಿನೀ! ಕೇಳು·ನಮ್ಮನ್ನು ಬಿಟ್ಟು ಧರ್ಮವಿಲ್ಲ. ಧರ್ಮವನ್ನು ಬಿಟ್ಟು ನಾವಿಲ್ಲ. ನಾವು ವೀರಮಾಹೇಶ್ವರ ಜಂಗಮರು· ಭಕ್ತರನ್ನುದ್ಧರಿಸುವವರು. ಈ ಕಾರಣದಿಂದ ಮುಂದೆ ಧರ್ಮೋದ್ಧಾರಕ್ಕಾಗಿ ಹೊರಡುವ ದಿವ್ಯಧರ್ಮಮೂರ್ತಿಯೊಂದು ನಮಗೆ ಬೇಕಾಗಿದ್ದು ಅಂಥ ಪುತ್ರರತ್ನವೇ ನಮ್ಮ ಹೊಟ್ಟೆಯಲ್ಲಿ ಹುಟ್ಟುವುದು ಆಗತ್ಯವಾದ್ದರಿಂದ ನೀನು ನಮ್ಮ ಮಠದಲ್ಲಿರುವ ಗುರುಗಳ ಕರ್ತೃಗದ್ದಿಗೆಗೂ ಅಲ್ಲಿಯೇ ಸಮೀಪದಲ್ಲಿರುವ ಬಿಲ್ವವೃಕ್ಷಕ್ಕೂ ನಿತ್ಯಪೂಜಾದಿಗಳನ್ನು ಮಾಡಿ ಬೇಡಿಕೋ. ಹೀಗೆ ಮೂರು ತಿಂಗಳಮೇಲೆ ಹನ್ನೊಂದು (ನೂರೊಂದು) ದಿವಸಗಳವರೆಗೂ ಭಕ್ತಿಯಿಂದ ನಡೆದುಕೊಳ್ಳುವವಳಾಗು. ಅಂದರೆ ನಿನ್ನ ಬಯಕೆ ಈಡೇರುವುದರಲ್ಲಿ ಸಂದೇಹವಿಲ್ಲ. ಈ ಸಂಪ್ರದಾಯವು ಪೂರ್ವದಿಂದಲೂ ಬಂದುದಾಗಿದೆಯೆಂದು ಹೇಳಿದರು.

ಸ್ವಾಮೀ? ಹಾಗೇ ಆಗಲಿ, ಎಂದು ಮರುದಿವಸ ಬೆಳಿಗ್ಗೆ ಆ ಸಾಧ್ವಿಯು ಸ್ನಾನ ಪೂಜೆಗಳನ್ನು ಮುಗಿಸಿ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಶ್ರೀ ಸಿದ್ಧೇಶ್ವರಸ್ವಾಮಿಯ ಗದ್ದುಗೆ ಪೂಜೆಯನ್ನು ಭಕ್ತಿಯಿಂದ ನೆರವೇರಿಸಿದಳು. ಕೈಮುಗಿದು ದೃಢಚಿತ್ತದಿಂದ ಸ್ವಾಮೀ ನಮ್ಮ

ಹೊಟ್ಟೆಯಲ್ಲಿ ಧರ್ಮಸುಧಾರಿಸುವ ವಿದ್ವದ್ವಿಭೂತಿಯು ಉದಿಸುವಂತೆ ಕೃಪೆಮಾಡಬೇಕೆಂದು ಪ್ರಾರ್ಥಿಸಿಕೊಂಡಳು. ಇದೇ ರೀತಿ ಆ ನಾಗವ್ವನು ಯಜಮಾನರ ಸಂಕಲ್ಪದಪ್ರಕಾರ ಯಥಾವತ್ ಪೂಜೆಮಾಡಲಾರಂಭಿಸಿದಳು.

ಹೀಗಿರುತ್ತಿರಲು ಒಂದಾನೊಂದು ದಿವಸ ತ್ರಿಲೋಕಸಂಚಾರಿಯಾದ ನಾರದ ಮಹರ್ಷಿಯು ಭೂಲೋಕಕ್ಕೆ ಬಂದು ತನ್ನ ದಿವ್ಯದೃಷ್ಟಿಯಿಂದ ಎಲ್ಲಾ ಕಡೆಗೂ ಗಮನ ಕೊಟ್ಟು ವಿಚಾರಪರನಾಗಿರಲು ನಾಗನೂರಿನ ಹಿರೇಮಠದ ದಂಪತಿಗಳು ಧರ್ಮದೇಳ್ಗೆಗಾಗಿ ಸುಪುತ್ರನುದಿಸಲೆಂದು ಅನನ್ಯ ಭಕ್ತಿಭಾವನೆಯಿಂದ ಪ್ರಾರ್ಥಿಸುತ್ತಿಪ್ಪುದನ್ನು ಕಂಡು ಆಶ್ಚರ್ಯಪಟ್ಟನು. ಓಹೋ! ಎಂಥ ವಿಚಿತ್ರವಿದು; ಇವರು ಧರ್ಮೋತ್ತೇಜನ ಮಾಡುವ ಮಗುವನ್ನು ಬೇಡುತ್ತಾರಲ್ಲಾ; ಇಂಥ ಬಯಕೆಯನ್ನು ನಾನೆಲ್ಲಿಯೂ ಕಂಡಿರುವುದಿಲ್ಲ. ಇದು ಇವರ ಪಕ್ವಕಾಲ; ಆಗಲಿ! ಇದನ್ನು ಕೈಲಾಸಪತಿ ಶಂಕರನ ಸನ್ನಿಧಿಯಲ್ಲಿ ಅರಿಕೆಮಾಡಿಕೊಳ್ಳಬೇಕೆಂದು ಕೈಲಾಸಕ್ಕೆ ತೆರಳಿ ಪರಶಿವನ ಪಾದಕ್ಕೆ ಸಾಷ್ಟಾಂಗ ಪ್ರಣಾಮಗಳನ್ನಿತ್ತು ಕೈಜೋಡಿಸಿಕೊಂಡು ನಿಂತನು. ಆಗ ಪರಮೇಶ್ವರನು ಗಂಧರ್ವರ, ಕಿನ್ನರರ ಮಧುರ ಗಾನ ಕೇಳುವುದನ್ನು ಬಿಟ್ಟು ಥಟ್ಟನೇ ನಾರದನನ್ನು ನೋಡಿ ಮಂದಹಾಸ ಬೀರಿ ಏನು ನಾರದ! ನೀನು ಭೂಲೋಕಕ್ಕೆ ಹೋಗಿ ಯಾವ ಸಮಾಚಾರ ತಂದಿರುವೆ; ಅದೆಲ್ಲವನ್ನು ಅರಿಕೆಮಾಡಿಕೊಳ್ಳಬೇಕೆಂದು ಆಜ್ಞಾಪಿಸಿದನು.

ನಾರದ ಮಹರ್ಷಿಯು ಪರಮೇಶ್ವರನ ದಿವ್ಯ ಆಜ್ಞೆಯನ್ನು ಮನ್ನಿಸಿ ಧರ್ಮೋದ್ಧಾರದ ಕಾರ್ಯ ಸಾಧಿಸಿಕೊಳ್ಳಲು ಒಳ್ಳೇ ಸನ್ನಿವೇಶ ಪ್ರಾಪ್ತವಾಯಿತೆಂದು ಸಂತೋಷಪಟ್ಟು ಸ್ವಾಮೀ ನಾಗನೂರು ಹಿರೇಮಠದ ದಂಪತಿಗಳು ಧರ್ಮಾಭ್ಯುದಯಕ್ಕಾಗಿ ವಿದ್ವನ್ಮಣಿಯು ತಮ್ಮ ಉದರದಲ್ಲಿ ಹುಟ್ಟಲೆಂದು ವ್ರತನಿಷ್ಠರಾಗಿ ಹಗಲಿರುಳು ನಿನ್ನ ಪೂಜ್ಯ ಪಾದಸ್ಮರಣೆಯಲ್ಲಿ ಕಾಲಹರಣ ಮಾಡುತ್ತಲಿದ್ದಾರೆ. ಎಂದು ಪ್ರಾರ್ಥಿಸಿಕೊಂಡದ್ದಕ್ಕೆ ಶಿವನು ಅವರು ಮಾಡುವ ಅರಿಕೆ ಸತ್ಯವಾದುದೇ ನಾರದ? ಎಂದು ಅಪ್ಪಣೆ ಕೊಡಿಸಿದನು. ಆಗ ನಾರದನು ಮಹಾಸ್ವಾಮಿ! ಆ ದಂಪತಿಗಳ ಮಹತ್ವಾಕಾಂಕ್ಷೆಯು ನಿಜವಾಗಿಯೂ ಸತ್ಯವೆಂದು ಹೇಳುವೆ; ಇದರಲ್ಲಿ ಯಾವ ಸಂಶಯವಿಲ್ಲ. ಅಲ್ಲಿ ನಾಸ್ತಿಕರ ಹಾವಳಿ ಹೆಚ್ಚಾಗಿದ್ದು ವೀರಶೈವರಲ್ಲಿ ಅವೈದಿಕ ವರ್ತನೆ ಬೆಳೆಯಹ

ತ್ತಿದೆ. ಇದರಿಂದ ವೀರಶೈವ ಸಮಾಜವು ಮನಬಂದಂತೆ ನಡೆಯಲಾರಂಭಿಸಿ ವೀರಶೈವ ಮತಾಚಾರ್ಯರ ಪ್ರಕಾಶವು ಬಹಳ ಕಡಿಮೆಯಾಗಿದೆ. ನಿಜವಾದ ವೀರಶೈವ ಸಿದ್ಧಾಂತವು ನಾಮಶೇಷವಾಗತೊಡಗಿದೆ. ಇವೆಲ್ಲ ಸಮಸ್ಯೆಗಳು ಕೂಡಲೇ ಪರಿಹಾರವಾಗಬೇಕಾಗಿದೆ ಮಹಾಸ್ವಾಮಿ! ಎಂದು ನಾರದನು ಪ್ರಾರ್ಥಿಸಿಕೊಂಡನು.

ದಯಾಘನನಾದ ಪರಮೇಶ್ವರನು ಒಳ್ಳೇ ಪ್ರಸನ್ನ ಹೃದಯನಾಗಿ ನಾರದನು ಅರಿಕೆಮಾಡಿಕೊಂಡ ವಿಷಯವನ್ನು ಚಿತ್ತೈಸಿ ಆ ಕ್ಷಣವೇ ತನ್ನ ಪ್ರೀತಿಯ ಮಗನಾದ ಷಣ್ಮುಖನನ್ನು ಕರೆದು, ಕುಮಾರಾ! ನೀನು ಭೂಲೋಕದಲ್ಲಿ ಜಂಗಮರೂಪದಿಂದವತರಿಸಿ ನಾಗನೂರು ಗ್ರಾಮಕ್ಕೆ ಹೋಗಿ ಅಲ್ಲಿ ಹಿರೇಮಠದ ಸಿದ್ಧಯ್ಯ (ಸಿದ್ಧೇಶ್ವರಯ್ಯ) ಹಾಗು ನಾಗವ್ವ (ನಾಗಾಂಬೆ) ದಂಪತಿಗಳ ಮಹತ್ವಾಕಾಂಕ್ಷೆಯನ್ನು ಪೂರೈಸಿ ಬಾ; ಅದು ವೀರಶೈವಧರ್ಮದ ಉತ್ತೇಜನಕ್ಕಾಗಿ ನಿಮ್ಮಂಥ ಗಣಾಧೀಶ್ವರರು ಅವಶ್ಯ ಕೈಕೊಳ್ಳತಕ್ಕ ಕರ್ತವ್ಯವಾಗಿದೆ. ಕಾರಣ ನೀನು ಈ ಕ್ಷಣವೇ ತೆರಳೆಂದು ಆಜ್ಞಾಪಿಸಿದನು.

## ಗುರು (ಜಂಗಮ) ಮೂರ್ತಿಯ ಆಶೀರ್ವಾದ

ಷಣ್ಮುಖನು ಆ ಪರಮಪೂಜ್ಯ ತಂದೆಯ ಅಪ್ಪಣೆಯನ್ನು ಶಿರೋಭೂಷಣವಾಗಿರಿಸಿಕೊಂಡು ಸನ್ನಿಧಿಯಲ್ಲಿ ಸಾಷ್ಟಾಂಗ ಪ್ರಣಾಮವನ್ನರ್ಪಿಸಿ ಒಡ್ಡೋಲಗದ ಮಂಗಲಜಯಘೋಷದೊಡನೆ ಸಂಭ್ರಮದಿಂದ ಭೂಲೋಕಕ್ಕೆ ತೆರಳುತ್ತಲೇ ಭೂಲೋಕದಲ್ಲಿ ಪರಮ ಮುಕ್ತಿಕ್ಷೇತ್ರವೆನಿಸಿರುವ ಶ್ರೀಮದ್ವಾರಣಾಸೀ ಕ್ಷೇತ್ರದಲ್ಲಿ ಜಂಗಮ ರೂಪದಿಂದವತರಿಸಿ ಅಲ್ಲಿ ಶ್ರೀವಿಶ್ವನಾಥನ ಸನ್ನಿಧಿಯಲ್ಲಿ ಕೆಲವು ದಿವಸ ಪೂಜಾನುಷ್ಠಾನಗಳಿಂದ ವಿಶ್ರಾಂತಿ ಹೊಂದಿ ಶ್ರೀಮಜ್ಜಂಗಮವಾಡಿ ಮಠದಲ್ಲಿ ಕೆಲವು ದಿವಸ ಹಗಲಿರುಳು ಅಗೋಚರನಾಗಿ ಶಿವಯೋಗದಲ್ಲಿದ್ದನು.

ಮುಂದೆ ಆ ಜಂಗಮಮೂರ್ತಿಯು ಅಲ್ಲಿಂದ ಹೊರಡುವ ಮೊದಲು ಆ ಮಠದಲ್ಲಿದ್ದ ಶ್ರೀಜಗದ್ಗುರು ವಿಶ್ವಾರಾಧ್ಯಪೀಠಾಧಿಪತಿಗಳನ್ನು ಸಂದರ್ಶಿಸಿ

ಅವರೊಡನೆ ಧರ್ಮೋದ್ಧಾರದ ವಿಚಾರದಲ್ಲಿ ಸಂಭಾಷಣೆಗಳನ್ನು ನಡೆಸಿದ ನಂತರ ಇದಕ್ಕಾಗಿಯೇ ದಕ್ಷಿಣದೇಶದ ಕರ್ನಾಟಕದಲ್ಲಿ ಸಗೋತ್ರೀಯನಾಗಿ ಉದಿಸಿದ ವ್ಯಕ್ತಿಯೋರ್ವನು ಕಾಲಾನಂತರ ತಾನಾಗಿಯೇ ನಿಮ್ಮ ಪೀಠಕ್ಕೆ ವಿದ್ಯಾವ್ಯಾಸಂಗಕ್ಕೋಸ್ಕರ ಆಗಮಿಸುವನು. ಆಗ್ಗೆ ನನ್ನ ಈ ಯೋಗದಂಡವನ್ನು ಅವನಿಗೆ ಅನುಗ್ರಹಿಸಿರಿ. ಅದರಿಂದ ಅವನು ಸರ್ವರೀತಿಯಲ್ಲಿ ವೀರಶೈವ ಧರ್ಮವನ್ನೂ ಧರ್ಮಪೀಠಗಳನ್ನೂ ಉದ್ಧರಿಸುವನೆಂದು ಹೇಳುತ್ತ ಕೈಯ್ಯಲ್ಲಿದ್ದ ಯೋಗದಂಡವನ್ನು ಜಗದ್ಗುರುಗಳಿಗೆ ಸಲ್ಲಿಸಿದನು. ಅನಂತರ ಹಾಗೇ ಸಂಚರಿಸುತ್ತ ಅನೇಕಪುಣ್ಯಕ್ಷೇತ್ರಗಳನ್ನು ಸಂದರ್ಶಿಸುತ್ತಾ ಕರ್ಣಾಟಕಪ್ರದೇಶಕ್ಕೆ ಆಗಮಿಸಿ ಧಾರವಾಡ ಜಿಲ್ಲೆಗೆ ಸೇರಿದ ನಾಗನೂರಿಗೆ ಬಿಜಯಂಗೈದನು. ಅಲ್ಲಿ ಹುಚ್ಚು ಜಂಗಮನಾಗಿ ತಿರುಗಿ ತಿರುಗಿ ಹಿರಿಯ(ಹಿರೇ)ಮಠವನ್ನು ಹೊಕ್ಕನು. ಆಗ ಸೂರ್ಯೋದಯವಾಗಿ ಐದುಘಳಿಗೆಯಾಗಿತ್ತು. ಸಿದ್ಧಯ್ಯ-ನಾಗವ್ವ ದಂಪತಿಗಳು ಸ್ನಾನ ಪೂಜೆ ತೀರಿಸಿಕೊಂಡು ಸಿದ್ಧೇಶ್ವರಸ್ವಾಮಿ ಗದ್ದುಗೆಯ ಪೂಜೆಯನ್ನು ಸಂತೋಷದಿಂದ ಮಾಡಹತ್ತಿದ್ದರು. ಅವರನ್ನು ಕಂಡು ಜಂಗಮಮೂರ್ತಿಯು ಶಂಭೋ, ಶಂಕರ, ಮಹಾದೇವ, ದಯಾನಿಧೆ ಮನೋರಥ ಸಿದ್ಧಿರಸ್ತು ಎಂದು ನುಡಿದನು. ಈ ಶಬ್ದವನ್ನು ಕೇಳಿದ ಆ ದಂಪತಿಗಳು ಆಶ್ಚರ್ಯಪಟ್ಟು ಅತ್ತಿತ್ತ ನೋಡಿದರು. ತಮ್ಮ ಹಿಂಬದಿಯಲ್ಲಿಯೇ ನಿಂತಿದ್ದ ಜಂಗಮ ಮೂರ್ತಿಯು ಕಾವಿಲಾಂಛನದಿಂದಲೂ, ಭಸ್ಮರುದ್ರಾಕ್ಷಿಗಳಿಂದಲೂ, ಶೋಭಿಸುತ್ತ ಜಟಾಧಾರಿಯಾಗಿಯೂ, ಭಿಕ್ಷಾಪಾತ್ರೆಯುಳ್ಳವನಾಗಿಯೂ ಕಂಡನು. ಇಂಥ ದಿವ್ಯಜಂಗಮಮೂರ್ತಿಯನ್ನು ಕಂಡ ಆ ದಂಪತಿಗಳು ರೋಮಾಂಚನ ಹೃದಯರಾಗಿ ಸಂತೋಷಸಾಗರವು ಮುಖದಿಂದ ಹೊರಸೂಸುತ್ತದೆಂಬುವಂತೆ ನಗೆಮುಖಗಳನ್ನು ಬೀರುತ್ತಾ ಹಾ! ಗುರುವೆ ನಿನ್ನ ಪಾದವೇ ಗತಿಯೆಂದು ಹಾಡಿ ಹರಿಸಿ ಶ್ರೀಪಾದಕ್ಕೆ ಅಭಿವಂದಿಸಿ ಉಚ್ಚಾಸನದಲ್ಲಿ ಕೂಡ್ರಿಸಿ ಕರಮುಗಿದು ಕಿಂಕರಭಾವನೆಯಿಂದ ಸ್ವಾಮಿ! ತಾವು ಎಲ್ಲಿಯವರು, ಬಂದ ಕಾರಣವೇನು? ಎಂದು ಕೇಳಿಕೊಂಡರು. ಆಗ ಗುರುಮೂರ್ತಿಯು ಹಸನ್ಮುಖನಾಗಿ ಅಪ್ಪ, ಅಮ್ಮ, ನಮಗೆ ತಂದೆ ತಾಯಿಗಳ ನೆನಪಿಲ್ಲ; ಮನೆಮಾರುಗಳಿಲ್ಲ; ಚಿಕ್ಕಂದಿನಿಂದಲೂ ಕಾಶೀಕ್ಷೇತ್ರದಲ್ಲಿದ್ದು ಹೀಗೇ ಸಂಚರಿಸುತ್ತಾ ಆಕಸ್ಮಿಕವಾಗಿ ನಿಮ್ಮಲ್ಲಿಗೆ ಬಂದದ್ದಾಗಿದೆ. ನೀವುಗಳಾದರೂ ಭಕ್ತಿಸಂಪನ್ನರಾಗಿ, ಧರ್ಮನಿಷ್ಠರಾಗಿ ವರ್ತಿಸುವಂತೆ

ತೋರುತ್ತದೆ. ನಿಮ್ಮನ್ನು ನೋಡಿ ಬಹಳ ಸಂತೋಷವಾಯಿತೆಂದು ಹೇಳಿದನು.

ಅನಂತರ ದಂಪತಿಗಳು ಲಗುಬಗೆಯಿಂದ ಗೃಹಕ್ಕೆ ಬಂದು ಗುರುಗಳನ್ನು ಸ್ನಾನಕ್ಕೆ ಬಿನ್ನೈಸಿಕೊಂಡರು. ಆವಾಗ್ಗೆ ಗುರುಗಳು ಸಂತೋಷಪಟ್ಟು ಅಪ್ಪ ನೀವು ಮಾಡುವ ಕರ್ತವ್ಯವೇನು? ನಿಮ್ಮ ಎಲ್ಲಾ ಯೋಗಕ್ಷೇಮವನ್ನು ನಮಗೆ ತಿಳುಹಿಸಿಕೊಡಿರಿ ಅನಂತರ ನಿಮ್ಮ ಆದರಾತಿಥ್ಯವನ್ನು ನಾವು ಒಳ್ಳೇ ಸಂತೋಷದಿಂದ ಸ್ವೀಕರಿಸುತ್ತೇವೆಂದು ಅಭಿವಚನವನ್ನಿತ್ತರು. ಅವರಿತ್ತ ಅಪ್ಪಣೆಗೆ ದಂಪತಿಗಳು ಶಿರಬಾಗಿ ಕರಮುಗಿದು ಗುರುದೇವ? ನಾವು ಈ ಗ್ರಾಮದ ಹಿರೇಮಠದಯ್ಯನವರು. ವೀರಮಾಹೇಶ್ವರವರ್ಗಕ್ಕೆ ಸೇರಿದ ಜಂಗಮರು. ಶಿಷ್ಯವರ್ಗಕ್ಕೆ ಅಷ್ಟಾವರಣ-ಪಂಚಾಚಾರ-ಷಟ್‌ಸ್ಥಲಗಳ ಬೋಧೆಯನ್ನಿತ್ತು ಪುನೀತರನ್ನಾಗಿ ಮಾಡುವವರು. ಹೀಗಿದ್ದರೂ ಈ ನಮ್ಮ ವೀರಶೈವ ಗುರುವರ್ಗದಲ್ಲಿ ಸಂಸ್ಕೃತ ವಿದ್ಯೆಯ ಶಿಕ್ಷಣ ಪ್ರಚಾರವು ಇಲ್ಲದ್ದರಿಂದ ವೈದಿಕ ಕರ್ಮಗಳು ಲೋಪವಾಗುತ್ತ ಬಂದಿವೆ. ಮತ್ತು ಗೋತ್ರಸೂತ್ರಗಳಿಲ್ಲದ ಹೀನಮಾನವರು ಜಂಗಮವೇಷಧಾರಿಗಳಾಗಿ ಭಕ್ತರನ್ನು ಮೋಸಗೊಳಿಸುತ್ತ ನಮ್ಮ ಗುರುವರ್ಗಕ್ಕೆ ಕುಂದುತರತಕ್ಕವರಾಗಿದ್ದಾರೆ. ಅಲ್ಲದೆ ನಾಸ್ತಿಕ ಪಂಥದ ಕೆಲವರು ಶ್ರೀಜಗದ್ಗುರು ಪಂಚಾಚಾರ್ಯರನ್ನೂ ಪವಿತ್ರವಾದೀ ವೀರಮಾಹೇಶ್ವರ ವಂಶವನ್ನೂ ಅಲ್ಲಗಳೆಯುವ ಕುತ್ಸಿತ ಬುದ್ಧಿಯಿಂದ ಅನೇಕ ಪ್ರಕಾರ ಹೀಯಾಳಿಸುತ್ತಿರುವರು. ಮತ್ತು ಸಕಲ ಜಾತಿಸಾಂಕರ್ಯವನ್ನು ಸಾಧಿಸುತ್ತಿರುವರು. ಇದು ನಮಗೆ ಸಹಿಸದಂತಾಗಿ ಇವುಗಳ ಚಿಂತೆ ಅಧಿಕವಾಗಿ ಪೀಡಿಸುತ್ತಿದೆ. ಸ್ವಾಮಿ? ಹೀಗೆಲ್ಲ ಆಚರಿಸುವುದು ಪಾಪವಲ್ಲವೆ? ತಾವೇ ತಿಳುಹಿಸಿ ಕೊಡಬೇಕು.

ಅಪ್ಪ! ನೀನು ಒಳ್ಳೇ ವಿಚಾರವಂತನಿದ್ದೀಯೆ; ನಿನಗಾವುದು ತಿಳಿಯದ್ದಿದೆ. ಇನ್ನು ಮುಂದೆ ಬರುವ ಕಾಲದಲ್ಲಿ ನಾಸ್ತಿಕ ಪಂಥವು ಹೆಚ್ಚಾಗಿ ಹೋಗುತ್ತದೆ. ಅದರಿಂದ ಅಧರ್ಮಬುದ್ಧಿಯು ಪ್ರತಿಯೊಬ್ಬರಲ್ಲಿ ಪ್ರಬಲವಾಗತೊಡಗುತ್ತದೆ. ಇದು ಕಲಿಯ ಸೊತ್ತಾಗಿದ್ದರೂ ನಮ್ಮ ಶಿವಧರ್ಮವು ಮಾತ್ರ ಎಂದೂ ಲೋಪವಾಗಲಾರದು; ಧರ್ಮಕರ್ತೃವಾದ ಪರಮಾತ್ಮನು

ತನ್ನ ಧರ್ಮವನ್ನು ಕಾಯ್ದುಕೊಳ್ಳಲು ಸರ್ವಸಮರ್ಥನಾಗಿದ್ದಾನೆ. ಧರ್ಮ ವೃದ್ಧಿಗೆ ಶಿವನು ತನ್ನ ಸತ್ಯಸ್ವರೂಪವನ್ನನುಗ್ರಹಿಸಿ ಆಯಾಯ ಕಾಲಕ್ಕೆ ವೀರಮಾಹೇಶ್ವರರು ಉದಿಸುವಂತೆ ಕೃಪೆಮಾಡುತ್ತಾನೆ. ಹೀಗೆ ಉದಿಸಿದ ಆ ಪರಶಿವನ ಕೃಪಾಂಶಸಂಭೂತರಾದ ವೀರಮಾಹೇಶ್ವರರು ಧರ್ಮವನ್ನು ಸರ್ವತೋಮುಖವಾಗಿ ಶಿವಾಗಮ ಪದ್ಧತಿಯಂತೆ ಅಭಿವೃದ್ಧಿಗೊಳಿಸಲು ಸಮರ್ಥರಾಗುತ್ತ ಬಂದಿದ್ದಾರೆ. ಅಂದರೇನೆ ಇಲ್ಲಿಯ ವರೆಗೂ ವೀರಶೈವ ಧರ್ಮ ಚ್ಯುತಿಯಾಗದಂತೆ ಉಳಿದಿದೆ. ಇದು ಶಿವಶಾಸನವೆಂದು ತಿಳಿ ಎಂದನು.

ಸ್ವಾಮಿ, ತಾವು ಹೇಳುವುದೆಲ್ಲವೂ ನಿಜವು. ಆದರೆ ಸದ್ಯಃ ಬಂದೊದಗಿದ ವಿಷಣ್ಣಾವಸ್ಥೆಯನ್ನು ನಿವಾರಿಸುವ ಬಗೆಯೆಂತು; ಅದನ್ನು ಚನ್ನಾಗಿ ಕೃಪೆ ಮಾಡಬೇಕು.

ಅಪ್ಪಾ ನಿಮಗಿರುವ ಈ ಸಂದೇಹವನ್ನು ಸರಳವಾಗಿ ನಿವಾರಿಸುತ್ತೇನೆ. ಪರಂತು ನಿಮಗೆ ಮತ್ತಾವುದಾದರೂ ಬಯಕೆ ಉಂಟೆ? ನಿದಾನವಾಗಿ ಆಲೋಚನೆಮಾಡಿದಲ್ಲಿ ನಾನು ನಿಮ್ಮ ಬಯಕೆಗಳೆಲ್ಲವನ್ನೂ ಪೂರೈಸುತ್ತೇನೆ; ನಿಸ್ಸಂದೇಹವಾಗಿ ಹೇಳಿರಿ ಎಂದ ಗುರುವಿನ ಮಹಾವಾಕ್ಯಗಳನ್ನು ಕೇಳಿ, ಆನಂದಭರಿತರಾದ ದಂಪತಿಗಳು ಕಂಪಿತ ಹೃದಯರಾಗಿ ಪೂಜ್ಯರೆ? ನಮಗೆ ಪುತ್ರಸಂತಾನವಿಲ್ಲ. ಅದಕ್ಕಾಗಿ ಈ ಧರ್ಮದೇಳ್ಗೆ ಮಾಡುವಂಥ ವಿದ್ವನ್ಮಣಿಯಾದ ದಿವ್ಯ ಪುತ್ರನುದಿಸುವಂತೆ ನಮಗೆ ಅನುಗ್ರಹಿಸಬೇಕೆಂದು ಬೇಡಿಕೊಳ್ಳುತ್ತೇವೆ ಮಹಾಸ್ವಾಮಿ? ಎಂದು ಪ್ರಾರ್ಥಿಸಿದರು. ಈ ಅವರ ಪ್ರಾರ್ಥನೆಗೆ ಮೆಚ್ಚಿ ಗುರುಗಳು ಆನಂದಹೃದಯರಾಗಿ ಅಪ್ಪಾ ನಿಮ್ಮಂಥಾ ಸಹೃದಯ ದಂಪತಿಗಳನ್ನು ನಾವೆಲ್ಲಿಯೂ ಕಂಡಿಲ್ಲ. ಜಗತ್ತಿನಲ್ಲಿ ಸಕಲರೂ ಹೊನ್ನು, ಹೆಣ್ಣು, ಮಣ್ಣಿಗಾಗಿ ಮೋಹಾಂಧಕಾರದಲ್ಲಿ ಮುಳುಗಿ ಹಗಲಿರುಳು ಹೋರಾಡುತ್ತಿರುವರು. ಆದರೆ ನೀವು ಮಾತ್ರ ಕೇವಲ ಧರ್ಮಕ್ಕಾಗಿ ಚಿಂತಿಸುತ್ತ ವ್ರತನಿಷ್ಠರಾಗಿ ನಡೆಯುತ್ತಿರುವಿರಿ. ಇದು ಸಾಮಾನ್ಯವಾದ ವಿಷಯವಲ್ಲ. ಸಾಕ್ಷಾತ್ ಕೈಲಾಸಪತಿಯಾದ ಪರಮೇಶ್ವರನು ಚನ್ನಾಗಿ ಲಕ್ಷಿಸುವಂಥಾ ಈ ನಿಮ್ಮ ಧ್ಯೇಯಕ್ಕೆ ಅವನ ಕೃಪೆಯು ಶೀಘ್ರವಾಗಿ ಆಗುತ್ತದೆ; ಚಿಂತಿಸಬೇಡಿರಿ; ನಿಮ್ಮ ಉದರದಲ್ಲಿ ಒಳ್ಳೇ ಸುಪುತ್ರನುದಿಸುವನು.

ಅವನು ಪ್ರಸಿದ್ಧ ಪಂಡಿತನಾಗಿ ಬ್ರಹ್ಮಚರ್ಯತೇಜಸ್ಸಿನಿಂದಲೂ, ವಿದ್ವತ್ಪ್ರತಿಭಾ ಶಕ್ತಿಯಿಂದಲೂ, ಮತ್ತು ಗುರುಭಕ್ತಿ ಪ್ರಭಾವದಿಂದಲೂ ಅಥರ್ವಪದ್ಧತಿ ಯನ್ನು ಹೋಗಲಾಡಿಸಿ ಶಿವಾಗಮ ತತ್ವಗಳನ್ನು ಸಾರಿ ಸಾರಿ ಆಚಾರ್ಯ ಪುಂಗವರ ಮಹತ್ವವನ್ನು ದಿಗ್ದರ್ಶನಗೊಳಿಸಿ ವೀರಶೈವ ಸಿದ್ಧಾಂತದ ವೈಶಿಷ್ಟ್ಯವನ್ನು ಎತ್ತಿ ಹಿಡಿದು ಸಕಲರು ಮನ ಮೆಚ್ಚುವಂತೆ ಕಾಪಾಡುವನು. ಎಂದು ಅಮೃತವಾಣಿಯಿಂದ ಅಪ್ಪಣೆಕೊಟ್ಟು, ದಂಪತಿಗಳಿಗೆ ಫಲಾಶೀರ್ವಾದ ಮಾಡಿದನು.

ಆ ಬಳಿಕ ದಂಪತಿಗಳು ಗುರುಗಳ ಆಶೀರ್ವಾದಕ್ಕೆ ಬಹಳ ಸಂತೋಷ ಪಟ್ಟು, ಗುರುಮೂರ್ತಿಗೆ ಸ್ನಾನಮಾಡಿಸಿ ಆನಂದವಾಗಿ ಶಿವಪೂಜೆ ಅರ್ಪಿತ ಗಳನ್ನು ಪೂರೈಸಿದರು. ನಂತರ ಗುರುಮೂರ್ತಿಯು ದಂಪತಿಗಳಿಗೆ ಕೃಪೆದೋರಿ ಮುಂದಕ್ಕೆ ಪ್ರಯಾಣ ಬೆಳೆಸಿ ಶ್ರೀಮತ್ಪರಮಾತ್ಮನ ಅಪ್ಪಣೆಯ ಮೇರೆಗೆ ತನ್ನ ಕಾರ್ಯವು ಪುರೈಸಿತೆಂದು ಮನದಲ್ಲಿ ಸಂತೋಷಪಟ್ಟು ಕೊಂಡು ಹಾಗೆ ಸಂಚರಿಸುತ್ತ ಕಾಶೀಕ್ಷೇತ್ರಕ್ಕೆ ದಯಮಾಡಿಸಿ ಅಲ್ಲಿ ಶ್ರೀ ವಿಶ್ವನಾಥನ ದರ್ಶನ ಪಡಕೊಂಡು ಅಲ್ಲಿಯೇ ಅಂತರ್ಧಾನನಾದನು.

ಆಯಾಯ ಕಾಲಕ್ಕೆ ಪರಮ ವೀರಶೈವ ಧರ್ಮೋದ್ಧಾರಕಾರ್ಯ ಕ್ಕೋಸ್ಕರವಾಗಿ ಹೀಗೆ ಕೈಲಾಸದಿಂದ ಗಣಾಧೀಶ್ವರರು ಈ ಕರ್ಮಮಯ ವಾದ ಭೂಮಿಗೆ ಇಳಿದು ಕಷ್ಟನಷ್ಟಗಳನ್ನು ಸಹಿಸಿಕೊಂಡು ಧರ್ಮ ಕಾಪಾ ಡುತ್ತ ಬಂದಿರುವುದನ್ನು ನೋಡಿದರೆ, ಮಾನವಕೋಟಿಯ ಉದ್ಧಾರಕ್ಕಾಗಿ ಆ ಮಹಾತ್ಮರ ಅವತಾರವಾಗುತ್ತದೆಂದು ಧಾರಾಳವಾಗಿ ಹೇಳಬಹುದು.

ಈ ಪ್ರಕಾರ ದಂಪತಿಗಳು ಗುರುಗಳಾಶೀರ್ವಾದ ಬಲದಿಂದ ಒಳ್ಳೇ ಸಂತೋಷ ಹೃದಯರಾಗಿ ತಮ್ಮ ನಿತ್ಯ ನೇಮದಂತೆ ನಡೆಯುತ್ತಿರಲಿಕ್ಕೆ ಕೆಲವೇ ದಿವಸಗಳಲ್ಲಿ ಶ್ರೀಮತಿ ಕುಂ॥ ಶೋ॥ ನಾಗಮ್ಮನವರು ಗರ್ಭಚಿನ್ಹೆ ವುಳ್ಳವರಾದರು. ಆಗ ಪೂಜಾನಿಷ್ಠತೆ, ಶಾಸ್ತ್ರಶ್ರವಣಗಳೇ ಅವರ ಬಯಕೆ ಗಳಾಗಿದ್ದವು. ಬೆಳಿಗ್ಗೆ ಪೂಜಾ ಭೋಜನವಾದ ನಂತರ ಸಂಸಾರದ ಉದ್ಯೋಗದಲ್ಲಿ ನಿರತರಾಗುತ್ತಿದ್ದರು. ಉದ್ಯೋಗ ಮಾಡುವಾಗ್ಗೆ ಗುರುತತ್ವ ಪದಗಳನ್ನು ಹಾಡುತ್ತಿದ್ದರು. ಪ್ರತಿದಿವಸ ಸಾಯಂಕಾಲ ಪತಿದೇವರಿಂದ ತಮ್ಮ ಧರ್ಮಶಾಸ್ತ್ರಗಳನ್ನು ಕೇಳುವ ನೇಮವನ್ನು ತಪ್ಪದೆ ಆಚರಿಸು.

ತ್ರಿದ್ದರು. ದಯೆ, ಧರ್ಮ, ಶಾಂತಿ, ಸತ್ಯಶೀಲಗಳು ಇವರ ಮುಖದಲ್ಲಿ ಯಾವಾಗಲೂ, ಪ್ರವಾಹದಂತೆ ಹೊರಸೂಸುತ್ತಿದ್ದವು. ಶ್ರೀಮತಿಯು ಭಸ್ಮಧಾರಣ, ಕುಂಕುಮಧಾರಣ, ಇವುಗಳ ಮಂಗಲತ್ವದಿಂದಲೂ ಒಳ್ಳೇ ಮಂದಹಾಸದಿಂದಲೂ ಉದ್ಯೋಗವುಳ್ಳವಳಾಗಿ ಕಾಲಕಳೆಯುತ್ತಿದ್ದಳು. ಹೀಗೆ ದಿನಗಳೆಯುತ್ತಲೆ ಶ್ರೀಮತಿಯ ಗರ್ಭವು ಬಾಲಚಂದ್ರನಂತೆ ಬೆಳೆದು ಸರ್ವಾಂಗಪರಿಪೂರ್ಣವಾಗಿ ಜೀವಕಳೆಯಿಂದ ಕೂಡಿದೊಡನೆ ಎಂಟನೇ ತಿಂಗಳಲ್ಲಿ ನಡೆಯುವ ಸೀಮಂತಕಾರ್ಯ, ಗರ್ಭಕ್ಕೆ ಲಿಂಗಧಾರಣೆಮೊದಲಾದ ಕ್ರಿಯೆಗಳು ಧರ್ಮಶಾಸ್ತ್ರರೀತ್ಯಾ ತಮ್ಮ ಮಠದ ಶ್ರೀಗುರುಮೂರ್ತಿಗಳಿಂದ ನೆರವೇರಿಸಲ್ಪಟ್ಟ ನಂತರ ನವಮಾಸದಲ್ಲಿ ಕಾಲಿಟ್ಟವಳಾದಳು.

## ಕಾಶೀನಾಥನ ಜನನ

ಈ ಪತಿವ್ರತಾಶಿರೋಮಣಿಯಳ ತವರೂರು ಧಾರವಾಡ ಜಿಲ್ಲೆಯಲ್ಲಿ ಗದಗ ತಾಲೂಕಿಗೆ ಸೇರಿದ ನಾರಾಯಣಪುರ ಗ್ರಾಮವು. ಅಲ್ಲಿಯ ಹಿರೇ ಮಠದ ವೇ|| ಅಡವಯ್ಯನವರು ಇವಳ ಅಣ್ಣಂದಿರು. ಅವರು ಶ್ರೀಮತಿ ಕುಂ|| ಶೋ|| ನಾಗಮ್ಮನವರನ್ನು ತಮ್ಮ ಗ್ರಾಮಕ್ಕೆ ಕರೆತಂದರು. "ಜನನೀ ಜನ್ಮಭೂಮೀಚ ಸ್ವರ್ಗಾದಪಿ ಗರೀಯಸಿ" ಎಂಬುವಂತೆ ತಾಯಿ ಮತ್ತು ಜನ್ಮಭೂಮಿ ಇವೆರಡು ವಸ್ತುಗಳು ಹೆಣ್ಣುಮಕ್ಕಳಿಗೆ ಸ್ವರ್ಗಕ್ಕಿಂತಲೂ ಮಹತ್ವದ್ದಾಗಿ ಕಾಣುತ್ತವೆ. ಅದೇ ಪ್ರಕಾರ ನಾಗಮ್ಮನವರು ತವರುಮನೆಯಲ್ಲಿ ಬಹಳ ಆನಂದದಿಂದ ನಿತ್ಯಪೂಜಾದಿಗಳೊಂದಿಗೆ ಕಾಲಕಳೆಯುತ್ತಿರುವಾಗಲೇ ಪವಿತ್ರ ಗರ್ಭಕ್ಕೆ ಒಂಭತ್ತು ತಿಂಗಳು ಪೂರ್ತಿಗೊಂಡವು. ಶ್ರೀಶಾಲಿವಾಹನಶಕ ೧೮೧೮ ನೇ ಮನ್ಮಥನಾಮಸಂವತ್ಸರದ ಜ್ಯೇಷ್ಠ ಶುದ್ಧ ೪ ಮಂಗಳವಾರ (ಕ್ರಿಸ್ತಶಕ ತಾ|| ೨೮-೫-೧೮೯೫ ನೇ ಇಸ್ವಿ) ದಿವಸ ಶುಭ ಮುಹೂರ್ತದಲ್ಲಿ ಚಂದ್ರಪ್ರಭೆಯಂತಿರುವ ಗಂಡುಮಗುವನ್ನು ಹೆತ್ತಳು. ಹಿರಿಯ ಹೆಣ್ಣುಮಕ್ಕಳು ಬಾಣಂತಿಗೂ ಮಗುವಿಗೂ ಸ್ನಾನಮಾಡಿಸಿ ಉಷ್ಣೋಪಚಾರಗಳನ್ನು ಶ್ರದ್ಧೆಯಿಂದ ಮಾಡಿದವರಾದರು. ಅಂದಿನ ದಿನವೇ ಯಜಮಾನರಾದ ಶ್ರೀ ಶಿದ್ಧಯ್ಯನವರು ಸಗೋತ್ರೀಯ ಗುರುಗಳನ್ನು ಬರಮಾಡಿಕೊಂಡು ಮಗುವಿಗೆ ಲಿಂಗಧಾರಣಕ್ರಿಯೆಯನ್ನು ನಡೆಸಿದರು.

ಪಾದೋದಕ ಪ್ರಸಾದಗಳನ್ನು ಸೇವಿಸಿದರು. ಶ್ರೀಮತಿಯು ಬಾಣಂತಿಯಾಗಿದ್ದರೂ ಶಿವಪೂಜಾದಿಕ್ರಮುವನ್ನೂ ಗುರುವಿನ ಧ್ಯಾನವನ್ನೂ, ಬಿಡದೆ ಆಚರಿಸುತ್ತಿದ್ದಳು. ಆ ಮುದ್ದುಮಗುವಿನ ಮುಖಮಂಡಲವು ಚಂದ್ರನಂತೆ ಥಳಥಳ ಹೊಳೆಯುತ್ತ ಸುಜ್ಞಾನ ಪ್ರಭೆಯನ್ನು ಪಸರಿಸುತ್ತಿತ್ತು. ವಿಶಾಲ ಹೃದಯವು ಧರ್ಮದ ಉಗಮಸ್ಥಾನದಂತೆ ಶೋಭಿಸುತ್ತಿತ್ತು. ಮಗುವು ಒಂದೊಂದು ಸಮಯ ಎಚ್ಚತ್ತು ಹುಬ್ಬುಗಂಟಿಕ್ಕಿ ವಕ್ರದೃಷ್ಟಿಯಿಂದ ನೋಡುತ್ತಿದ್ದಾಗ ತನ್ನ ಅಂತರಂಗದಲ್ಲಿ ಧರ್ಮದೇಳ್ಗೆಗಾಗಿ ದೀರ್ಘಾಲೋಚನೆಯನ್ನು ಮಾಡುತ್ತಿದೆಯೋ ಏನೋ ಎಂಬುವ ಮುಖಮುದ್ರೆಯು ಸ್ಪಷ್ಟವಾಗಿ ಕಾಣುತ್ತಿತ್ತು. ಅಧರ್ಮಿಗಳನ್ನು ನಾನೀಗಲೇ ಬಗ್ಗುಬಡಿವೆನೆಂಬ ಭಾವದಿಂದ ಕೈಕಾಲುಗಳನ್ನು ಆಡಿಸುತ್ತ ತನ್ನ ವೀರಧ್ವನಿಯನ್ನು ಘೋಷಿಸುತ್ತಿತ್ತು. ವಿಶೇಷ ನಿದ್ರಿಸುತ್ತಿದ್ದಿಲ್ಲ. ವಿಶೇಷ ಅಳುತ್ತಿದ್ದಿಲ್ಲ. ಪದೆ ಪದೆ ಮೊಲೆಯುಂಬಬೇಕೆಂಬುವ ಅಭ್ಯಾಸವು ಮಗುವಿಗಿದ್ದಿಲ್ಲ. ಮಗುವು ದೀರ್ಘವಾಗಿದ್ದರೂ, ಭಾರವಾಗಿರಲಿಲ್ಲ. ಹೀಗಿರುವ ಶುಭಚಿಹ್ನೆಗಳು ಯಾವ ಮಕ್ಕಳಲ್ಲಿಯೂ ತೋರರೆಂಬುವ ಸುದಿಯು ಸಕಲರ ಮುಖದಿಂದ ತಿಳಿದು ಬರುತ್ತಿತ್ತು.

ಮಗುವಿನ ಲಕ್ಷಣವನ್ನು ಬಲ್ಲವರು ಈ ಮಗುವು ಮುಂದೆ ಪ್ರಭಾವಶಾಲಿಯಾಗುತ್ತದೆಂದು ನುಡಿಯುತ್ತಿದ್ದರು. ಹನ್ನೆರಡನೇ ದಿವಸದಲ್ಲಿ ಬಂಧುಬಳಗದವರು ಕೂಡಿ ತೊಟ್ಟಿಲ ಕಾರ್ಯವನ್ನು ಸಂಭ್ರಮದೊಡನೆ ಪೂರೈಸಿದ ನಂತರ ಕಾಶೀಜಂಗಮನ ವರಪ್ರಸಾದದಿಂದ ಹುಟ್ಟಿದ ಈ ಮಗುವಿಗೆ ಕಾಶೀನಾಥ ಎಂಬ ನಾಮಕರಣವನ್ನು ಮಾಡಿದರು. ಮಂಗಲಾಂಗಿಯರು ಕಂದನ ತೊಟ್ಟಿಲ ತೂಗುತ್ತಾ—

ಪರಿಶಿವ ಕುವರನೆ ಗುರುಕುಲ ರತ್ನನೆ ।
ಸರಸೀರುಹ ನೇತ್ರನೆ ಜೋ ಜೋ ॥
ವರಕಾಶಿಜಂಗಮನ ಕುರುಹಿನಿಂಮುದಿಸಿದ ।
ಶ್ರೀ ಕಾಶೀನಾಥನೆ ಜೋ. ಜೋ ॥೧॥

ಎಂದು ಹಾಡಿ ಹರಸಿದರು.

# ಬಾಲ್ಯಜೀವನ

ತಾಯಿಯು ಮಗುವನ್ನು ಬಹು ಪ್ರೀತಿಯಿಂದ ಸಲಹುತ್ತಿದ್ದಳು. ಮಗುವಿಗೆ ದಿನಾಲು ಭಸ್ಮವನ್ನು ಧರಿಸಿ ಸ್ವಚ್ಛವಾದ ವಸ್ತ್ರಗಳನ್ನು ಹೊದಿಸುತ್ತಿದ್ದಳು. ಎಳೆ ಮಗುವಾಗಿದ್ದರೂ ಲಿಂಗರುದ್ರಾಕ್ಷಿಗಳನ್ನು ಸದಾ ಹಾಕುತ್ತಿದ್ದಳು. ಹೀಗೆ ಅಷ್ಟಾವರಣಭೂಷಿತನಾದ ಮಗುವು ಜ್ಞಾನಪೂರ್ಣನಾದ ಷಣ್ಮುಖನಂತೆ ಪರಿಶೋಭಿಸುತ್ತಿರುವುದನ್ನು ಕಂಡು ಬಂಧುಬಳಗದವರೂ ಊರಿನ ಜನರೂ ಮಗುವಿಗೆ ದೀರ್ಘಾಯುಷ್ಯ ಕೋರುವ ಆಶೆಯಿಂದ ನೂರು ವರ್ಷ ಬಾಳಿದ ಶ್ರೀ ಸಿದ್ಧೇಶ್ವರಯ್ಯನವರ ತಂದೆ ಮುದಕಯ್ಯ (ಅಜ್ಜ)ನವರ ಹೆಸರನ್ನು ಉಪಯೋಗಿಸಹತ್ತಿದರು. ಮಗುವು ತಾಯಿಯ ಉಡಲಲ್ಲಿ ಕೆಲವು ಹೊತ್ತು, ಅಕ್ಕಪಕ್ಕದವರ ಕೈಯಲ್ಲಿ ಕೆಲವು ಹೊತ್ತು ಕಾಲ ಕಳೆಯುತ್ತಲೇ ಕೆಲವು ದಿನಗಳಲ್ಲಿ ಅಂಬೆಗಾಲಿಕ್ಕಿ ಓಡಾಡಹತ್ತಿತು. ಕರ್ಣಭೇದನ, ಅನ್ನಪ್ರಾಶನ, ಚೌಲ ಮೊದಲಾದ ಕ್ರಿಯೆಗಳೂ ಸಹ ನಡೆದವು. ಅನಂತರ ತಾಯಿ ಮಗು ಸಹಿತವಾಗಿ ನಾಗನೂರಿಗೆ ಬಂದಳು. ಮಗುವು ಅನ್ನೋದಕಗಳನ್ನು ಸ್ವೀಕರಿಸಹತ್ತಿತು. ಹೀಗೆ ಕಾಲಕಳೆಯುತ್ತಿರಲಿಕ್ಕಾಗಿ ೮ ವರ್ಷದವನಾದನು. ವೀರಶೈವ ಪದ್ಧತಿ ಪ್ರಕಾರ ಬಾಲಕನಿಗೆ ಆಗಿನ ನಾಗನೂರು ಹಿರೇಮಠದ ಚರಪಟ್ಟಾಧಿಕಾರಿಗಳಾಗಿದ್ದ ಶ್ರೀ ಸಿದ್ಧೇಶ್ವರಶಿವಾಚಾರ್ಯರು ವೀರಮಾಹೇಶ್ವರ ದೀಕ್ಷೆಯನ್ನು ವೇದೋಕ್ತ ಪ್ರಕಾರ ಋತ್ವಿಜರ ಸಾಕ್ಷಿಭೂತವಾಗಿ ಮಂಗಲ ವಾದ್ಯದೊಡನೆ ಶುಭಮುಹೂರ್ತದಲ್ಲಿ ನೆರವೇರಿಸಿದರು.

# ಪ್ರಾಥಮಿಕಶಿಕ್ಷಣ

ವೇದಮೂರ್ತಿಗಳಾದ ಶ್ರೀಸಿದ್ಧಯ್ಯನವರು ಮಗನಿಗೆ ತಮ್ಮ ಮಠದಲ್ಲಿಯೇ ಒಳ್ಳೇ ಮುಹೂರ್ತದಲ್ಲಿ ಕನ್ನಡ ಅಕ್ಷರಾಭ್ಯಾಸವನ್ನು ಪ್ರಾರಂಭಿಸಿದರು. ಬಾಲಕನು ಸ್ವಲ್ಪದಿವಸಗಳಲ್ಲಿ ವರ್ಣಮಾಲೆಗಳನ್ನು ಕಲಿತು ಬಾಲಬೋಧೆಯನ್ನು ಪ್ರಾರಂಭಿಸಿ ಒಂದೆರಡು ತಿಂಗಳಲ್ಲಿ ಅದನ್ನೂ ಮುಗಿಸಿದನು. ಬಾಲವಾಣಿಯು ಸುಸ್ಪಷ್ಟವಾಗಿಯೂ, ಮಧುರವಾಗಿಯೂ, ಇರುವುದರ ಜೊತೆ ಕುಶಲ ಬುದ್ಧಿ ಇದ್ದುದರಿಂದ ಶ್ರೀವಾಗ್ದೇವಿಯು ಅವನ ಮುಖಮಂಡಲದಲ್ಲಿ

ವಾಸವಾಗಿರುವಳೋ ಏನೋ ಎಂಬುವ ಹಾಗೆ ತೋರುತ್ತಿತ್ತು. ಅವನು ಓದುವ ಸೊಗಸನ್ನು ನೋಡಿದವರಿಗೆ ಅವನ ಮುಖದಿಂದ ಇನ್ನಷ್ಟು ಕೇಳ ಬೇಕೆಂಬ ಲವಲವಿಕೆ ಹುಟ್ಟುತ್ತಿತ್ತು. ವ್ಯಾಕರಣ ಶುದ್ಧವಾಗಿ ನುಡಿಯುವುದು ಪ್ರೌಢವಿದ್ಯಾವಂತರಿಗೂ ಕೂಡ ಕಷ್ಟವಾಗಿರುವಾಗ ಚಿಕ್ಕಬಾಲಕನಿಗಿರುವ ಈ ಪರಿಶುದ್ಧ ವಾಣಿಯು ಕಾಶೀಜಂಗಮನಾಗಿ ಬಂದಿದ್ದ ಷಣ್ಮುಖ (ಸ್ಕಂದ)ನ ಆಶೀರ್ವಾದ ಫಲವೆಂದೇ ಭಾವಿಸಬಹುದಲ್ಲವೆ? ಜ್ಞಾನಮೂರ್ತಿಯಾದ ಸ್ಕಂದನ ಕೃಪೆಯಿಂದ ಮಗುವಿಗೆ ಸಕಲ ವಿದ್ಯೆಗಳು ಕೈವಶವಾಗುತ್ತ ಹೋದುದು ಸ್ವಾಭಾವಿಕವಾಗಿ ಕುದುರೆಗೆ ಹುಟ್ಟುನಡಿಗೆ ಇದ್ದಂತೆ ಇದ್ದಿತೆಂಬು ವುದರಲ್ಲಿ ಸಂಶಯವಿಲ್ಲ.

ಈ ಹೊತ್ತಿಗೆ ನಾಲ್ಕನೇ ಯತ್ತೆ ಕಲಿಯುವಷ್ಟರಲ್ಲಿಯೇ ಕಥೆ ಕಾದಂಬರಿ ಗಳನ್ನು ಒಳ್ಳೇ ಮನೋಹರವಾಗಿ ಓದಿ ಕಥಾಭಾಗವನ್ನು ಸೊಗಸಾಗಿ ಹೇಳುತ್ತ ಗೆಳೆಯರನ್ನು ಆನಂದಗೊಳಿಸುತ್ತಿದ್ದನು. ಒಮ್ಮೊಮ್ಮೆ ಗೆಳೆಯರ ವಿನೋದ ಕೂಟಗಳಲ್ಲಿ ಸೇರಿ ತನ್ನ ರಸಿಕವಾಣಿಯಿಂದ ರಹಸ್ಯವಿಷಯಗಳನ್ನು ತಿಳಿಸುವ ಚತುರನಾಗಿದ್ದನು. ಈ ಕಲೆಯು ಅವನಲ್ಲಿ ದಿನೇ ದಿನೇ ಹೆಚ್ಚಿ ಬೆಳೆಯುತ್ತ ಬಂದಹಾಗೆ ಗೆಳೆಯರು ಅವನೊಡನೆ ಯಾವಾಗಲೂ ಗುಂಪು ಗುಂಪಾಗಿ ಸೇರಿ ಕಾಲಕಳೆಯುತ್ತಿದ್ದರು. ವಿದ್ಯಾಭ್ಯಾಸದ ಆಸಕ್ತಿಗಿಂತಲೂ ಧರ್ಮಾಸಕ್ತಿ ಮಗುವಿನಲ್ಲಿ ಹೆಚ್ಚಾಗಿ ಹೊರಹೊಮ್ಮುತ್ತಿತ್ತು. ಈ ಅಲ್ಪ ವಯಸ್ಸಿನಲ್ಲಿಯೇ ಗುರು-ಲಿಂಗ-ಜಂಗಮಾದಿ ಅಷ್ಟಾವರಣಗಳು ಕರತಲಾ ಮಲಕವಾಗಿದ್ದವು.

## ಸಂಸ್ಕೃತ ವಿದ್ಯಾಭ್ಯಾಸ

ಕಾಶೀನಾಥನು ಒಳ್ಳೇ ಕುಶಲಾಗ್ರ ಬುದ್ಧಿಯುಳ್ಳವನೂ, ಅದ್ಭುತ ಧೈರ್ಯಶಾಲಿಯೂ ಆಗಿದ್ದನಲ್ಲದೆ ಯಾವ ವಿಷಯವನ್ನೇ ಆಗಲಿ ನುಡಿದಂತೆ ನಡೆದು ತೋರಿಸುವ ವಾಂಛನಾಶೀಲನಾಗಿದ್ದನು. ಸತ್ಯತತ್ವಕ್ಕೆ ತಲೆ ಬಾಗಿದವನಾಗಿಯೂ, ಅಸತ್ಯಕ್ಕೆ ಎಷ್ಟು ಮಾತ್ರವೂ ಸೇರದವನಾಗಿಯೂ ನಡೆಯುತ್ತಿದ್ದನು. ಎಂಥ ಮಹತ್ಕಾರ್ಯವಿದ್ದರೂ ತಾನೊಬ್ಬನೇ ಮಾಡಿ

ತೋರಿಸುವೆನೆಂದು ಉಬ್ಬುಬ್ಬಿ ಎದೆಗಾರಿಕೆಯ ಮಾತನಾಡುತ್ತಿದ್ದನು. ಇದು ಈತನ ಜನ್ಮಗುಣವಾಗಿತ್ತು. ಇವನಿಗೆ ನಾಗನೂರಿನಲ್ಲಿಯೆ ಶಾಲಾಗುರುಗಳಿಂದ ಜನ್ಮಭಾಷೆಯಾದ ಕನ್ನಡದಲ್ಲಿ ಅತುಲ ವಿದ್ಯಾರ್ಜನೆಯಾಯಿತು. ಕನ್ನಡ ಬರವಣಿಗೆಯ ಅಕ್ಷರಗಳಂತೂ ಎಂಥಾ ದಡ್ಡನನ್ನೂ ಕೂಡ ಓದುವಂತೆ ಮಾಡುತ್ತಿದ್ದವು. ಬರವಣಿಗೆಯಲ್ಲಿ ಉಪಯೋಗಿಸುತ್ತಿರುವ ಶಬ್ದ ಸಂಗ್ರಹಗಳೂ, ವಿರಾಮ ಚಿಹ್ನೆಗಳೂ, ಗಂಭೀರ ಅರ್ಥವನ್ನು ಕೊಡುವ ವಾಕ್ಯಗಳೂ, ಕನ್ನಡ ಶಾರದೆಯ ಆಶೀರ್ವಾದವನ್ನು ವ್ಯಕ್ತಗೊಳಿಸುತ್ತಿದ್ದವು.

ಹೀಗಿರುವಾಗ ಈತನಿಗೆ ಥಟ್ಟನೆ ಸಂಸ್ಕೃತದ ಕಡೆಗೆ ಮನಸ್ಸು ತಿರುಗಿತು. ಅದೇಪ್ರಕಾರ ಅದನ್ನು ಸಾಧಿಸಲೋಸುಗ ತಂದೆತಾಯಿಗಳ ಆಶೀರ್ವಾದ ಹಾಗೂ ಅಪ್ಪಣೆಗಳನ್ನು ಹೊಂದಿದವನಾಗಿ ತನ್ನ ಸೋದರಮಾವನಾದ ಗದಗ ತಾಲೂಕ ನಾರಾಯಣಪುರದ ಹಿರೇಮಠದ ಶ್ರೀ ಅಡವಯ್ಯನವರಲ್ಲಿಗೆ ಹೋದನು. ಅವರು ತಮ್ಮ ಸೋದರಳಿಯನ ಈ ವಿದ್ಯಾಭ್ಯಾಸದ ಗುರಿಯನ್ನು ಮೆಚ್ಚಿದವರಾಗಿ ಧಾರವಾಡ ಜಿಲ್ಲಾ ರೋಣ ತಾಲೂಕಿಗೆ ಸೇರಿದ ಅಬ್ಬಿಗೇರಿ ಗ್ರಾಮದ ಹಿರೇಮಠಕ್ಕೆ ಕರೆದುಕೊಂಡು ಹೋಗಿ ಅಲ್ಲಿರುವ ಸಂಸ್ಕೃತ ಪಾಠಶಾಲೆಗೆ ಸೇರ್ಪಡೆ ಮಾಡಿದರು.

ಅಲ್ಲಿ ಕಾಶೀನಾಥನು ಒಳ್ಳೇ ಲವಲವಿಕೆಯಿಂದ ಸಂಸ್ಕೃತಪಾಠಗಳನ್ನು ಓದುತ್ತ ಪ್ರಾಥಮಿಕ ಅಭ್ಯಾಸಕ್ರಮವನ್ನು ಬೇಗ ಮುಗಿಸಿಕೊಂಡು ಮರುವರ್ಷ ಕ್ರಿ.ಶ. ೧೯೧೨ ರಲ್ಲಿ ಸೊಲ್ಲಾಪುರಕ್ಕೆ ಹೋದನು. ಅಲ್ಲಿರುವ ಶ್ರೀಮಾನ್ ರಾವ್‌ಬಹದ್ದೂರ್ ವಾರದ ಮಲ್ಲಪ್ಪನವರ ಸಂಸ್ಕೃತಪಾಠಶಾಲೆಯಲ್ಲಿ ಪ್ರಧಾನ ಉಪಾಧ್ಯಾಯರಾಗಿದ್ದ ಪಂಡಿತ ವೇ|| ಜಗದೀಶಶಾಸ್ತ್ರಿಗಳು ನಾಲ್ವಾರ ಅವರಲ್ಲಿ ಎರಡು ವರ್ಷಗಳವರೆಗಿದ್ದು ಕಾವ್ಯ, ನಾಟಕ, ಅಲಂಕಾರ, ಚಂಪು ಮೊದಲಾದ ಗ್ರಂಥಗಳನ್ನು ಚನ್ನಾಗಿ ಅಧ್ಯಯನ ಮಾಡಿಕೊಂಡು ಎಲ್ಲ ವಿದ್ಯಾರ್ಥಿಗಳಲ್ಲಿ ಚತುರನೆನಿಸಿಕೊಂಡನು. ಅನಂತರ ತನ್ನ ವಿಚಾರಶಕ್ತಿಯಿಂದ ಮುಂದಿನ ವಿದ್ಯಾಪ್ರಗತಿಗಾಗಿ ಕಾಶೀಕ್ಷೇತ್ರಕ್ಕೆ ಹೋಗಬೇಕೆಂಬ ಹಂಬಲವುಳ್ಳವನಾದನು. ಈ ದೀರ್ಘಪ್ರಯಾಣದ ವಿದ್ಯಾವ್ಯಾಸಂಗಕ್ಕಾಗಿ ಜನ್ಮಭೂಮಿಯಾದ ನಾಗನೂರಿಗೆ ಬಂದು ತಂದೆತಾಯಿಗಳ, ಗುರುಹಿರಿಯರ ಅನುಮತಿ ಪಡೆದು ಕಾಶೀಕ್ಷೇತ್ರಕ್ಕೆ ಪ್ರಯಾಣಮಾಡಿದನು.

# ಕಾಶಿಯಲ್ಲಿ ಪ್ರೌಢಶಿಕ್ಷಣ

ಕಾಶೀಕ್ಷೇತ್ರದಲ್ಲಿ ವಿರಾಜಿಸುತ್ತಿದ್ದ ಜಗದ್ಗುರು ಶ್ರೀವಿಶ್ವಾರಾಧ್ಯರ ಜಂಗಮವಾಡಿ ಮಠದಲ್ಲಿ ವಾಸಮಾಡಿಕೊಂಡು ಅಲ್ಲಿಯ ಗುರುಕುಲದ ವಿದ್ಯಾರ್ಥಿಗಳೊಡನೆ ಪ್ರತಿದಿವಸ ಗಂಗಾನದಿ ಸ್ನಾನದಿಂದಲೂ, ವಿಶ್ವನಾಥನ ದರ್ಶನದಿಂದಲೂ ಪವಿತ್ರಕಾಯನಾಗಿ ಶ್ರೀ ವಿಶ್ವಾರಾಧ್ಯರ ಪ್ರಸಾದಸೇವನೆಯಿಂದ ಪ್ರಶಾಂತಹೃದಯನಾಗಿ ತನ್ನ ಪ್ರೌಢ ಅಭ್ಯಾಸಕ್ರಮವನ್ನು ಪಂಡಿತ ಶ್ರೀ ದೇವೀಪ್ರಸಾದಶುಕ್ಲರೆಂಬ ಘನವಿದ್ವಾಂಸರಲ್ಲಿ ಸಾಂಗವಾಗಿ ನಡಿಸಿಕೊಂಡು ಹೋದನು. ಮುಂದೆ ಎರಡೇ ವರ್ಷಗಳಲ್ಲಿ ಕಲ್ಕತ್ತಾ ಯೂನಿವರ್ಸಿಟಿ "ಸಾಹಿತ್ಯತೀರ್ಥ" ಪರೀಕ್ಷೆಯಲ್ಲಿ ಉತ್ತೀರ್ಣನಾದನು. ಹಾಗೇ ಒಂದೆರಡು ವರ್ಷಗಳಲ್ಲಿ ಸಾಂಖ್ಯ, ಯೋಗ, ಪೂರ್ವಮೀಮಾಂಸ ಮೊದಲಾದ ಶಾಸ್ತ್ರೀಯ ಗ್ರಂಥಗಳನ್ನು ಚನ್ನಾಗಿ ಓದಿಕೊಂಡು ಒಳ್ಳೇ ಪ್ರತಿಭಾಸಂಪನ್ನನಾಗಿ ಅಲ್ಲಿಯ ಗುರುಕುಲ ವಿದ್ಯಾರ್ಥಿಗಳಲ್ಲಿ ಮಿಗಿಲಾದ ಕುಶಲಮತಿಯುಳ್ಳವನೂ, ಕಾರ್ಯಚತುರನೂ ಎನಿಸಿಕೊಂಡನು. ಮತ್ತು ಆಗಿನ ಕಾಶೀ ಪೀಠದ ಜಗದ್ಗುರು ಶ್ರೀಶಿವಲಿಂಗಶಿವಾಚಾರ್ಯರ ಕೃಪೆಗೆ ಪಾತ್ರನಾಗಿದ್ದನಲ್ಲದೆ ಇನ್ನೂ ಅನೇಕ ಘನವಿದ್ವಾಂಸರ ಚಿತ್ತಕ್ಕೆ ಆಕರ್ಷಣವುಳ್ಳವನಾಗಿದ್ದನು. ಹಲವಾರು ಭಾಷಾಜ್ಞಾನವುಳ್ಳ ಇವನು ಅನೇಕ ವಾಚನಾಲಯಗಳಿಗೆ ಹೋಗಿ ಐತಿಹಾಸಿಕ ಮತ್ತು ಧಾರ್ಮಿಕ ಗ್ರಂಥಗಳನ್ನು ಬಹು ಶ್ರಮಪಟ್ಟು ಓದಿ ಓದಿ ಅನಂತವಿಷಯಗಳನ್ನು ಸಂಗ್ರಹಮಾಡಿಕೊಳ್ಳುವವನಾದನು. ಪುರಾತನ ಗ್ರಂಥಗಳಿಗೆ ಒಳ್ಳೇ ಮಹತ್ವಕೊಟ್ಟು ಓದುತ್ತಿದ್ದನು. ಸಂದಿಗ್ಧ ವಿಷಯಗಳನ್ನು ಪಂಡಿತರಲ್ಲಿಟ್ಟು ಚರ್ಚಿಸುತ್ತಿದ್ದನು. ಶೈವ ಮತ್ತು ವೀರ ಶೈವಗ್ರಂಥಗಳನ್ನು ಸಂಶೋಧನ ದೃಷ್ಟಿಯಿಂದ ನೋಡುತ್ತಲಿದ್ದನು. ಹೀಗೆ ಗ್ರಂಥವ್ಯವಸಾಯ ಬಲದಿಂದ ಪ್ರತಿಯೊಂದು ವಿಷಯದಲ್ಲಿ ಸಮರ್ಥಶಾಲಿಯಾದನು. ಧರ್ಮಗ್ರಂಥಗಳೆಂದರೆ ಪ್ರಾಣಕ್ಕೆ ಸಮಾನವಾದವುಗಳೆಂದು ಭಾವಿಸುತ್ತಿದ್ದನು. ಹಗಲಿರುಳು ಗ್ರಂಥಾವಲೋಕನದಲ್ಲಿ ಕಾಲಕಳೆಯುವ ಇವನಿಗೆ ಈ ಸಮಯದಲ್ಲಿ ಊಟದ ಪರವಿಯೇ ಇರುತ್ತಿರಲಿಲ್ಲ.

# ಪಂಡಿತರ ಲೇಖನವೃತ್ತಿ.

ಶ್ರೀಕಾಶೀನಾಥಪಂಡಿತರು ಪ್ರೌಢವಿದ್ಯಾವಂತರಾಗಿ ಧಾರ್ಮಿಕ ವಿಷಯಗಳಲ್ಲಿ ಲೇಖನಗಳನ್ನೂ ಕವಿತೆಗಳನ್ನೂ ನಿರರ್ಗಳವಾಗಿ ಬರೆಯುತ್ತಿದ್ದರು. ಇಷ್ಟರಲ್ಲಿ ಇವರ ಲೇಖನಗಳು ಅಲಹಾಬಾದಿನಲ್ಲಿ ಪ್ರಕಟವಾಗುತ್ತಿದ್ದ "ಶಾರದಾ" ಎಂಬ ಹಿಂದಿ ಮಾಸಪತ್ರಿಕೆಯಲ್ಲಿ ಪ್ರಕಟಿಸಲ್ಪಡುತ್ತಿದ್ದವು. ಇವರ ಪಾಂಡಿತ್ಯ ಪೂರ್ಣ ಲೇಖನಗಳೂ, ಕವಿತೆಗಳೂ, ಪಂಡಿತರ ಹೃದಯುವನ್ನಾಕರ್ಷಿಸುವಂಥವುಗಳಾಗಿದ್ದವು. ಕೆಲವು ಮೇಧಾವಿಪಂಡಿತರು ಇವರ ರಸಿಕ ಕವಿತೆಗಳನ್ನು ನೋಡಿ ಆನಂದಪಟ್ಟು ಇವರಿಗೆ "ಕವಿರತ್ನ" ಎಂದು ವಿಶೇಷ ನಾಮಪ್ರಯೋಗಮಾಡಿ ಪ್ರಶಂಸ ಪತ್ರಗಳನ್ನು ಬರೆದುಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ. ಹೀಗೆ ಅಪರಿಚಿತ ಜನರಿಂದಲೂ ಸಹಿತ ಇವರು ಮೆಚ್ಚುಗೆಯುಳ್ಳವರಾಗಿದ್ದರು.

ಉತ್ತರ ಹಿಂದೂಸ್ಥಾನದಲ್ಲಿ "ಡುಮರಾಂವ್" ಎಂಬ ಪಟ್ಟಣವು ಒಂದು ಚಿಕ್ಕ ಸಂಸ್ಥಾನದ ರಾಜಧಾನಿಯಾಗಿದ್ದು ಆ ರಾಜಧಾನಿಯಲ್ಲಿ ಆಸ್ಥಾನ ಪಂಡಿತರಾಗಿದ್ದ ಶ್ರೀಕಾಲಿಕೇಶ್ವರದತ್ ಎಂಬ ಪಂಡಿತರು "ಶೈವ ಬ್ರಾಹ್ಮಣೋತ್ಪತ್ತಿ" ಎಂಬುವ ಗ್ರಂಥವನ್ನು ಬರೆದವರಾಗಿದ್ದರು. ಆ ಗ್ರಂಥದ ಪ್ರಸ್ತಾವನೆಯಲ್ಲಿ ಶೈವರು ಎರಡು ಬಗೆಯಾಗಿದ್ದಾರೆ; ಅವರಲ್ಲಿ ಒಬ್ಬರು ಯಜ್ಞಯಾಗಾದಿಗಳನ್ನೂ, ಪಂಚಸೂತಕಗಳನ್ನೂ ಆಚರಿಸದೆ ಇರುವ ಲಿಂಗಧಾರಿಗಳು; ಅವರು ಅವೈದಿಕರೆಂದು ಹೇಳಿಸಿಕೊಳ್ಳಲ್ಪಡುತ್ತಾರೆ; ಆ ಜನರು ವಿಶೇಷವಾಗಿ ಕರ್ಣಾಟಕದಲ್ಲಿ ವಾಸಮಾಡಿಕೊಂಡಿರುವರೆಂದು ಬರೆದಿದ್ದರು. ಇದು ಮೂಢಮತಿಯ ಪ್ರತಾಪ ಹಾಗು ಜಾತಿ ವೈಷಮ್ಯದ ದುರ್ಭಾವನೆಯಂತಿತ್ತು. ಆ ಗ್ರಂಥವನ್ನು ನಮ್ಮ ಪಂಡಿತರು ನೋಡಿ ಓದಿದ ಕೂಡಲೇ ಹೃದಯುವು ಕಾದಕಬ್ಬಿಣದಂತಾಯಿತು. ಆದರೂ ಇದನ್ನು ಯಾವ ಆಧಾರದಿಂದ ಬರೆದಿರುವನೋ ನೋಡೋಣವೆಂದು ಶಾಂತಿಯನ್ನು ತಾಳಿ ಆ ಮಾತ್ಸರ್ಯವ್ಯಕ್ತಿಯ ಗರ್ವಹರಣಮಾಡಲು ನಿರ್ಧರಿಸಿದರು. ಆ ಪ್ರಕಾರ ಪಂಡಿತರು ಅದೇ ಜಂಗಮವಾಡಿ ಮಠದಲ್ಲಿದ್ದ ಗುರುಕುಲದ ವಿದ್ವಾಂಸರೆಲ್ಲರನ್ನೂ ಕೂಡಿಸಿಕೊಂಡು ಆ ಗ್ರಂಥದಲ್ಲಿರುವ ವಿಷಯಗಳನ್ನು ಚರ್ಚಿಸಿದಾಗ ಅದರ ಖಂಡನೆ ಬಗ್ಗೆ ಬರೆದುಕಳಿಸುವುದೊಳ್ಳೇದೆಂದು ಸಕಲರೂ ಅಭಿ

ಪ್ರಾಯಪಟ್ಟರು. ಆದರೆ ಕಾಶೀನಾಥ ಪಂಡಿತರು ಅದಕ್ಕೆ ಒಪ್ಪಲಿಲ್ಲ. ಸ್ವತಃ ಅವರಿದ್ದ ರಾಜಧಾನಿಗೆ ಹೋಗಿ ಆ ಪಂಡಿತನೊಡನೆ ಶಾಸ್ತ್ರಸಿದ್ಧಾಂತ ಪೂರ್ವಕ ಚರ್ಚೆಮಾಡಿ ನಮ್ಮ ವೈದಿಕಸಿದ್ಧಾಂತ ತತ್ವಗಳನ್ನು ಪ್ರಸಿದ್ಧಿಗೊಳಿಸಿ ಅವನ ಗರ್ವಹರಣಮಾಡಿ ವಿಜಯಪಡೆದುಕೊಂಡು ಬರುವೆನೆಂದು ಘೋಷಿಸಿದರು. ಅದಕ್ಕೆ ಉಳಿದ ಪಂಡಿತ ಜನರು ಒಪ್ಪಲಿಲ್ಲ. ಏಕೆಂದರೆ ಆ ರಾಜಧಾನಿಯಲ್ಲಿ ಒಳ್ಳೇ ಪ್ರಮುಖನೂ ಆಸ್ಥಾನಪಂಡಿತನೂ ಆಗಿದ್ದ ಅವನೊಡನೆ ಅಲ್ಲಿ ವಾದಿಸುವುದಕ್ಕೆ ಸಮಯ ದೊರೆಯುವುದು ಸಾಧ್ಯವಿಲ್ಲ. ಮತ್ತು ನಮಗೆ ಸ್ವಾತಂತ್ರ್ಯವಿಲ್ಲದ ಆ ಸ್ಥಾನದಲ್ಲಿ ಜಯ ಸಿಗುತ್ತದೆಂದು ಹೇಳಲೂ ಕೂಡ ಬರುವಂತಿಲ್ಲ ಎಂದು ಅಭಿಪ್ರಾಯಪಟ್ಟು ಈ ವಿಚಾರವನ್ನು ಅದೇ ಜಂಗಮವಾಡಿ ಮಠದ ಜ್ಞಾನಪೀಠಾಧೀಶ್ವರರಾಗಿದ್ದ ೧೦೮ ಜಗದ್ಗುರು ಶ್ರೀ ಶಿವಲಿಂಗಶಿವಾಚಾರ್ಯಮಹಾಸ್ವಾಮಿಗಳ ಸನ್ನಿಧಿಯಲ್ಲಿಟ್ಟರು. ಆ ಮಹಾಸ್ವಾಮಿಗಳು ಕೂಡ ಎಲ್ಲರ ಅಭಿಪ್ರಾಯದಂತೆ ಆ ಡುಮರಾಂವ್ ರಾಜಧಾನಿಯ ಆಸ್ಥಾನಪಂಡಿತರಲ್ಲಿಗೆ ಹೋಗುವುದಕ್ಕಿಂತ ಇಲ್ಲಿಂದಲೇ ಆ ಗ್ರಂಥದ ಮೇಲೆ ಖಂಡನಮಂಡನ ಲೇಖನಗಳನ್ನು ಬರೆದು ವ್ಯವಹಾರ ಮಾಡಿರಿ. ನಿಮಗೆ ವಿಜಯ ದೊರೆಯುತ್ತದೆಂದು ಆಶೀರ್ವಚನವನ್ನಿತ್ತರು.

ಈ ನಮ್ಮ ಕಾಶೀನಾಥ ಪಂಡಿತರು ಶ್ರೀಜಗದ್ಗುರುಗಳ ಅಪ್ಪಣೆಗೆ ಶಿರಬಾಗಿ ಒಪ್ಪಿಕೊಂಡು ವೈದಿಕ ಸಿದ್ಧಾಂತಪೂರ್ವಕ ಸಂಸ್ಕೃತದಲ್ಲಿ ಸ್ವಹಸ್ತ ಲೇಖನಗಳನ್ನು ಬರೆದು, ಬರೆದು ಆರು ತಿಂಗಳವರೆಗೂ ಲೇಖನ ಮಾಲೆಯನ್ನು ವಿಸ್ತರಿಸಿ ಶ್ರೀ ಕಾಲಿಕೇಶ್ವರದತ್ತನಿಗೆ ಕಳುಹಿಸುವವರಾದರು. ಆ ಪಂಡಿತನು ಮೊದಮೊದಲು ಉತ್ತರ ಕೊಡುತ್ತ ಬಂದರೂ ಕೊನೆಗೆ ಉತ್ತರ ಮಾಲಿಕೆಯು ನಿಂತುಹೋಯಿತು. ಎಂದಿಗೆ ಪ್ರತ್ಯುತ್ತರಗಳನ್ನು ಕೊಡದವನಾದನೋ ಅಂದಿಗೆ ಅಪಜಯಹೊಂದಿದನೆಂಬ ಬಗ್ಗೆ ಲೇಖನಗಳನ್ನು ಪತ್ರಿಕೆಗಳಲ್ಲಿ ಪ್ರಕಟಗೊಳಿಸಿದ ಕಾಶೀನಾಥರು ಜಯಶೀಲರಾದರು. ಇದು ಇವರ ಮೊದಲನೇ ವಿಜಯ.

ಅನಂತರ ಇವರು ಆ ಸಂಸ್ಕೃತದಲ್ಲಿನ ಖಂಡನ ಮಂಡನ ಲೇಖನ ಮಾಲೆಯನ್ನು ಒಟ್ಟುಗೂಡಿಸಿ "ದುರ್ವಾದದೂರೀಕರಣ" ಎಂಬ ಗ್ರಂಥವನ್ನಾಗಿ ಮುದ್ರಣಗೊಳಿಸಿ ಪ್ರಸಿದ್ಧಪಡಿಸಿದರು. ಈ ದುರ್ವಾದದೂರೀಕರಣ

ವೆಂಬುವ ಗ್ರಂಥವನ್ನು ಓದಿದ ಸಂಸ್ಕೃತ ಪಂಡಿತರೆಲ್ಲರೂ ನಮ್ಮ ಪಂಡಿತರ ಪ್ರತಿಭಾಶಕ್ತಿಯನ್ನು ಹೃತ್ಪೂರ್ವಕವಾಗಿ ಹೊಗಳುವಂಥವರಾದರು. ಅನೇಕ ವಿದ್ವಾಂಸರು ಇವರಿಗೆ "ಅಭಿನವಬೃಹಸ್ಪತಿ" ಎಂದೂ ಕರೆದರು. ಈ ಮಹಾ ವಿಜಯದ ಸಂತೋಷಕ್ಕಾಗಿ ಅದೇ ಕಾಶೀಕ್ಷೇತ್ರದಲ್ಲಿಯೂ, ದಕ್ಷಿಣದೇಶ ದಲ್ಲಿಯೂ, ಎಷ್ಟೋ ಸನ್ಮಾನ ಸಭೆಗಳನ್ನು ಜರುಗಿಸಿ ಪಂಡಿತರನ್ನು ಗೌರವಿ ಸಿದರು. ಆಗ್ಗೆ ಈ ಪಂಡಿತರ ಕೀರ್ತಿಚಂದ್ರಿಕೆಯು ಉತ್ತರ ಭಾರತದಲ್ಲಿಯೂ ಆಂಧ್ರ, ಕರ್ಣಾಟಕ, ಮಹಾರಾಷ್ಟ್ರಾದಿ ದೇಶಗಳಲ್ಲಿಯೂ ಪಸರಿಸಿತು.

## ಪಂಚಾಚಾರ್ಯ ಸಮ್ಮೇಲನ

ವೀರಶೈವಧರ್ಮವನ್ನು ಯುಗಯುಗಾಂತರಗಳಲ್ಲಿ ಸ್ಥಾಪನೆಗೊಳಿಸಿದ ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರು, ಧರ್ಮರಕ್ಷಣೆಗಾಗಿಯೂ ತಮ್ಮ ತಮ್ಮ ಪರಂಪರೆಯ ಆಚಾರ್ಯರ ನಿವಾಸಕ್ಕಾಗಿಯೂ, ಮಹತ್ ಕ್ಷೇತ್ರಗಳೆನಿಸಿದ ಕಾಶಿ, ಕೇದಾರ, ಶ್ರೀಶೈಲ, ಉಜ್ಜಯಿನಿ, ಬಾಳೆಹೊನ್ನೂರು ಎಂಬ ಪಂಚ ಪವಿತ್ರಸ್ಥಳಗಳಲ್ಲಿ ತಮ್ಮ ತಮ್ಮ ಧರ್ಮ ಪೀಠಗಳನ್ನು ಸ್ಥಾಪನೆ ಮಾಡಿಕೊಂಡು ಉತ್ತರಾಧಿಕಾರಿಗಳನ್ನು ನೇಮಿಸಿ ಹೋದವರಾಗಿದ್ದ ಆ ಯಾವ ಪಂಚಾಚಾರ್ಯರ ಪರಂಪರೆಯು ವೀರಶೈವ ಧರ್ಮಸಾಮ್ರಾಜ್ಯದ ಗೋತ್ರಸೂತ್ರಗಳನ್ನು ಹಿಡಿದುಕೊಂಡು ಬಂದುದಾಗಿದೆಯಷ್ಟೆ? ಆಪ್ರಕಾರ ಈ ಪಂಚಗುರುಪೀಠಗಳ ಶಾಖಾಮಠಗಳು ಭರತಖಂಡದ ನಾನಾಭಾಗಗಳಲ್ಲಿಯೂ ಕಾಶಿ, ಕೇದಾರ, ಕಾಶ್ಮೀರ, ನೇಪಾಳ, ಭೂತಾನ, ಕಂಚಿ, ಕುಂಭಕೋಣ, ರಾಮೇಶ್ವರ, ಲಂಕಾ, ಈ ಮೊದಲಾದ ಕ್ಷೇತ್ರಗಳಲ್ಲಿಯೂ ವಿರಾಜಿಸುತ್ತಿರು ವುದನ್ನು ನೋಡಿದರೆ ಆ ಎಲ್ಲಾ ಪ್ರಾಂತಗಳಲ್ಲಿ ವೀರಶೈವ ಸಮಾಜವು ಪ್ರಾಚೀನಕಾಲದಲ್ಲಿ ವಿಶೇಷವಾಗಿ ನೆಲಸಿತ್ತೆಂದು ಧಾರಾಳವಾಗಿ ಹೇಳಬಹು ದಾಗಿದೆ.

ಇನ್ನು ಕರ್ನಾಟಕದಲ್ಲಿಯ ಮಠಗಳ ಚರಿತ್ರೆಯನ್ನು ಸಂಶೋಧಿಸಲು ಎರಡುಸಾವಿರ ವರ್ಷಗಳಿಂದಲೂ ಇಲ್ಲಿ ವೀರಶೈವರು ವಿಶೇಷ ಪ್ರಚಾರದಲ್ಲಿದ್ದ ರೆಂಬುದು ಶಿಲಾಶಾಸನಾದಿ ಅನೇಕ ಆಧಾರಗಳಿಂದ ತಿಳಿದುಬರುತ್ತದೆ. ಆದರೆ

ಕಳೆದ ಎಂಟುನೂರು ವರ್ಷಗಳ ಸುಮಾರಿಗೆ ಕಲ್ಯಾಣದ ಬಸವಣ್ಣನ ಕ್ರಾಂತಿ ಕಾಲದಿಂದ ಇಲ್ಲಿ ಅನೇಕ ವಿರಕ್ತಮಠಗಳು ತಲೆಯೆತ್ತಿದ್ದರೂ ಆಗಿನ ಕಾಲದ ವಿರಕ್ತರು ಪ್ರಥಮತಃ ಪಂಚಾಚಾರ್ಯರಿಗೆ ಸಂಬಂಧಿಸಿದ ಗುರುವರ್ಗದ ಅಧಿಕಾರಿಗಳಲ್ಲಿ ವಿಧೇಯರಾಗಿ ನಡೆದುಕೊಂಡು ಬಂದುದರಿಂದ ಅವರ ದಾಸೋಹ ಮಠಗಳು ಅಭಿವೃದ್ಧಿಗೆ ಬಂದವು. ಹೀಗೆ ನಡೆದುಕೊಂಡು ಬರುತ್ತಿರಲಿಕ್ಕಾಗಿ ಕಾಲಾನಂತರ ಧನಮದ, ಅನ್ನಮದಗಳಿಂದ ಬಲಿಷ್ಠರಾದ ಇವರು ಗುರುವರ್ಗದವರ ಮೇಲೆ ತಮ್ಮ ಪ್ರಭಾವವನ್ನು ಬೀರಲಾರಂಭಿಸಿ ವೀರಶೈವಧರ್ಮದ ಹಕ್ಕುಬಾಧ್ಯತೆಯಲ್ಲಿ ಕೈಹಾಕಲಿಕ್ಕೆ ಪ್ರಾರಂಭಿಸಿದರು. ಅಜ್ಞಾನಾಂಧತೆಯಲ್ಲಿದ್ದ ಕೆಲವು ಸಮಾಜವು ಅವರ ಡಾಂಭಿಕವೃತ್ತಿಗೆ ಗಮನಕೊಡಲಾರಂಭಿಸಿತು. ಇದಕ್ಕೆ ಅನುಕೂಲವಾಗುವರೀತಿಯಲ್ಲಿ ಗುರು ವರ್ಗದ ಜ್ಞಾನ, ಜಾಗರೂಕತೆಗಳು ಕಡಿಮೆಯಾಗಹತ್ತಿ ಪಂಚಾಚಾರ್ಯರ ಪ್ರಭಾವವು ಕುಗ್ಗುತ್ತ ಬಂದಿತು. ಇದನ್ನು ತಿಳಿದುಕೊಂಡ ಕಾಶೀನಾಥ ಪಂಡಿತರು ಪಂಚಾಚಾರ್ಯರ ದಿಗ್ವಿಜಯಕ್ಕಾಗಿ ಚಳುವಳಿಯನ್ನೆಬ್ಬಿಸಿ ಗುರು ವರ್ಗವನ್ನು ಪ್ರಕಾಶಕ್ಕೆ ತರಬೇಕೆಂಬುವ ಮಹತ್ಕಾಂಕ್ಷೆಯುಳ್ಳವರಾದರು.

ಇದಕ್ಕಾಗಿಯೇ ಜನಿಸಿದ ಇವರು ಮೊದಲು ಪಂಚಪೀಠಾಚಾರ್ಯರನ್ನು ಒಂದೆಡೆ ಕೂಡಿಸಬೇಕೆಂಬ ನಿರ್ಧಾರ ಮಾಡಿಕೊಂಡು ಶ್ರೀಕಾಶೀಜಗದ್ಗುರು ಶಿವಲಿಂಗಶಿವಾಚಾರ್ಯ ಮಹಾಸ್ವಾಮಿಗಳಲ್ಲಿ ಅರಿಕೆ ಮಾಡಿಕೊಂಡರು. ಸನ್ನಿಧಿಯವರು ತದ್ವಿಷಯದ ಬಗ್ಗೆ ಒಂದೆರಡುದಿವಸ ಆಲೋಚನೆ ಮಾಡು ತ್ತಿರುವಷ್ಟರಲ್ಲಿ ಉಜ್ಜಯಿನೀ ಸದ್ಧರ್ಮ ಪೀಠಾಧೀಶ್ವರ ಶ್ರೀ ೧೧೦೮ ಜಗದ್ಗುರು ಶ್ರೀಸಿದ್ಧಲಿಂಗಶಿವಯೋಗೀಂದ್ರ ಮಹಾಸ್ವಾಮಿಗಳಿಂದ ಇದೇ ವಿಷಯಕ್ಕಾಗಿ ಒಂದು ಓಲೆ ಬಂದಿತು. ಉಭಯರ ವಿಚಾರಗಳು ಒಂದಾ ದವು. ಉತ್ಸಾಹವು ಹೆಚ್ಚಿತು. ಪಂಚಾಚಾರ್ಯರ ಏಳಿಗೆಯ ಕಾಲವು ಸನ್ನಿಹಿತವಾಯಿತು. ಪರಮ ತಪಸ್ವಿಗಳಾದ ಜಗದ್ಗುರು ಸಿದ್ಧಲಿಂಗಮಹಾ ಸ್ವಾಮಿಗಳ ಪ್ರೇರಣೆಯು ಪಂಡಿತರ ಕಾರ್ಯಕ್ಕೆ ಬೆಂಬಲವಾಯಿತು. ಅಂದಿನಿಂದಲೂ ಆ ತಪಸ್ವಿಗಳ ವಿಷಯದಲ್ಲಿ ಕಾಶೀನಾಥರು ಭಕ್ತಿವಿಶ್ವಾಸ ಗಳನ್ನು ಹೆಚ್ಚಾಗಿಟ್ಟುಕೊಂಡು ನಡೆಯುತ್ತಬಂದರು.

ಕಾಶೀ ಜಗದ್ಗುರು ಶ್ರೀ ಶಿವಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಕಾಶೀನಾಥರ ಬಯಕೆಯಂತೆ ಪಂಡಿತವರ್ಗದವರನ್ನು ಕೂಡಿಸಿಕೊಂಡು

ಬೇಗನೆ ಪಂಚಾಚಾರ್ಯರ ಸಮ್ಮೇಲನವನ್ನು ತಮ್ಮ ಮಠದಲ್ಲಿಯೇ ನೆರವೇರಿಸಲು ಅಪ್ಪಣೆಯನ್ನಿತ್ತರು. ಅದಕ್ಕೆ ಸಕಲಪಂಡಿತರೂ ಒಪ್ಪಿಕೊಂಡದ್ದರಿಂದ ಕಾರ್ಯನಿರ್ವಹಣೆಗಾಗಿ ಸ್ವಾಗತಸಮಿತಿಯನ್ನು ನೇಮಿಸಲಾಯಿತು. ಕಾರ್ಯ ಪ್ರಾರಂಭಮಾಡಿದರು. ಚರಿತ್ರನಾಯಕರಾದ ನಮ್ಮ ಕಾಶೀನಾಥ ಪಂಡಿತರು ಸಮಿತಿಯ ಕಾರ್ಯದರ್ಶಿಗಳಾದರು. ಸ್ವಾಗತಸಮಿತಿಗೆ ಅಬ್ಬೀಗೇರಿ ಹಿರೇಮಠಾಧ್ಯಕ್ಷ ಶ್ರೀ ಷ|| ಬ್ರ|| ವೀರಭದ್ರಶಿವಾಚಾರ್ಯರು ಅಧ್ಯಕ್ಷರಾದರು. ಅಬ್ಬೀಗೇರಿ ಪಂಡಿತ ಸದಾಶಿವಶಾಸ್ತ್ರಿಗಳು, ಸೂಡಿ ಉಮಾಪತಿಶಾಸ್ತ್ರಿಗಳು ಇವರೀರ್ವರು ಉಳಿದ ನಾಲ್ಕು ಜಗದ್ಗುರು ಪೀಠಗಳಿಗೆ ಹೋಗಿ ಆಮಂತ್ರಣಕೊಟ್ಟು ಬರುವ ಕಾರ್ಯವನ್ನು ವಹಿಸಿಕೊಂಡು ಆಪ್ರಕಾರ ಕೇದಾರ, ಶ್ರೀಶೈಲ, ಉಜ್ಜಯಿನಿ, ಬಾಳೀಹೊನ್ನೂರು ಈ ಪೀಠಗಳಿಗೆ ಹೋಗಿ ಮಹಾಸನ್ನಿಧಾನಂಗಳಿಗೆ ಆಮಂತ್ರಣಗಳನ್ನರ್ಪಿಸಿ ಆಶೀರ್ವಾದ ಪಡೆದುಕೊಂಡು ಬಂದರು.

ಚತುಷ್ಪೀಠಾಚಾರ್ಯರು ಸಮ್ಮೇಲನ ಜರುಗಿಸಲು ಅನುಮೋದಿಸಿದುದಕ್ಕೆ ಕಾಶೀಜಗದ್ಗುರು ಶ್ರೀಶಿವಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಬಹಳ ಸಂತೋಷಪಟ್ಟು ಕಾರ್ಯೋನ್ಮುಖರಾದರು. ಸ್ವಾಗತ ಸಮಿತಿಯವರು ಒಳ್ಳೇ ಉತ್ಸಾಹಶಾಲಿಗಳಾಗಿ ಕೆಲವೇ ದಿವಸಗಳಲ್ಲಿ ಸಕಲ ಕಾರ್ಯಗಳನ್ನು ಸಿಸ್ತುಗೊಳಿಸಿದರು. ಸಮ್ಮೇಲನದ ಆಮಂತ್ರಣ ಪತ್ರಿಕೆಗಳನ್ನು ಹಿಂದಿ, ಕರ್ನಾಟಕ, ಆಂಧ್ರ, ಮಹಾರಾಷ್ಟ್ರಾದಿ ಸಕಲಭಾಷೆಗಳಲ್ಲಿ ಪ್ರಸಿದ್ಧಪಡಿಸಿದರು. ಹೀಗೆ ಪ್ರಚಾರವಾದ ಕೂಡಲೇ ಎಲ್ಲಾ ನಾಡುಗಳ ಮಹಾಜನರು ಕಾಶೀಕ್ಷೇತ್ರವನ್ನೂ ಮತ್ತು ಶ್ರೀಜಗದ್ಗುರು ಪಂಚಾಚಾರ್ಯರನ್ನೂ ನೋಡಬೇಕೆಂಬ ಹಂಬಲದಿಂದ ನಿಯಮಿತವಾದ ದಿವಸಕ್ಕೆ ಬಂದುಸೇರಿದರು. ಜಂಗಮವಾಡಿ ಮಠವು ಅಗಣಿತ ಜನಸ್ತೋಮದಿಂದ ತುಂಬಿ ಪರಿಶೋಭಿಸುವಂಥಾದ್ದಾಯಿತು.

ಸಮ್ಮೇಲನವು ಕ್ರಿ.ಶ. ೧೯೧೮ ನೇ ಮಾರ್ಚಿತಿಂಗಳ ೨೫ನೇ ತಾರೀಖಿಗೆ ನೇಮಕವಾಗಿದ್ದುದಕ್ಕೆ ಒಂದು ದಿವಸ ಮುಂಚೆಯೇ ಶ್ರೀಶೈಲಜಗದ್ಗುರು ನಾಗಲೂಟಿ ಭಿಕ್ಷಾವರ್ತಿಮಹಾಸ್ವಾಮಿಗಳು, ಉಜ್ಜಯಿನೀ ಜಗದ್ಗುರು ಶ್ರೀಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳು, ಬಾಳೀಹೊನ್ನೂರು

ಶ್ರೀಜಗದ್ಗುರು ಪಂಚಾಕ್ಷರಶಿವಾಚಾರ್ಯಮಹಾಸ್ವಾಮಿಗಳು, ಆಗಮಿಸಿದರು. ಕೇದಾರಪೀಠದ ಶ್ರೀಜಗದ್ಗುರು ವಿಶ್ವಲಿಂಗಶಿವಾಚಾರ್ಯಮಹಾಸ್ವಾಮಿಗಳು ದೇಹಾಲಸ್ಯದ ಮೂಲಕ ಆಗಮಿಸದೆ ತಮ್ಮ ಉತ್ತರಾಧಿಕಾರಿಗಳಾದ ಪಂಡಿತ ಶ್ರೀ ನೀಲಕಂಠಶಿವಾಚಾರ್ಯರನ್ನು ತಮ್ಮ ಪ್ರತಿನಿಧಿಗಳನ್ನಾಗಿ ಕಳುಹಿಸಿದ್ದರು. ಇವರೆಲ್ಲರೂ ಕೂಡಿ ಸಭಾಕಾರ್ಯಗಳನ್ನು ನಿರ್ವಹಿಸುವವರಾದರು.

ಸಭಾಮಂಟಪವು ಹತ್ತುಸಾವಿರ ಜನರು ಕೂಡ್ರುವಷ್ಟು ವಿಶಾಲವಾಗಿದ್ದು ಅಲ್ಲಲ್ಲಿ ವಿದ್ಯುದ್ದೀಪಗಳಿಂದಲೂ, ತಳಿರುತೋರಣಗಳಿಂದಲೂ, ರಂಜಿಸುವಂಥಾದ್ದಾಗಿತ್ತು. ಹೀಗೆ ಸರ್ವಾಂಗಸುಂದರವಾಗಿದ್ದ ಭವ್ಯ ಮಂಟಪದಲ್ಲಿ ಐದು ಸಿಂಹಾಸನಗಳು ಉಜ್ವಲವಾಗಿ ಕಂಗೊಳಿಸುತ್ತಿದ್ದವು. ಪಂಚಜಗದ್ಗುರುಗಳು ಕಾಷಾಯಾಂಬರಗಳಿಂದಲೂ ಭಸ್ಮ, ರುದ್ರಾಕ್ಷಿ, ದಂಡ ಕಮಂಡಲುಗಳಿಂದಲೂ, ಶೋಭಾಯಮಾನರಾಗಿ ನಿಯಮಿತದಿನದಲ್ಲಿ ನಿಯಮಿತವೇಳೆಗೆ ವೇದಘೋಷ ಹಾಗು ಮಂಗಲವಾದ್ಯಗಳೊಡನೆ ಆಗಮಿಸಿ ತಮ್ಮ ತಮ್ಮ ಸಿಂಹಾಸನಗಳನ್ನಲಂಕರಿಸಿದರು. ಆಗ ಜನಸ್ತೋಮದಿಂದ ಹೊರಟ ಪಂಚಾಚಾರ್ಯರ ಜಯಜಯಕಾರ ನಿನಾದವು ನಭೋಮಂಡಲವನ್ನಾಕರ್ಷಿಸಿಕೊಂಡಿತ್ತು. ಹೀಗೆ ಸಕಲ ವೈಭವಗಳಿಂದ ರಮ್ಯವಾಗಿ ತೋರುತ್ತಿರುವ ಪಂಚಾಚಾರ್ಯ ಸಮ್ಮೇಲನವು ಕ್ರಿ.ಶ. ೧೯೧೮ ನೇ ಮಾರ್ಚ ೨೫ ನೇ ತಾರೀಖಿನ ದಿವಸ ಶ್ರೀಜಗದ್ಗುರು ವೀರಸಿಂಹಾಸನಾಧೀಶ್ವರ ಪಂಚಾಕ್ಷರಶಿವಾಚಾರ್ಯ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು.

ಪ್ರಥಮತಃ ಪಂಚಾಚಾರ್ಯರ ಸ್ತೋತ್ರವಾದನಂತರ ಸ್ವಾಗತಾಧ್ಯಕ್ಷರಾದ ಅಬ್ಬೀಗೇರಿ ಹಿರೇಮಠಾಧ್ಯಕ್ಷ ಶ್ರೀಪಟ್ಟದವೀರಭದ್ರಶಿವಾಚಾರ್ಯರು ಸ್ವಾಗತಭಾಷಣವನ್ನು ಸವಿಸ್ತಾರವಾಗಿ ಮಾಡಿದರು. ನಂತರ ಸಭಾಧ್ಯಕ್ಷರ ಪ್ರಾಸ್ತಾವಿಕ ಭಾಷಣವಾಗಿ ಸಂಗೀತ ಕಾರ್ಯಕ್ರಮಗಳು ನಡೆದು ಉದಯಕಾಲದ ಸಭಾಕಾರ್ಯಕ್ರಮಗಳು ಮುಗಿದ ಬಳಿಕ ಸಾಯಂಕಾಲದ ಕಾರ್ಯಕ್ರಮಗಳಲ್ಲಿ ಅನೇಕ ವಿದ್ವಾಂಸರ ಉಪನ್ಯಾಸಗಳು ಜರುಗಿದವು.

ಎರಡನೆ ದಿವಸ ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸಭೆಯು ಜರುಗಿತು. ಮೂರನೇ ದಿವಸ ಕೇದಾರಪೀಠಾಧೀಶರ ಪ್ರತಿನಿಧಿ

ಗಳಾಗಿ ಬಂದಿದ್ದ ಶ್ರೀ ನೀಲಕಂಠಶಿವಾಚಾರ್ಯರು ಅಧ್ಯಕ್ಷರಾಗಿ ಉಪದೇಶ ವನ್ನಿತ್ತರು. ನಾಲ್ಕನೆಯ ದಿವಸ ಗುಂತಕಲ್ಲ ಮಠದಲ್ಲಿ ವಾಸವಾಗಿದ್ದ ಶ್ರೀಶ್ರೈಲಜಗದ್ಗುರು ನಾಗಲೂಟಿ ಭಿಕ್ಷಾವರ್ತಿ ಮಹಾಸ್ವಾಮಿಗಳವರು ಸಭಾಧ್ಯಕ್ಷರಾಗಿ ಕಾರ್ಯ ನಡೆಸಿದರು. ಐದನೇದಿವಸ ಶ್ರೀಕಾಶೀ ಜ್ಞಾನ ಸಿಂಹಾಸನಾಧೀಶ್ವರ ಶ್ರೀ ೧೦೮ ಜಗದ್ಗುರು ಶಿವಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಅಧ್ಯಕ್ಷತೆವಹಿಸಿ ಸಭಾಕಾರ್ಯವನ್ನು ಪ್ರಾರಂಭಿಸಿದರು. ಹೀಗೆ ೫ ದಿನಗಳವರೆಗೂ ಅಪರಿಮಿತಜನಸ್ತೋಮದಿಂದಲೂ ಪಂಡಿತರ ಉಪನ್ಯಾಸಗಳಿಂದಲೂ ಧಾರ್ಮಿಕವಿಷಯಗಳ ಪರಿಶೀಲನೆಯಿಂದಲೂ ನಯನಮನೋಹರವಾಗಿ ನಡೆದ ಈ ಸಭೆಯಲ್ಲಿ ಕೆಳಗೆ ಕಾಣಿಸಿದ ಗೊತ್ತು ವಳಿಗಳನ್ನು ಅಂಗೀಕರಿಸಲಾಯಿತು.

ಈ ಯಾವತ್ತು ಸಭೆಯ ಕಾರ್ಯಕ್ರಮಗಳನ್ನು ಕಾರ್ಯದರ್ಶಿ ಗಳಾಗಿ ನಡೆಯಿಸಿಕೊಂಡು ಹೋಗುತ್ತಿದ್ದ ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳು ಶ್ರೀಪಂಚಜಗದ್ಗುರುಗಳ ಐಕ್ಯತೆ, ಪಟ್ಟಚರಾಧಿಕಾರಿಗಳ ಜಾಗ್ರತೆ, ಧರ್ಮ ಗ್ರಂಥಗಳ ಪ್ರಚಾರ, ಈ ವಿಷಯಗಳನ್ನು ಕುರಿತು ತಮ್ಮ ಅಸ್ಖಲಿತವಾಣಿ ಯಿಂದ ಐದುದಿನಗಳ ಕಾಲ ದೀರ್ಘ ಉಪನ್ಯಾಸವನ್ನು ಮಾಡಿ ಶ್ರೋತೃಗಳ ಚಿತ್ತಾಕರ್ಷಣದ ಮೇರೆಗೆ ಕೆಳಕಂಡ ಅಮೌಲ್ಯಗೊತ್ತುವಳಿಗಳನ್ನು ಮಂಡಿಸಿ ಶ್ರೇಯಸ್ಸು ಪಡೆದರು.

## ಗೊತ್ತುವಳಿಗಳು

೧. ಶ್ರೀಜಗದ್ಗುರು ಪಂಚಪೀಠಾಧಿಪತಿಗಳು ಪರಸ್ಪರ ಪ್ರೇಮಭಾವನೆ ಯಿಂದ ಶಿಷ್ಯರನ್ನುದ್ಧರಿಸುವುದು

೨. ಪೀಠಾಚಾರ್ಯರು ಪ್ರತಿವರ್ಷ ತಮ್ಮ ಸಂಚಾರಕ್ಕಾಗಿ ಶಿಷ್ಯಕೋಟಿ ಯಲ್ಲಿರುವ ಪ್ರಾಂತಗಳನ್ನು ವಿಭಾಗಿಸಿಕೊಳ್ಳುವುದು. (ಅಂದರೆ ಒಬ್ಬ ಪೀಠಾ ಚಾರ್ಯರು ಸಂಚರಿಸುವ ಭಾಗದಲ್ಲಿ ಆವಾಗ್ಗೆ ಮತ್ತೊಬ್ಬಪೀಠಾಚಾರ್ಯರು ಸಂಚರಿಸಕೂಡದು).

೩. ಶ್ರೀ ಜಗದ್ಗುರುಗಳವರು ತಮ್ಮ ಪೀಠಗಳ ಉತ್ತರಾಧಿಕಾರಕ್ಕೆ ತಾವಿರುವಾಗಲೇ ಯೋಗ್ಯಗುರು-ವಂಶ ಸಂಜಾತರೂ, ಶಿವಯೋಗಸಾಧಕರೂ

ಮತ್ತು ಸದ್ಗುಣಸಲ್ಲಕ್ಷಣ ಸಕಲ ಶಾಸ್ತ್ರಪಾರಂಗತರಾದಂಥಾ ವಟುಗಳನ್ನೇ ನೇಮಕಮಾಡಿಕೊಳ್ಳುವುದು.

೪. ಪಂಚಸಿಂಹಾಸನ ಮಠಗಳಿಗಾಗಲಿ, ಶಾಖಾಮಠಗಳಿಗಾಗಲಿ, ಪಟ್ಟ-ಚರ ಎಂಬ ಎರಡೆರಡು ಅಧಿಕಾರಗಳನ್ನು ಮಾಡಕೂಡದು. (ಅಂದರೆ ಒಂದೇ ಅಧಿಕಾರವಿರಬೇಕು).

೫. ಶಾಖಾ ಮಠಗಳಿಗೆ ಪಟ್ಟಾಧಿಕಾರ ಅಥವಾ, ಚರಾಧಿಕಾರ ಮಾಡ ಬೇಕಾದರೆ ಪಂಚಸಿಂಹಾಸನಗಳಲ್ಲಿ ಸಗೋತ್ರೀಯ ಸಿಂಹಾಸನಾಧೀಶ್ವರರಿಂದ ಸಾಧ್ಯವಾಗದಿದ್ದರೆ ಉಳಿದ ಸಿಂಹಾಸನದವರಿಂದ ಅಪ್ಪಣೆ ಪಡೆದುಕೊಂಡು ಪದ್ಧತಿಪ್ರಕಾರ ಅಧಿಕಾರವನ್ನು ಮಾಡತಕ್ಕದ್ದು.

೬. ವೈದಿಕ ವಾಙ್ಮಯವನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನೇರ್ಪಡಿಸುವದು.

೭. ವೀರಶೈವ ಸಮಾಜ ಸುಧಾರಣೆಗಾಗಿ ಪಟ್ಟಚರಾಧಿಕಾರಿಗಳೂ, ಪಂಡಿತರೂ, ಸಂಚರಿಸುತ್ತಾ ಉಪನ್ಯಾಸ ಕಾರ್ಯಕ್ರಮಗಳನ್ನು ಜರುಗಿಸಿ ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರಗಳ ವಿಷಯಗಳನ್ನು ತಿಳಿಯಪಡಿಸಿ ಭಕ್ತರನ್ನು ಆಚಾರ ಸಂಪನ್ನರಾಗಿ ಮಾಡಲು ಪ್ರಯತ್ನಪಡುವುದು.

೮. ವೀರಶೈವ ಸಂಬಂಧವಾದ ಪ್ರಾಚೀನ ಸಂಸ್ಕೃತ ಗ್ರಂಥಗಳಿಗೆ ಕನ್ನಡ, ಆಂಧ್ರ, ಹಿಂದಿ, ಮರಾಠಿ ಇತ್ಯಾದಿ ಭಾಷೆಗಳ ವ್ಯಾಖ್ಯಾನಗಳನ್ನು ಬರೆಯಿಸಿ ಮುದ್ರಣಗೊಳಿಸಿ ಎಲ್ಲಾ ಕಡೆಗೂ ಪ್ರಚಾರಕ್ಕೆ ತರಲು ಧೀಮಂತರೂ ಶ್ರೀಮಂತರೂ ಪ್ರಯತ್ನಪಡತಕ್ಕದ್ದು.

೯. ವೀರಶೈವರಿಗೆ ಮೂಲಾಧಾರವಾದ ಶಿವಾಗಮ ಪ್ರತಿಪಾದಿತ ಸಿದ್ಧಾಂತ ಪ್ರಚಾರಕ್ಕಾಗಿ "ಪಂಚಾಚಾರ್ಯಪ್ರಭಾ" ಎಂಬ ವಾರಪತ್ರಿಕೆ ಯನ್ನು ಬೇಗನೆ ಪ್ರಕಟಣೆಗೊಳಿಸುವ ವ್ಯವಸ್ಥೆ ಮಾಡುವದು.

೧೦. ವೀರಶೈವ ಸಮಾಜದಲ್ಲಿ ನಡೆಯುವ ಲಿಂಗಧಾರಣ, ದೀಕ್ಷಾ, ವಿವಾಹ ಮೊದಲಾದ ಕಾರ್ಯಗಳಲ್ಲಿ ಉಪಾಚಾರ್ಯರು ಪಂಚ ಕಲಶ ಸ್ಥಾಪನ ಪೂರ್ವಕ ವೇದೋಕ್ತ ಕ್ರಮಗಳನ್ನನುಸರಿಸಿಕೊಳ್ಳಬೇಕು. ಮತ್ತು ಈ ಎಲ್ಲಾ ವೈದಿಕ ಭಾಗದಲ್ಲಿ ಬಂದ ಹಣವನ್ನು ಸಂಸ್ಕೃತ-ಓದುವ

ವಿದ್ಯಾರ್ಥಿಗಳಿಗೆ ಉಪಯೋಗವಾಗಲೆಂಬುದ್ದೇಶದಿಂದ ಶ್ರೀಕಾಶೀವಿಶ್ವಾರಾಧ್ಯ ಪೀಠದ ಪ್ರಸಾದ ನಿಲಯಕ್ಕೆ ಕಳುಹಿಸತಕ್ಕದ್ದು.

೧೧. ಕಾಡ್ಲೂರು ವೀರಭದ್ರಸ್ವಾಮಿ ಎಂಬುವರು ಶ್ರೀಶೈಲಪೀಠದವರೆಂದು ಸಂಚರಿಸುತ್ತಾ ಕಾಣಿಕೆ ಎತ್ತುತ್ತಿರುವುದನ್ನು ಸಮಾಜದವರು ಕೂಡಲೇ ನಿರ್ಬಂಧಿಸುವುದು.

೧೨. ಧಾರ್ಮಿಕ ಕಾರ್ಯಗಳಿಗೆ ಹೆಚ್ಚಾಗಿ ಸಹಾಯ ಸಹಾನುಭೂತಿಯನ್ನು ಸಲ್ಲಿಸುತ್ತಿರುವ ರಾಜರ್ಷಿ ಮೈಸೂರು ಶ್ರೀಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ ಅವರಿಗೆ ಹಿತೋಪ್ಯತಿಶಯ ಶ್ರೇಯಸ್ಸು ಮತ್ತು ದೀರ್ಘಾಯುಷ್ಯವು ಪ್ರಾಪ್ತವಾಗಲೆಂದು ಈ ಸಭೆ ಹಾರೈಸುವುದು.

೧೩. ಮೊದಲನೇ ಮಹಾ ಯುದ್ಧದಲ್ಲಿ ಬ್ರಿಟಿಷ್ ಸಾಮ್ರಾಜ್ಯಕ್ಕೆ ವಿಜಯ ದೊರೆತದ್ದಕ್ಕಾಗಿ ಬ್ರಿಟಿಷ್ ಪಂಚಮ ಜಾರ್ಜ್‌ರವರಿಗೆ ಈ ಸಭೆಯು ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಈ ರೀತಿಯಾಗಿ ಶ್ರೀಜಗದ್ಗುರು ಪಂಚಾಚಾರ್ಯರ ಮೊದಲನೇ ಸಮ್ಮೇಲನವನ್ನು ಯಶಸ್ವಿಗೊಳಿಸಿದವರಲ್ಲಿ ನಮ್ಮ ಚರಿತ್ರ ನಾಯಕರಾದ ಶ್ರೀಕಾಶೀನಾಥಶಾಸ್ತ್ರಿಗಳವರ ಪಾತ್ರವು ಹಿರಿದಾಗಿರುತ್ತದೆ.

## ಶ್ರೀಕಾಶೀ ಜಗದ್ಗುರುಗಳ ಕೃಪಾಶೀರ್ವಾದ

ವೇ|| ಶ್ರೀ ಕಾಶೀನಾಥ ಪಂಡಿತರು ಕಾಶೀ ಕ್ಷೇತ್ರದಿಂದ ನಮ್ಮ ಕರ್ನಾಟಕ ದೇಶಕ್ಕೆ ಧರ್ಮಪ್ರಚಾರಕ್ಕಾಗಿ ಹೊರಡಲು ಶ್ರೀಜಗದ್ಗುರು ಶಿವಲಿಂಗಶಿವಾಚಾರ್ಯ ಮಹಾಸ್ವಾಮಿಗಳವರಲ್ಲಿ ವಿಜ್ಞಾಪನೆಮಾಡಿಕೊಂಡರು. ಆವಾಗ್ಗೆ ಜಗದ್ಗುರುಗಳು ಕರುಣಾರ್ದ್ರಹೃದಯದಿಂದ ತಮ್ಮಾ! ಕಾಶೀನಾಥಾ? ನೀನು ಕುಶಲಾಗ್ರಬುದ್ಧಿಯುಳ್ಳವನು. ಇಷ್ಟೇ ಅಲ್ಲ ಸರ್ವ ಸಮ್ಮತವಾದ ಧರ್ಮದ ಏಳಿಗೆಯ ಬಗ್ಗೆ ಕಳಕಳಿಯುಳ್ಳವನಾಗಿರುವಿ; ಇವೆಲ್ಲ ಸದ್ಗುಣಗಳು ನಿನ್ನ ಉತ್ತರೋತ್ತರ ಅಭಿವೃದ್ಧಿಗೆ ಕಾರಣವಾದವುಗಳಾಗಿರುತ್ತವೆ. ಹೀಗೆ ಕಾರ್ಯಕರ್ತನಾಗಿ ನಡೆದದ್ದಾದರೆ ಸಮಾಜದಲ್ಲಿ ನೀನೊಬ್ಬ

ಗಣ್ಯವ್ಯಕ್ತಿಯಾಗಿ ಪ್ರಕಾಶಕ್ಕೆ ಬರುವಿ. ಆದಕಾರಣ ನೀನು ನಿಮ್ಮ ದೇಶಕ್ಕೆ ಹೋಗಿ ಸಕಲರಂತೆ ಮನೆಯ ಕೆಲಸದಲ್ಲಿ ತೊಡಗಬೇಡ. ಸಂಸಾರಲಂಪಟನಾಗಬೇಡ. ಹೊಟ್ಟೆಪಾಡಿಗಾಗಿ ಕಾಲಹರಣ ಮಾಡಬೇಡ. ಪರರ ಹಂಗಿಗೆ ಬಿದ್ದು ನಿನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳಬೇಡ. ಬ್ರಹ್ಮಚರ್ಯವ್ರತನಿಷ್ಠನಾಗಿ ಪಂಚಾಚಾರ್ಯರ ಸೇವೆಯನ್ನು ನಿಷ್ಠೆಯಿಂದ ಮಾಡು. ನಿನ್ನ ಮನಸ್ಸಿನಂತೆ ಸಕಲ ಕಾರ್ಯಗಳು ದಿಗ್ವಿಜಯವಾಗುತ್ತವೆ. ಎಂದು ಸುದೀರ್ಘವಾದ ಆಶೀರ್ವಾದವನ್ನು ಮಾಡಿ ಜಂಗಮ ರೂಪಿಷಣ್ಮುಖನು ಕೊಟ್ಟು ಹೋಗಿದ್ದ ಯೋಗದಂಡವನ್ನು ದಯಪಾಲಿಸಿದರು.

ಶ್ರೀ ಜಗದ್ಗುರುಗಳಿಂದ ದೊರೆತ ಕೃಪಾಪೂರ್ಣ ಆಶೀರ್ವಾದವನ್ನು ಶಿರದಲ್ಲಿ ತಳೆದ ಕಾಶೀನಾಥಶಾಸ್ತ್ರಿಗಳು ಆ ಯೋಗದಂಡವನ್ನು ಕೈಯ್ಯಲ್ಲಿ ಧರಿಸಿಕೊಂಡು ಮಹಾಸ್ವಾಮಿ! ಸುಮಾರು ಎಂಟುನೂರು ವರ್ಷಗಳಿಂದೀಚೆಗೆ ಕಂಡುಬಂದಿರುವ ವಿರಕ್ತರು ಅಪಾರ ಸಂಪತ್ತುಳ್ಳವರಾಗಿ ಮಠಮಂದಿರಗಳನ್ನು ರಾಜಭವನದಂತೆ ಕಟ್ಟಿಸಿಕೊಂಡು ಮೆರೆಯುತ್ತಿರುವರಲ್ಲ ಇದು ಏನು ಕಾರಣ? ಎಂದು ಕೇಳಿಕೊಂಡದ್ದಕ್ಕೆ ಗುರುಗಳು ಕಾಶೀನಾಥಾ! ಕೇಳು— ವಿರಕ್ತರು ಬಸವಣ್ಣನ ಕಾಲದಿಂದ ಬಂದವರು. ಕಲ್ಯಾಣದಲ್ಲಿ ಮಂತ್ರಿಗಳಾಗಿದ್ದ ಬಸವಣ್ಣನವರು ಶರಣರ ಸೈನ್ಯವನ್ನು ಕಟ್ಟಿಕೊಂಡು ರಾಜ್ಯಭಾರ ನಡೆಸಿದರು. ದೊರೆ ಬಿಜ್ಜಳನಿಗೂ, ಆ ಶರಣರಿಗೂ ವೈಷಮ್ಯ ಹುಟ್ಟಿ ಆ ವೈಷಮ್ಯದಲ್ಲಿ ರಾಜನು ಮಡಿದುಹೋಗಲು ಜೈನರ ಸೈನ್ಯವು ಶರಣರ ಸೈನ್ಯವನ್ನು ದಿಕ್ಕುಪಾಲಾಗಿ ಓಡಿಸಿತು. ಕೆಲವರನ್ನು ನಾಮಶೇಷಮಾಡಿತು. ಆ ಕದನದಲ್ಲಿ ಉಳಿದುಕೊಂಡ ಜಂಗಮಶರಣರು ಅಲ್ಲಿಗೆ ತಮ್ಮ ಪುಂಡಾಟಿಕೆಯನ್ನು ಬಿಟ್ಟು ಸಾಧುವರ್ತನವುಳ್ಳವರಾದರು. ಅಲ್ಲಿಂದ ಕರ್ನಾಟಕದಲ್ಲಿ ಹಳ್ಳಿಗೊಬ್ಬರಂತೆ ನಿಂತುಕೊಂಡು, ಗುರುವರ್ಗದ ಮಠಗಳನ್ನಾಶ್ರಯಿಸಿಕೊಂಡು ದಾಸೋಹ ನಡೆಸಿಕೊಳ್ಳುತ್ತಿದ್ದರು. ಬರಬರುತ್ತ ಜನರ ಪ್ರೇಮ ಸಂಪಾದಿಸಿಕೊಂಡು ಆ ಯಾವ ಮಠದಲ್ಲಿ ವಾಸವಾಗಿದ್ದರೋ ಅವೆಲ್ಲ ಮಠಗಳನ್ನು ಸ್ವಾಧೀನಪಡಿಸಿಕೊಂಡು ಸುಖವಾಗಿ ಬಾಳಹತ್ತಿದರಲ್ಲದೆ, ದಾಸೋಹದ ಹೆಸರಿನಿಂದ ಭಿಕ್ಷಾಟನ ಮಾಡಿಕೊಂಡು ಅದರಿಂದ ಅಪಾರ ಆಸ್ತಿಗಳನ್ನು ಗಳಿಸಿಕೊಂಡರು. ಮಠಮಂದಿರಗಳನ್ನು ಕಟ್ಟಿಸಿಕೊಂಡರು ಎಂದರು.

ಆಗ ಶಾಸ್ತ್ರಿಗಳು ಗುರುಗಳಿಗೆ ಕೈಮುಗಿದು ಗುರುದೇವ ಇವರಿಗೆ ಯಾವ ಆಶ್ರಮದವರೆನ್ನಬೇಕು ಎಂದು ಕೇಳಿಕೊಂಡದ್ದಕ್ಕೆ ಅಯ್ಯಾ! ಇವರು ಬಸವಣ್ಣನಿದ್ದಾಗ್ಗೆ ಮಾಹೇಶ್ವರವಂಶದ ಅಯ್ಯಗಳು. ಇವರಲ್ಲಿ ಕೆಲವರು ಗೃಹಸ್ಥರಿದ್ದರು. ಕೆಲವರು ಬ್ರಹ್ಮಚಾರಿಗಳಿದ್ದರು, ಬಾಲಕರಿದ್ದರು, ಮತ್ತು ಕೆಲವರು ವಯೋವೃದ್ಧ ವಾನಪ್ರಸ್ಥಾಶ್ರಮಿಗಳಿದ್ದರು. ಇವರು ಬಸವಾದಿ ಶರಣರ ಮನೆಯಲ್ಲಿ ಸುಖವಾಗಿ ಊಟಮಾಡಿಕೊಂಡು ಅವರು ಕೊಟ್ಟ ಹಣದಿಂದ ಪುಂಡಾಟಕೆ ಮಾಡಿಕೊಳ್ಳುತ್ತಾ ತಿರುಗುತ್ತಿದ್ದರು. ಆಗ್ಗೆ ಅವರಿಗೆಲ್ಲ ಪುಂಡಜಂಗಮರು ಮಿಂಡಜಂಗಮರು ಎಂದು ಕರೆಯುತ್ತಿದ್ದರಂತೆ. ಅವರು ಮುಂದೆ ಕಲ್ಯಾಣದಿಂದ ಕದಲಿದ ಬಳಿಕ ಪ್ರಸಾದಕ್ಕೆ ಅಭಾವವಾಗಿ ಅವರು ಕಾವಿಲಾಂಛನ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ಭಿಕ್ಷೆಮಾಡಿಕೊಂಡು ಬಂದು ಜೀವಿಸಲಾರಂಭಿಸಿದರು. ಹಾಗೇ ಕಾಲಕ್ರಮದಂತೆ ಆರ್ಥಿಕ ಪರಿಸ್ಥಿತಿಯಿಂದ ಸುಧಾರಿಸಿಕೊಂಡು ಪ್ರಸಿದ್ಧಿಗೆ ಬಂದಿದ್ದಾರೆ ಎಂದುದಕ್ಕೆ—

ಮಹಾಸ್ವಾಮೀ:—ಇವರನ್ನು ನಮ್ಮ ಸಮಾಜದಲ್ಲಿ ಯಾರೆಂದು ಮನ್ನಿಸಬೇಕು. ಇವರು ಬರೀ ದಾಸೋಹ ಮೂರ್ತಿಗಳೆಂದೇ ತಿಳಿಯಬೇಕೆ ?ಧರ್ಮದಲ್ಲಿ ಇವರಿಗೆ ಯಾವ ಅಧಿಕಾರಗಳು ಇಲ್ಲವೇ ? ಎಂದು ಶಾಸ್ತ್ರಿಗಳು ಕೇಳಿಕೊಂಡರು. ಆಗ ಗುರುಗಳು ಅಪ್ಪಣೆ ಕೊಡಿಸುತ್ತಾ ನಮ್ಮ ಪಂಚಪೀಠಗಳಲ್ಲಿ ಅವರ ಬಗ್ಗೆ ಯಾವ ಆಧಾರಗಳೂ ಇಲ್ಲ. ಪರಂತು ೧೨ ನೇ ಶತಮಾನದಲ್ಲಿ ವಿರಕ್ತರು ದಾಸೋಹಕ್ಕೆ ಭಿಕ್ಷೆ ಮಾಡಲು ಸಂಚರಿಸಲಿಕ್ಕಾಗಿ ಪಂಚಪೀಠಗಳಲ್ಲಿ ಯಾವದಾದರೊಂದು ಗುರುಪೀಠದಿಂದ ಅಪ್ಪಣೆ ಪಡೆದುಕೊಂಡು ಸಂಚರಿಸುತ್ತಿದ್ದರೆಂದು ಕೆಲವು ಆಧಾರಗಳಿಂದತಿಳಿದು ಬರುತ್ತದೆ.

ಗುರುಸಾರ್ವಭೌಮ ? ಅಂಥ ಆಧಾರಗಳು ಬಾಳೆಹೊನ್ನೂರು ಪೀಠದಲ್ಲಿಯೂ ಉಜ್ಜಯಿನೀ ಪೀಠದಲ್ಲಿಯೂ ಇರುತ್ತವೆಂದು, ತಿಳಿದುಬಂದಿದೆ. ಹಾಗಿದ್ದರೆ ಇಲ್ಲಿಯುವರೆಗೆ ಏಕೆ ಆ ಪದ್ಧತಿ ಬಂದಿಲ್ಲ. ಆಗ್ಗೆ ಅಪಾರ ಆಸ್ತಿಗಳನ್ನು ಮಾಡಿಕೊಂಡು ಸುಖದಿಂದಿರುತ್ತಿರಲಿಕ್ಕಾಗಿ ಅವರಿಗೆ ಭಿಕ್ಷಾಟನದ ಅವಶ್ಯವೇನಿತ್ತು. ಮತ್ತು ಭಕ್ತರು ಅವರ ಮಠಗಳಿಗೆ ತಮ್ಮ ಮಕ್ಕಳನ್ನು ಕೊಟ್ಟು ಸಂಬಂಧ ಬೆಳಿಸಿಕೊಂಡ ಕಾರಣವೇನು ? ಮಾಹೇಶ್ವರ ವಟುಗಳು ಸಿಗುತ್ತಿದ್ದಿಲ್ಲವೇ ? ಎಂದು ಪಂಡಿತರು ಕೇಳಿಕೊಂಡದ್ದಕ್ಕೆ ತಮ್ಮಾ!

ಆದರ ಪರ್ಯಾಯ ಹೀಗಿದೆ ಕೇಳು—ವಿರಕ್ತರು ಅನಧಿಕಾರಿಗಳಾಗಿದ್ದು ಗುರುವರ್ಗದವರಂತೆ ತಾವೂ ಸಮಾಜದಲ್ಲಿ ಅಧಿಕಾರ ನಡೆಸಲು ಉದ್ಯುಕ್ತ ರಾದರು. ಆಗ್ಯೆ ಗುರುವರ್ಗದ ಮಠದವರಿಗೂ, ವಿರಕ್ತ ಮಠದವರಿಗೂ ಕಲಹಗಳು ಹುಟ್ಟಿ ವಿರಕ್ತ ಮಠಗಳಿಗೆ ಮಾಹೇಶ್ವರ ವಟುಗಳನ್ನು ಕೊಡ ಬಾರದೆಂದು ನಿರ್ಬಂಧಮಾಡಿಕೊಂಡದ್ದರಿಂದ ವಿರಕ್ತರು ಅಂಥಾ ಅನಿವಾರ್ಯ ಪ್ರಸಂಗದಲ್ಲಿ ಭಕ್ತರ ವಟುಗಳನ್ನು ಸ್ವೀಕರಿಸಿಕೊಂಡು ತಮ್ಮ ಮಠಗಳಿಗೆ ಮೂರ್ತಿಗಳನ್ನಾಗಿ ಮಾಡಿಕೊಳ್ಳುತ್ತಾ ಬಂದಿದ್ದಾರೆ.

ಓಹೋ! ಪೂಜ್ಯ ಜಗದಾಚಾರ್ಯವರ್ಯರೇ? ತಿಳಿಯಿತು. ಈ ಗುರುವಿರಕ್ತರ ಕಲಹವು ಈ ಮೊದಲೇ ಹುಟ್ಟಿದೆಯೆಂದು ತಿಳಿದುಬಂದಂತಾ ಯಿತು. ತಮ್ಮಾ ಇಷ್ಟೇ ಅಲ್ಲ. ಯಾವ ಕಲ್ಯಾಣಕ್ಕೆ ಅಲ್ಲಮನು ಬಂದು ಲಿಂಗಧಾರಣಕ್ಕೆ ಒಪ್ಪಿ ಪ್ರಸಿದ್ಧನಾದನೋ ಆವಾಗ್ಗೆ ಕೆಲ ಜನರು ಆತನನ್ನು ಶಿವಾನುಭವ ಸಭೆಗೆ ಅಧ್ಯಕ್ಷನನ್ನು ಮಾಡಲು, ಗುರುವರ್ಗದವರು ಕೋಲಾ ಹಲವೆಬ್ಬಿಸಿ ಅಲ್ಲಮನನ್ನು ಕೆಲವೇ ದಿವಸಗಳಲ್ಲಿ ಕಲ್ಯಾಣದಿಂದ ಕದಲಿಸಿ ಗುರುವರ್ಗದ ಪ್ರತಿಷ್ಠೆಯನ್ನು ಉಳಿಸಿಕೊಂಡರೆಂಬ ವಿಷಯವು ಸುವರ್ಣಾ ಕ್ಷರಗಳಿಂದ ಬರೆಯಲ್ಪಡುವಂಥಾದ್ದಾಗಿದೆ. ಇದು ಶೂನ್ಯಸಂಪಾದನೆ ಮೊದ ಲಾದ ಗ್ರಂಥಗಳಿಂದ ತಿಳಿದುಬರುತ್ತದೆ.

ಜಗದ್ವಂದ್ಯರೇ! ಅಲ್ಲಮನು ಮೊದಲು ವೀರಶೈವನಲ್ಲವೆ? ಮತ್ತು ಸನ್ಯಾಸಿಯಲ್ಲವೇ? ಅಲ್ಲ, ಅಲ್ಲ. ಆ ಯಾವ ಅಲ್ಲಮನು ವೀರಶೈವಧರ್ಮದಲ್ಲಿ ಜನಿಸಿದವನಲ್ಲ. ಅವನ ಹೆಸರು ಅಲ್ಲಮ ಎಂದಿರುವುದರಿಂದಲೂ, ಫಕೀರರಂತೆ ಮೃದಂಗ ಬಾರಿಸಿ ಪದ ಹೇಳುತ್ತಿದ್ದುದರಿಂದಲೂ, ಅವನು ತನ್ನ ವಚನಗಳಲ್ಲಿ ಕರ್ಮವನ್ನು ಸಂಪೂರ್ಣ ಖಂಡಿಸಿ ಜ್ಞಾನವೇ ಅಧಿಕವೆಂದು ಸಾರಿದ್ದ ರಿಂದಲೂ, ನಿರಾಕಾರವಸ್ತುವೇ ಶ್ರೇಷ್ಠವೆಂದು ಹೊಗಳುತ್ತಾ ಬಂದುದರಿಂ ದಲೂ, ಕೇವಲ ಮುಸಲ್ಮಾನ ಧರ್ಮದವನಾಗಿರಬೇಕೆಂದು ಊಹಿಸಲಾಗು ತ್ತದೆ. ಆಹಾ! ಶಿವ ಶಿವ, ಮುಸಲ್ಮಾನ ಧರ್ಮದವನಾಗಿದ್ದರೂ ವೀರಶೈವ ಸನ್ಯಾಸಿಯಾಗಿದ್ದನೋ? ಇಲ್ಲವಯ್ಯ ಅವನು ಮಾಯಾಂಗನೆಯೆಂಬವಳಲ್ಲಿ ಪ್ರೀತಿ ಬೆಳಸಿಕೊಂಡಿದ್ದು ಅವಳು ನರ್ತನಮಾಡುವಕಾಲಕ್ಕೆ ಇವನು ಮೃದಂಗ ಬಾರಿಸಿಕೊಂಡು ಹೊಟ್ಟೆಹೊರೆಯುತ್ತಿರಬೇಕೆಂದೂ ಹೀಗೆ

ಕೆಲದಿನ ನಡೆಯುತ್ತಿರುವಷ್ಟರಲ್ಲಿ ಮಾಯಾಂಗನೆಯು ಅಕಸ್ಮಾತ್ತಾಗಿ ಕಾಲವಶಳಾಗಲು ಅವಳ ವಿಯೋಗದಿಂದ ಅಲ್ಲಮನಿಗೆ ಭ್ರಮೆಹಿಡಿದು ಕಾಡುಗಳಲ್ಲಿ ಸಂಚರಿಸುತ್ತ ಒಂದೆಡೆಯಲ್ಲಿ ಅನಿಮೇಷದೇವರಿಂದ ಲಿಂಗ ಪಡೆದುಕೊಂಡು ಜ್ಞಾನಿಯಾಗಿ ಕಲ್ಯಾಣಕ್ಕೆ ಬಂದು ಬೆಳಕಾದನೆಂಬ ವಿಷಯವನ್ನು ಸುಪ್ರಸಿದ ಕವಿಯಾದ ಹರಿಹರದೇವನು ತನ್ನ ರಗಳೆಯಲ್ಲಿ ಸ್ಪಷ್ಟವಾಗಿ ಬರೆದಿದ್ದಾನೆ.

ಗುರುಸಾರ್ವಭೌಮ ! ತಮ್ಮ ಸಂಭಾಷಣೆಯಿಂದ ಅನಂತ ವಿಚಾರಗಳು ತಿಳಿಯಲ್ಪಟ್ಟವು. ನಾನಿಂದಿನಿಂದ ಜಾಗೃತನಾಗಿ ಸನಾತನ ವೀರಶೈವ ತತ್ವಗಳನ್ನು ಶಿವಾಗಮಸಿದ್ಧಾಂತಮಾರ್ಗದಂತೆ ಎತ್ತಿ ಹಿಡಿದು ನಡೆಯಲಾರಂಭಿಸುತ್ತೇನೆ. ಗುರುವರ್ಗದ ಚಳುವಳಿಯನ್ನು ನಮ್ಮ ಕರ್ನಾಟಕದಲ್ಲಿ ಮೊದಲು ಪ್ರಾರಂಭಿಸುತ್ತೇನೆ. ಕೆಲವೇ ದಿವಸಗಳಲ್ಲಿ ಗುರುವರ್ಗದ ಸಂಘಟನೆಯನ್ನು ಮಾಡಿಕೊಂಡು ಮತಸ್ಥಾಪನಾಚಾರ್ಯರ ಸಿದ್ಧಾಂತಗಳನ್ನು ಪ್ರಚಾರಗೊಳಿಸಲು ಉದ್ಯುಕ್ತನಾಗುತ್ತೇನೆ. ನನ್ನ ಪ್ರತಿಜ್ಞೆಗಳೆಲ್ಲವು ದಿಗ್ವಿಜಯವಾಗಲೆಂದು ಆಶೀರ್ವಾದವನ್ನು ಬಯಸುತ್ತೇನೆ ಮಹಾಸ್ವಾಮಿ ? ಎಂದು ಪ್ರಾರ್ಥಿಸಿದ ಶ್ರೀಕಾಶೀನಾಥಶಾಸ್ತ್ರಿಗಳಿಗೆ ಕಾಶೀಜಗದ್ಗುರುಗಳು ವಿಜಯಿಯಾಗೆಂದು ಆಶೀರ್ವದಿಸಿ ಕಳುಹಿಸಿಕೊಟ್ಟರು.

## ತಂದೆತಾಯಿಗಳ ಆಶೀರ್ವಾದ

ಪಂಡಿತರು ಕಾಶೀಕ್ಷೇತ್ರದಲ್ಲಿ ವಿರಾಜಿಸುತ್ತಿದ್ದ ಶ್ರೀಜಗದ್ಗುರು ವಿಶ್ವಾರಾಧ್ಯರ ಕೃಪಾಛತ್ರಛಾಯೆಯಲ್ಲಿ ಐದುವರ್ಷಗಳ ಪರ್ಯಂತರ ವಿದ್ಯಾರ್ಜನೆ ಮಾಡಿಕೊಂಡು ಪ್ರಕಾಂಡಪಂಡಿತರೆನಿಸಿಕೊಂಡು ತಮ್ಮ ಜನ್ಮಭೂಮಿಯಾದ ನಾಗನೂರಿಗೆ ಬಂದರು. ಅಲ್ಲಿ ತಂದೆತಾಯ್ಗಳ ಪ್ರೀತಿಗೆ ಪಾತ್ರರಾಗಿ ಕೆಲದಿವಸ ಕಳೆದರು. ಅನಂತರ ಧರ್ಮ ಪ್ರಚಾರಕ್ಕಾಗಿ ಹೊರಡಲು ನಿರ್ಧರಿಸಿ ಸಿದ್ಧರಾದರು. ಅದನ್ನು ತಿಳಿದು ತಂದೆತಾಯಿಗಳು ಆಶ್ಚರ್ಯಪಟ್ಟು ಕುಮಾರಾ ! ಏನಿದು ? ನೀನು ಈವರೆಗೂ ವಿದ್ಯಾಭ್ಯಾಸದಲ್ಲಿದ್ದು ಪ್ರೌಢ ವಯಸ್ಕನಾಗಿರುವಿ ? ಇನ್ನು ವೃಥಾವಯಸ್ಸು ಕಳೆಯದೆ ವಂಶಾಭಿವೃದ್ಧಿಗಾಗಿ ಬೇಗನೆ ಮದುವೆ ಮಾಡಿಕೊಂಡು ಮನೆಯ ವ್ಯವಹಾರವನ್ನು ನಡೆಸಿಕೊಂಡು ಹೋಗುವವನಾಗು ?' ಅತ್ತಿತ್ತ ಮನಬಂದಂತೆ ತಿರುಗಿ ಗತವಯಸ್ಸಿನವ

ನಾದರೆ ಫಲವೇನು? ಇದನ್ನೆಲ್ಲ ಚೆನ್ನಾಗಿ ತಿಳಿದು ವರ್ತಿಸೆಂದು ತಂದೆತಾಯಿಗಳು ಲೋಕಪದ್ಧತಿಯಂತೆ ಬುದ್ಧೀ ಹೇಳಿದರು.

ಅದಕ್ಕೆ ಕಾಶೀನಾಥನು—ಪೂಜ್ಯ ತಂದೆತಾಯಿಗಳೇ! ನಾನು ಲೋಕದಲ್ಲಿ ಹುಟ್ಟಿ ಲೋಕದ ಜನರಂತೆ ವಿದ್ಯಾಬುದ್ಧಿಗಳನ್ನು ಕಲಿತುಕೊಂಡು ಇಷ್ಟು ವಯಸ್ಸಿನವನಾಗಿ ಒಳ್ಳೇ ಯೌವನಾವಸ್ಥೆಗೆ ಬಂದಿದ್ದರೂ ಮದುವೆಮಾಡಿಕೊಂಡು ಸಂಸಾರಿಯಾಗಿ ಜೀವಿಸುವ ಹವ್ಯಾಸಕ್ಕೆ ನನ್ನ ಮನಸ್ಸಿಲ್ಲ. ಆದಪ್ರಯುಕ್ತ ನೀವುಗಳು ನನ್ನಬಗ್ಗೆ ಲೇಶಮಾತ್ರವೂ ಯೋಚಿಸಬೇಡಿರೆಂದು ಪ್ರಾರ್ಥಿಸಿಕೊಂಡನು. ಅಯ್ಯೋ ಮುದುಕ! ನಿನಗೆ ಈ ವೈರಾಗ್ಯವೆಲ್ಲಿಂದ ಬಂದಿತು. ಈ ಚಿಕ್ಕಪ್ರಾಯಕ್ಕೆ ಇಂಥ ಘನವೈರಾಗ್ಯವೇಕೆ? ಒಳ್ಳೇ ಬಲಿಷ್ಠ ಯತಿಗಳು ಕೂಡ ಈ ಮಾಯೆಗೆ ಸಿಲುಕದೆ ಹೋಗಿಲ್ಲ. ವಸಿಷ್ಠನು ತನ್ನ ಮನಸ್ಸಿನಲ್ಲಿ ಮಾಯೆಯನ್ನು ನೆನೆದಮಾತ್ರಕ್ಕೆ ಆಂತರಿಕ ಸಂಸಾರಿಯಾದನಂತೆ; ವಿಶ್ವಾಮಿತ್ರನು ಮಾಯಾಂಗನೆಗೆ ವಶನಾಗಿ ತನ್ನ ತಪೋಭಂಗಮಾಡಿಕೊಂಡನೆಂದು ಹೇಳುವ ಪೌರಾಣಿಕ ಕಥೆಗಳನ್ನು ಕೇಳಿಲ್ಲವೇ! ಇವೆಲ್ಲ ವಿಷಯಗಳನ್ನು ಚನ್ನಾಗಿ ತಿಳಿದು ನೋಡಿ ಪ್ರಪಂಚವಿಡಿದು ಪಾರಮಾರ್ಥವನ್ನು ಸಾಧಿಸು; "ಜಾಣನು ಲೌಕಿಕ ಪರಮಾರ್ಥವೆರಡನು ಮಾಣದೆ ನಡೆಸುತಿಹನಿಂತು" ಎಂದು ನಿಜಗುಣಾರ್ಯರು ಬೋಧಿಸಿದ್ದನ್ನು ಅರಿತುಕೊ? ಲೌಕಿಕ, ಪಾರಮಾರ್ಥಿಕ, ಇವೆರಡೂ ಬೇಕೇ ಬೇಕು. ಇವೆರಡನ್ನು ನಡೆಸಿಕೊಂಡು ಹೋಗುವವನೇ ಈ ಜಗದಲ್ಲಿ ಜಾಣನೆನಿಸಿಕೊಳ್ಳುತ್ತಾನೆ ಎಂದರು.

ಕರುಣಾನಿಧಿಗಳೇ! ನೀವು ನನ್ನನ್ನು ಪೀಡಿಸಬೇಡಿರಿ. ನನಗೆ ಈ ವಿಷಯದಲ್ಲಿ ಕಾಶೀಜಗದ್ಗುರು ಶ್ರೀಶಿವಲಿಂಗಶಿವಾಚಾರ್ಯಮಹಾಸ್ವಾಮಿಗಳ ಮಹೋಪದೇಶ ದೊರೆತಿದೆ. ಅಂದಿನಿಂದ ಸಂಸಾರವೆಂಬುದು ವಿಷವಾಗಿ ತೋರುತ್ತದೆ. ಮಾಯೆಯ ಬಲೆಯಲ್ಲಿ ಬಿದ್ದು ಒದ್ದಾಡುವ ಅಸ್ವಾತಂತ್ರ್ಯವು ನನಗೆ ಬೇಡವೇ ಬೇಡ. ನಾನು ಹೊನ್ನು ಹೆಣ್ಣು ಮಣ್ಣುಗಳಿಗಾಗಿ ಆಶಿಸುವುದಿಲ್ಲ. ಅವುಗಳ ಸಂಪಾದನೆಗಾಗಿ ದುಡಿಯುವುದಿಲ್ಲ. ನನಗೆ ಮನೆಮಾರುಗಳು, ಬಂಧುಬಳಗಗಳು ಬೇಕಾಗಿಲ್ಲ. ನನಗೆ ಪಾರ್ವತಿಪರಮೇಶ್ವರರೇ ತಂದೆತಾಯಿಗಳು, ಪರಮ ಇಷ್ಟಲಿಂಗವೇ ನನ್ನ ಪ್ರಾಣಪತಿ, ಶ್ರೀಮತ್ಪರಮ ಪಂಚಾ

ಚಾರ್ಯರೇ ಬಂಧುಗಳು, ಗುರುಭಕ್ತಿಶೀಲರೇ ನನ್ನ ಹಿತೈಷಿಗಳು ಎಂದು ಭಾವಿಸಿಕೊಂಡಿರುವೆನು. ಈ ನನ್ನ ದೃಢಭಾವನೆಯು ಕಿಂಚಿತ್ತಾದರೂ ಕದಲದು. ಶ್ರೀಜಗದ್ಗುರು ಪಂಚಾಚಾರ್ಯರ ಪ್ರಭಾವವನ್ನು ದಿಕ್ಕು ದಿಕ್ಕಿಗಳಲ್ಲಿ ಪ್ರಕಾಶ ಪಡಿಸುವುದೇ ನನ್ನ ಕರ್ತವ್ಯ; ಆ ಮಹಾಚಾರ್ಯರಿಂದ ಬೋಧಿಸಲ್ಪಟ್ಟ ಅಮೋಘವಾದ ಶಕ್ತಿವಿಶಿಷ್ಟಾದ್ವೈತಸಿದ್ಧಾಂತವನ್ನು ಪ್ರತಿಯೊಬ್ಬರ ಹೃದಯದಲ್ಲಿ ಬಿಂಬಿಸುವಂತೆ ಬೋಧಿಸುವುದೇ ನನ್ನ ವ್ರತ. ಈ ಎಲ್ಲಾ ನನ್ನ ಧ್ಯೇಯಗಳನ್ನು ನಾಶಪಡಿಸಲಿಕ್ಕೆ ಪ್ರಯತ್ನಮಾಡಬೇಡಿರಿ. ಇವೆಲ್ಲ ಶಿವಧರ್ಮದ ಕಾರ್ಯಗಳು ; ಶಿವನಿಂದ ಪ್ರೇರೇಪಿಸಲ್ಪಟ್ಟವುಗಳಾಗಿರುತ್ತವೆ. ಈ ಕಟ್ಟುನಿಟ್ಟಿನ ವ್ರತಕ್ಕೆ ಯಾರು ಆತಂಕಗಳನ್ನು ಒದಗಿಸುತ್ತಾರೋ ಅವರು ಮಹಾ ಪಾಪಿಗಳಾಗಿ ತಕ್ಕ ಪ್ರಾಯಶ್ಚಿತ್ತ ಹೊಂದುತ್ತಾರೆ. ಆದಕಾರಣ ತಾವುಕೂಡ ಆ ದೋಷಕ್ಕೊಳಗಾಗದೆ ನನ್ನ ಉತ್ತರೋತ್ತರ ಅಭಿವೃದ್ಧಿಗೆ ಆಶೀರ್ವದಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡುವಿರೆಂದು ಅನನ್ಯಭಾವನೆಯಿಂದ ಬೇಡುತ್ತೇನೆ ಎಂದಕೂಡಲೆ ತಂದೆತಾಯಿಗಳು ಸಂತೋಷದಿಂದ ಜ್ಞಾನಸಪ್ರಕಾಶನಾದ ಸುಪುತ್ರನೇ ! ನೀನು ನಮ್ಮ ಮಕ್ಕಳಲ್ಲಿ ಮಾತ್ರವಲ್ಲ ಅಖಂಡ ಭಾರತ ಪುತ್ರರಲ್ಲಿ ಪ್ರಖ್ಯಾತನಾಗಿ ಮೆರೆಯುವೆ. ತಾಯಿತಂದೆಗಳು ಮಕ್ಕಳಿಗೆ ಬುದ್ಧೀ ಹೇಳುತ್ತ ಬಂದಿರುವ ಸಂಪ್ರದಾಯವನ್ನು ನೋಡುತ್ತ ಬಂದಿದ್ದ ನಾವಿಂದು ಮಗನಿಂದ ಬುದ್ಧಿವಾದ ಹೇಳಿಸಿಕೊಂಡು ಬೆರಗಾಗಿ ನಿಂತಿದ್ದೇವೆ. ಇಂಥಾ ಬುದ್ಧಿವಾದ ಹೇಳುವ ನೀನೊರ್ವನೇ ಜಗತಿನಲ್ಲಿ ಮಾರ್ಗದರ್ಶಕನಾಗಿ ತೋರುವಿ. ಪ್ರಪಂಚದಲ್ಲಿ ಹೆಣ್ಣಾಗಲಿ ಗಂಡಾಗಲಿ ಹುಟ್ಟಿದ ಬಳಿಕ ತನ್ನ ರಕ್ತವಾಸನೆಗೆ ಎಳೆಸುವುದು ಸ್ವಾಭಾವಿಕ. ಹಾಗೆ ವಾಸನಾ ಅನುರಕ್ತಿಯನ್ನು ಹಿಡಿಯದೆ ಪರಶಿವನ ಕಾರ್ಯಗಳನ್ನು ನೆರವೇರಿಸಬೇಕೆಂಬ ಉತ್ಸುಕತೆಯು ಹೊರ ಹೊಮ್ಮುತ್ತಿರುವುದನ್ನು ನೋಡಿ ಆ ಪರಶಿವನ ಪ್ರೇರಣೆ ನಿನ್ನಲ್ಲಿ ಎಷ್ಟಿರಬಹುದೆಂಬುದನ್ನು ನಾವಿಂದು ಬಣ್ಣಿಸಲಾರೆವು. ಆಗಲಿ ಶಿವನ ಇಚ್ಛೆಗೆ ನಾವು ಭಂಗತರುವುದಿಲ್ಲ. ನೀನು ಸಮಾಜಕ್ಕೆ ಹಿರಿಯವನಾಗಿ ಪಾರ್ವತೀ ಪರಮೇಶ್ವರರಿಗೆ ಪ್ರೀತಿಯಸುತನಾಗಿ ಅವರನ್ನೇ ಸೇರು. ಜಗತ್ಪ್ರಸಿದ್ಧರಾದ ಜಗದ್ಗುರು ಪಂಚಾಚಾರ್ಯರನ್ನೇ ಸರ್ವತ್ರ ಪ್ರಕಾಶಪಡಿಸಿ ನಿನ್ನ ಜನ್ಮ ಸಾರ್ಥಕಗೊಳಿಸು. ವೀರಶೈವರ ಶಕ್ತಿವಿಶಿಷ್ಟಾದ್ವೈತಸಿದ್ಧಾಂತವನ್ನು

ಬೋಧಿಸಿ ಜ್ಞಾನನಿಧಿಯಾಗಿ ಪ್ರಕಾಶಿಸು. ಧರ್ಮಕಾರ್ಯಗಳನ್ನು ಮಾಡಿ ವೀರಶೈವರಿಗೆ ರತ್ನಪ್ರಾಯನಾಗಿ ಕಂಗೊಳಿಸು. ನಿನ್ನ ಪ್ರತಿಜ್ಞೆಗೆ ಭಂಗ ತರುವವರೆಲ್ಲರೂ ಭವಪಾಶಕ್ಕೊಳಗಾಗಲಿ; ಅಂಥವರ ಪ್ರಚಂಡ ಪುಂಡಾಟಿಕೆಯು ಮಿಂಡೆಯರ ಬಾಳಿಗಿಂತ ಕಡೆಯಾಗಿ ಹೋಗಲಿ; ನಿನ್ನ ಜ್ಞಾನ ಜ್ಯೋತಿಯು ಅಮರವಾಗಿ ಬೆಳಗಲಿ; ಎಂದು ಕರುಣಾರ್ದ್ರ ಹೃದಯರಾದ ತಂದೆ ಸಿದ್ಧಯ್ಯನವರು, ತಾಯಿ ನಾಗಮ್ಮನವರು ಸುದೀರ್ಘವಾದ ಹಾರೈಕೆಯೊಡನೆ ಆಶೀರ್ವದಿಸಿದರು.

ತುಂಬಾ ಆನಂದಭರಿತನಾದ ಕಾಶೀನಾಥನು ತಂದೆತಾಯಿಗಳ ಪಾದ ಕಮಲಗಳಿಗೆ ನಮಸ್ಕರಿಸಿ ಪೂಜ್ಯಮಾತಾಪಿತೃವರ್ಯರೇ? ನಾನು ಮಾತಿನಮಲ್ಲನಲ್ಲ. ಪುರಾಣವೈರಾಗ್ಯದ ರಾಮಚಂದ್ರನಲ್ಲ. ಅಹಂಕಾರವಿಶಿಷ್ಟ ದುರ್ಯೋಧನನಲ್ಲ. ಶಿವದ್ರೋಹಮಾಡುವುದಕ್ಕೆ ದಕ್ಷಬ್ರಹ್ಮನಲ್ಲ. ಗುರುದ್ರೋಹ ಮಾಡಲಿಕ್ಕೆ ಇಂದ್ರನಲ್ಲ. ಯಾವುದಕ್ಕೂ ಸಿಕ್ಕದೇ ಇರುವ ನನ್ನ ಸಾತ್ವಿಕ ಹೃದಯ ಕ್ಷೇತ್ರದಲ್ಲಿ ಶ್ರೀಮತ್ಪರಮ ಪಂಚಾಚಾರ್ಯರು ನಿಂತು ನುಡಿಸುತ್ತಿರುವರು. ಆ ಪೂಜ್ಯರ ಧ್ಯಾನವೇ ನನ್ನ ಮನದಲ್ಲಿ ತುಂಬಿ ತುಳುಕುತ್ತಿದೆ. ಶೈವಾಗಮಗಳ ವಿಚಾರಗಳು ತರತರಂಗವಾಗಿ ಹರಿಯುತ್ತಿವೆ. ಮಹಾಚಾರ್ಯರ ಸಿದ್ಧಾಂತ ಅಕುಂಠಿತವಾಗಿ ಬರಹತ್ತಿದೆ. ಶಿವನ ಪ್ರೇರಣೆಯಂತೆ ಆ ನಿಸರ್ಗಜ್ಯೋತಿ ಮುಂದರಿದು ಹೋಗುತ್ತದೆ. ಧೈರ್ಯವೆಂಬ ಹೆಮ್ಮರಕ್ಕೆ ಗುರುಹಿರಿಯರ ಕರುಣಾರಸವು ಅದ್ಭುತ ಶಕ್ತಿಯನ್ನೀಯುತ್ತಿದೆ.

ಹೀಗಿರುವ ನಾನು ಆರಿಗೂ ಹೆದರದೆ, ನನ್ನ ಕರ್ತವ್ಯಕ್ಕೆ ಭಂಗತಂದುಕೊಳ್ಳದೆ, ಪರರ ನೆರವಿನಿಂದ ಜೀವಿಸದೆ, ಯಾವುದೋ ಒಂದು ಮಠದ ಹೆಸರನ್ನು ಹೊತ್ತುಕೊಂಡು ಅದರ ಸೊತ್ತಿನಿಂದ ಹೊಟ್ಟೆಹೊರೆಯದೆ, ಧರ್ಮವೇ ಜಯವೆಂದು ಸಾರುವ ನಾನು ಅಧರ್ಮಿಗಳ ಸೋಗಿಗೆ ಮೋಸ ಹೋಗದೆ, ಸತ್ಯ ಧರ್ಮ ಕ್ರಾಂತಿಯನ್ನು ನಿತ್ಯನೇಮದಂತೆ ಮಾಡುತ್ತ ಶಿವಪೂಜೆಯಲ್ಲಿ ಕಾಲಕಳೆಯುವೆನೆಂದು ತನ್ನ ಅಂತರಂಗದ ಸ್ವರೂಪವನ್ನೆಲ್ಲ ಬಿಚ್ಚಿ ಬಿಚ್ಚಿ ನುಡಿದು ಸಚ್ಚರಿತ್ರನಾಯಕನಾದನು. ಅದನ್ನು ಕೇಳಿದ ಮಹಾಜನಗಳೆಲ್ಲರೂ ಮಹದಾಶ್ಚರ್ಯಗೊಂಡವರಾಗಿ ಈತನ ನೈಜಪಾದ ಆಧ್ಯಾತ್ಮಿಕ ಶಕ್ತಿಯನ್ನು ಕೊಂಡಾಡಿದರು.

ಸಾಧ್ವಿ ನಾಗಮ್ಮನು–ಯಜಮಾನರೇ ಮಹಿಮರಾಶೀರ್ವಾದದಿಂದ ಜನಿಸಿದ ಮಗು ಕಾಶೀನಾಥನು ನಮ್ಮ ಧ್ಯೇಯವನ್ನು ಪೂರ್ಣಗೊಳಿಸಲು ಸರ್ವಲಕ್ಷಣಸಂಪನ್ನನಾಗಿದ್ದಾನೆ. ಬುದ್ಧಿಕೌಶಲಗಳೂ ಧೈರ್ಯಸ್ಥೈರ್ಯಗಳೂ, ವಿದ್ಯವಿನಯಾದಿ ಸದ್ಗುಣಗಳೂ, ಇವನಲ್ಲಿ ಸರ್ವಾಲಂಕಾರಗಳಾಗಿ ಶೋಭಿಸುತ್ತಿವೆ. ಇಂಥ ಪುತ್ರರತ್ನವನ್ನು ಹಡೆದದ್ದಕ್ಕೆ ನಮ್ಮ ಜನ್ಮವು ಸಾರ್ಥಕವಾಯಿತು. ಇವನನ್ನು ಎಲ್ಲಾ ರೀತಿಯಿಂದಲೂ ಪರೀಕ್ಷೆಮಾಡಿದರೂ ಲೇಶಮಾತ್ರವೂ ಕೂಡ ಆಶೆ ಆಕಾಂಕ್ಷೆಗಳು ತೋರಲೊಲ್ಲವು. ಅಂದಬಳಿಕ ಈತನಲ್ಲಿ ಆ ದಯಾಘನನಾದ ಪರಮಾತ್ಮನ ಪ್ರೇರಣೆಯು ಎಷ್ಟು ತುಂಬಿಕೊಂಡಿದೆಯೆಂದು ಹೇಳಲು ಸಾಧ್ಯವಿಲ್ಲ.

ಸಿದ್ಧಯ್ಯನವರು—ಸಾಧ್ವಿ? ಮಹಾತ್ಮರ ಆಶೀರ್ವಾದದಿಂದ ಜನಿಸಿದ ಮಕ್ಕಳು ಮಹಾತೇಜಶ್ಶಾಲಿಗಳಾಗಿ ಹುಟ್ಟಲೇಬೇಕು. ದಿವ್ಯ ಜ್ಞಾನಜ್ಯೋತಿಗಳಾಗಿ ಬೆಳಗಲೇಬೇಕು. ಧರ್ಮರಕ್ಷಣೆಗೆ ಎದೆಗೊಟ್ಟು ನಿಲ್ಲಲೇಬೇಕು. ಇದು ಪರಮಾತ್ಮನ ಪ್ರೇರಣೆಯಲ್ಲದೆ ಮತ್ತೊಂದಲ್ಲ. ಯಾವ ಯಾವ ಕಾಲಕ್ಕೆ ಸಮಾಜದಲ್ಲಿ ಅಧರ್ಮವು ತಲೆಯೆತ್ತುವುದೋ ಆಗಾಗ್ಗೆ ಇಂಥ ಉಜ್ವಲಧಾರ್ಮಿಕ ಪುರುಷರನ್ನು ಹುಟ್ಟಿಸಿ ಲೋಪದೋಷಗಳನ್ನು ತಿದ್ದಿ ಸನ್ಮಾರ್ಗಪ್ರವೃತ್ತರನ್ನಾಗಿ ಮಾಡುವುದು ಆ ಜಗತ್ಕರ್ತೃವಿನ ಹೊಣೆಯಲ್ಲವೆ?

ನಾಗಮ್ಮ–ಹೌದು ಪತಿದೇವ! ನಿಜ. ಸದ್ಯಃ ಕಾಶೀನಾಥನಿಗೆ ಹೊರಡಲು ಅಪ್ಪಣೆಕೊಟ್ಟುಬಿಡಿರಿ. ಧರ್ಮಕಾರ್ಯಕ್ಕೆ ಕಾಲವಿಲಂಬಮಾಡಿ ದೋಷಕ್ಕೊಳಗಾಗುವುದೇಕೆ? ಎನ್ನಲು, ಅಯ್ಯನವರು ಅದಕ್ಕೊಪ್ಪಿ ಕಾಶೀನಾಥಾ! ನೀನು ನಮ್ಮ ಉದರದಲ್ಲಿ ಜನಿಸಿದ್ದಕ್ಕೂ ನಾವು ನಿನ್ನನ್ನು ಪಡೆದು ಇಲ್ಲಿಯವರೆಗೂ ಜೋಪಾನಮಾಡಿ ವಿದ್ಯಾಬುದ್ಧಿಗಳನ್ನು ಕಲಿಸಿದ್ದಕ್ಕೂ ಸಾರ್ಥಕವಾಯಿತು. ನಮ್ಮ ಮನೆತನವೇ ಜಗತ್ತಿಗೆ ಪ್ರಕಾಶಗೊಳ್ಳುವ ಸುಯೋಗವು ಒದಗಿದಂತಾಯಿತು. ತಾನಾಗಿ ಪ್ರಾಪ್ತವಾದ ದೈವಭಾಗ್ಯವು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದದೆ ಇರದು. ನಾವಿನ್ನು ನಿನ್ನ ಧ್ಯೇಯಗಳ ಬಗ್ಗೆ ಎಂದೂ ಆತಂಕಮಾಡುವುದಿಲ್ಲ. ನಿನ್ನ ಏಳ್ಗೆಯನ್ನೇ ಕೋರುತ್ತೇವೆ. ನೀನು ಆ ಪರಮಾತ್ಮನ ಪ್ರೇರಣೆಯಂತೆ ಅಚಲ ಧರ್ಮಕ್ರಾಂತಿಯನ್ನು ನಡಿಸಿ ಶ್ರೀಜಗದ್ಗುರು ಪಂಚಾಚಾರ್ಯರ ಕೀರ್ತಿಚಂದ್ರಿಕೆಯನ್ನು ದಶದಿಕ್ಕುಗಳಲ್ಲಿ

ಪ್ರಕಾಶಿಸುವಂತೆ ಮಾಡಲು ಸಮರ್ಥಶೀಲನಾಗು. ಮತ್ತು ಜನತಾ ಮೆಚ್ಚುಗೆಯನ್ನು ಹೆಚ್ಚಿಸಿಕೊಂಡು ಜಗತ್ಕಲ್ಯಾಣ ಕಾರ್ಯಗಳನ್ನು ನಿರರ್ಗಳ ವಾಗಿ ನಡೆಸುವುದರ ಮೂಲಕ ಸುಪ್ರಸಿದ್ಧ ವ್ಯಕ್ತಿಯಾಗೆಂದು ಆಶೀರ್ವದಿಸಿ ಕಳುಹಿಸಿಕೊಟ್ಟರು.

## ಗುರುವರ್ಗದ ಜಾಗೃತಿ

ವೀರಶೈವ ಸಮಾಜವು ಕರ್ನಾಟಕದಲ್ಲಿ ವಿಶೇಷವಾಗಿ ವ್ಯಾಪಕ ಗೊಂಡಿದ್ದರಿಂದ ಪಂಡಿತರು ಇದೇ ನಾಡಿನಲ್ಲಿ ಶ್ರೀ ಜಗದ್ಗುರು ಪಂಚಾಚಾ ರ್ಯರ ಪ್ರಚಾರಕಾರ್ಯವನ್ನು ಬೇಗ ಪ್ರಾರಂಭಿಸಬೇಕೆಂದು ಸಂಕಲ್ಪಿಸಿ ಹಿರಿಕಿರಿಯ ಗ್ರಾಮಗಳಲ್ಲಿ ಸಂಚಾರಮಾಡುತ್ತಾ ಸಾವಿರಾರುಜನರು ಕೂಡಿ ದೆಡೆಯಲ್ಲಿ ಉಪನ್ಯಾಸ ಕಾರ್ಯಕ್ರಮಗಳನ್ನಾರಂಭಿಸಿದರು. ಅಲ್ಲಿ ಪಂಡಿತರ ವಾಗ್ಝರಿಯು ವೀರಶೈವತತ್ವಗಳನ್ನೂ, ಪಂಚಾಚಾರ್ಯರ ಭಕ್ತಿರಸವನ್ನೂ ಸುರಿಸುತ್ತಿರುವಾಗಲೇ ಆಚಾರ್ಯರ ಜಯಘೋಷಗಳು ಉದ್ಭವವಾಗುತ್ತಿದ್ದವು. ಸಿಂಹಗರ್ಜನೆಯಂತಿರುವ ಇವರ ಉಪನ್ಯಾಸಕೇಳುವವರಲ್ಲಿ ಒಂದೆಡೆ ಭೀತಿ, ಒಂದೆಡೆ ಭಕ್ತಿ, ಒಂದೆಡೆ ಸದಸದ್ವಿಚಾರಗಳು ಉತ್ಪನ್ನವಾಗಿ ಎಲ್ಲರನ್ನೂ ಮುಗ್ಧಗೊಳಿಸುತ್ತಿದ್ದವು. ಸಮುದ್ರದ ತೆರೆಗಳಂತೆ ಒಂದರ ಮೇಲೊಂದು ಭೋರ್ಗರೆಯುತ್ತ ಬರುತ್ತಿರುವ ಅಮೋಘವಿಚಾರಗಳು ಆಬಾಲವೃದ್ಧರಾದಿ ಯಾಗಿ ಪಂಡಿತಪಾಮರರನ್ನೂ ಮೆಚ್ಚಿಸುತ್ತಿದ್ದವು. ಹೀಗೆ ವೀರಶೈವಧರ್ಮ ತತ್ವಗಳನ್ನು ಬೋಧಿಸಿ ಮನವರಿಕೆ ಮಾಡಿಕೊಟ್ಟು ಆನಂದಪಡಿಸಿದ ಕೂಡಲೆ ಸಭಿಕರು ಹರ್ಷಸೂಚಕವಾಗಿ " ಪಂಡಿತ ಕಾಶೀನಾಥ ಮಹಾರಾಜಕೀ ಜೈ " ಎಂದು ಘೋಷಿಸುತ್ತಿದ್ದರು.

ದಿನೇ ದಿನೇ ಪಂಡಿತರ ಉಪನ್ಯಾಸಕ್ಕೆ ಜನಸಮೂಹವು ಬಹು ಮೆಚ್ಚುಗೆಯುಳ್ಳದ್ದಾಗಿ ಎಲ್ಲಿ ನೋಡಿದಡಲ್ಲಿ ಪ್ರಚಂಡವಿಜಯವಾಗಲಾರಂಭಿ ಸಿತು. ಪಂಡಿತರ ವೀರವಾಣಿಯ ಘೋಷಣೆಯನ್ನು ಮೆಚ್ಚದವರೇ ಇರಲಿಲ್ಲ. ಪಂಡಿತರ ಭಾಷಣ ಕೇಳಿದ ಬಳಿಕ ಮತ್ತೊಬ್ಬರ ಭಾಷಣ ಕೇಳಲು ಯಾರಿಗೂ ಮನಸ್ಸಾಗುತ್ತಿದ್ದಿಲ್ಲ. ಹೀಗೆ ಪ್ರತಿಯೊಂದು ಹಳ್ಳಿಗಳಲ್ಲಿಯೂ ಪಟ್ಟಣಗಳ ಲ್ಲಿಯೂ, ಪಂಡಿತರ ಉಪನ್ಯಾಸವು ಪ್ರಬಲವಾಗಿ ಬೆಳೆಯಿತು.

ಹೀಗೆ ,ಅವ್ಯಾಹತವಾಗಿ ನಡೆಸಿದ ಉಪನ್ಯಾಸದಲ್ಲಿ ಕಾಶೀನಾಥರು ಅನಧಿಕಾರಿಗಳಾದ ವಿರಕ್ತರ ಉಪಟಳವನ್ನು ಕುಗ್ಗಿಸುತ್ತಾ, ನೈಜವಾದ ಜಗದ್ಗುರು ಪಂಚಾಚಾರ್ಯರ ಪ್ರಭಾವವನ್ನು ಬೀರುತ್ತಾ, ಭಕ್ತರ ಲೋಪ ದೋಷಗಳನ್ನು ತಿದ್ದುತ್ತಾ, ಮುಂದೆ ಮುಂದೆ ತಮ್ಮ ಕಾರ್ಯವನ್ನು ಯಶಸ್ವಿ ಗೊಳಿಸಹತ್ತಿದರು. ಇದಕ್ಕಾಗಿ ಪ್ರತಿಕಕ್ಷಿಗಳ ವರ್ತನೆಯು ಮಿತಿಮೀರಿ ನಡೆ ಯುತ್ತಿದ್ದರೂ ಪಂಡಿತರು ಅಪಾರ ಧೈರ್ಯೋತ್ಸಾಹಗಳಿಂದ ತಮ್ಮ ವಿಜಯ ಭೇರಿಯನ್ನು ಮೊಳಗಿಸಿ ಸಮಾಜವು ಹಣವಂತರಾದ ವಿರಕ್ತರಿಗೆ ಕರವೆತ್ತಿ ಭಿಕ್ಷೆಕೊಡಬಾರದು ಎಂಬುವಂಥಾ ಪರಿಸ್ಥಿತಿಯನ್ನು ಉಂಟುಮಾಡಿದರು.

ಆಗಿನ ಕಾಲದಲ್ಲಿ ವೀರಶೈವ ಮಹಾಜನರಿಗೆ ವೀರಶೈವ ಧರ್ಮ ಸ್ಥಾಪಕರು ಯಾರು? ಗುರುಪೀಠಗಳು ಯಾವುವು ಎಂಬುದೇ ತಿಳಿಯ ದಾಗಿತ್ತು. ವೀರಶೈವತತ್ವಪ್ರತಿಪಾದಿತವಾದ ಶಕ್ತಿವಿಶಿಷ್ಟಾದ್ವೈತಸಿದ್ಧಾಂತ ವನ್ನು ಸ್ಥಾಪನೆಗೊಳಿಸಿದವರೂ, ಅಗಸ್ತ್ಯಮಹರ್ಷಿ ಮೊದಲಾದವರನ್ನು ಶಿಷ್ಯರನ್ನಾಗಿ ಮಾಡಿಕೊಂಡವರೂ, ಕೋಟಿಸಂಖ್ಯೆ ಪ್ರಮಾಣದಲ್ಲಿ ಲಿಂಗ ಧಾರಿಗಳನ್ನಾಗಿ ರೂಪಿಸಿದವರೂ ಶ್ರೀಜಗದ್ಗುರು ರೇಣುಕಾದಿ ಪಂಚಾ ಚಾರ್ಯರೇ ವಿನಹ ಬೇರೆ ಯಾರೂ ಅಲ್ಲವೆಂಬುದನ್ನು ದೃಢಪಡಿಸಿ ತೋರಿಸಿ ಕೊಟ್ಟು, ಪಂಚಾಚಾರ್ಯರ ವಿಷಯದಲ್ಲಿ ಆಗ ಭಕ್ತಿ ವಿಶ್ವಾಸಗಳನ್ನು ಹುಟ್ಟಿಸಿ ದವರೆಂದರೆ ಶ್ರೀಕಾಶೀನಾಥಪಂಡಿತರು. ಇವರು ಪಂಚಗುರುಪೀಠಗಳ ಅಧಿಕಾರವನ್ನೂ ಪಟ್ಟಚರಾಧಿಕಾರಗಳ ಆಡಳಿತವನ್ನೂ ಹಾಗೂ ಮಠಾಧಿ ಕಾರಿಗಳ ಕಾರ್ಯಕ್ರಮವನ್ನೂ ಸವಿಸ್ತಾರವಾಗಿ ಪ್ರತಿಯೊಬ್ಬರ ಮನಸ್ಸಿನಲ್ಲಿ ಪ್ರತಿಬಿಂಬಿಸುವಂತೆ ಬೋಧಿಸುವವರಾದರು. ಪಂಚಪೀಠಾಚಾರ್ಯರ ಗೋತ್ರಸೂತ್ರಗಳ ತಾರತಮ್ಯವನ್ನೂ ದೀಕ್ಷಾಕಾರ್ಯದ ವಿಧಾನವನ್ನೂ ಅದರ ಪ್ರಯೋಜನವನ್ನೂ ತಿಳಿಸಿ ಧರ್ಮಜಾಗ್ರತಗೊಳಿಸಿದರು. ನಿಜವಾದ ಗುರುಗಳು ಯಾರೆಂಬುದನ್ನು ತೋರ್ಪಡಿಸಿ ಅವರಿಗಿರುವ ಅಧಿಕಾರಗಳನ್ನು ಬಹಿರಂಗಪಡಿಸಿದರು. ಪ್ರತಿಯೊಬ್ಬ ವೀರಶೈವರು ತಮ್ಮ ಗೋತ್ರಸೂತ್ರ ಕ್ಕನುಸರಿಸಿ ಸಂಪ್ರದಾಯವಿಡಿದು ಬಂದ ಮನೆಯಗುರುಗಳನ್ನು ಮರೆತು ಅನಧಿಕಾರಿಗಳನ್ನು ಮನ್ನಿಸಿದ್ದಾದರೆ ಪತಿವ್ರತಾಸ್ತ್ರೀಯಳು ತನ್ನ ನಿಜವಲ್ಲಭ ನನ್ನು ಬಿಟ್ಟು ವಿಟಪುರುಷನೊಡನೆ ಸರಸಸಲ್ಲಾಪವಾಡುವಂತೆ ಆಗುವುದೆಂದು

ಒತ್ತಿ ಹೇಳಿದರು. "ಗುರುದೈವತ್ಪರನ್ನಾಸ್ತಿ" ಎಂಬಂತೆ ಗುರುವಿಗಿಂತ ಬೇರೆ ಹೆಚ್ಚಿನ ಅಧಿಕಾರಿಗಳೇ ಇಲ್ಲ. ಅವರೇ ಸಕಲ ಜನ್ಮೋದ್ಧಾರಃ ಕರ್ತೃಗಳು; ಅವರಿಂದಲೇ ಭೋಗಮೋಕ್ಷಗಳು ಎಂದು ಚನ್ನಾಗಿ ಮನನ ಮಾಡಿಕೊಟ್ಟರು.

ವೀರಶೈವರಾದ ಸ್ತ್ರೀಪುರುಷರೆಲ್ಲರೂ ಗುರುವರ್ಗದ ಪಟ್ಟಚರಾಧಿಕಾರಿಗಳಿಂದಲೇ ಶಿವದೀಕ್ಷಾ ಸಂಸ್ಕಾರವನ್ನು ಹೊಂದಿ ಪುನೀತ ಹೃದಯರಾಗಬೇಕು. ಜೀವನಿಗೆ ಸಂಘಟಿಸಿರುವ ಆಧ್ಯಾತ್ಮಿಕ, ಆದಿದೈವಿಕ, ಆದಿಭೌತಿಕ, ಎಂಬ ತಾಪತ್ರಯಗಳನ್ನು ಕಳೆದುಕೊಳ್ಳಬೇಕಾದರೆ ದೀಕ್ಷಾವಿಧಿಯ ವಿನಃ ಬೇರೆ ಉಪಾಯವೇ ಇಲ್ಲ. ಭಕ್ತನ ಅಜ್ಞಾನವನ್ನು ಹೋಗಲಾಡಿಸಿ ಶಿವಜ್ಞಾನವನ್ನುಂಟುಮಾಡುವ ಗುರುವರ್ಯನಲ್ಲಿ ಅಂತಃ ಕರಣವು ಎಂದು ಹುಟ್ಟುತ್ತದೆಯೋ ಅಂದೇ ಆ ಮಹಾಗುರುವಿನಿಂದ ಶಿವದೀಕ್ಷೆಯನ್ನೂ ಸದುಪದೇಶವನ್ನೂ ಪಡೆದು ಆಚಾರಶೀಲನಾಗಿ ಶಿವಪೂಜಾಧುರಂಧರನಾಗಿ ವರ್ತಿಸಬೇಕು. ಬಂದಂಥ ಅತಿಥಿಅಭ್ಯಾಗತರಿಗೆ ಅನ್ನೋದಕಗಳನ್ನು ಕೊಟ್ಟು ಪುಣ್ಯಭಾಗಿಯಾಗಬೇಕು. ಗುರುಹಿರಿಯರಲ್ಲಿ ನಯವಿನಯದಿಂದ ವರ್ತಿಸಬೇಕು. ಸಮಾಜಹಿತೈಷಿಗಳಲ್ಲಿ ಶಾಂತಿ ಸೌಹಾರ್ದಭಾವನೆಗಳಿಂದ ನಡೆದುಕೊಳಬೇಕು. ಅರಿಷಡ್ವರ್ಗಗಳನ್ನು ಳಿದು ಶಮದಮಾದಿ ವಿವೇಕಸಂಪನ್ನನಾಗಿ ಕಾಲ ಕಳೆಯಬೇಕು. ಐಶ್ವರ್ಯ ಬಂದಾಗ್ಗೆ ಮದೋನ್ಮತ್ತನಾಗಬಾರದು. ಬಡತನ ಬಂದಾಗ ಅಧೈರ್ಯಪಡಬಾರದು. ಸದಾವಕಾಲ ತನ್ನ ಯೋಗ್ಯತೆಯ ಮಟ್ಟಿಗೆ ದುಡಿದುಣ್ಣುವ ಜಾಣನಾಗಿರಬೇಕು. ನಿರುದ್ಯೋಗಿಯಾಗಿ ಜೀವಿಸಬಾರದು; ಎರಡನೆಯವರಿಗೆ ಬೇಸರ ಕೊಡಬಾರದು; ಅನ್ಯರಿಂದ ಬೈಸಿಕೊಳ್ಳುವ ಕೆಟ್ಟವರ್ತನವಿರಬಾರದು. ತಾನು ಧರಿಸುವ ವಸ್ತ್ರಗಳನ್ನು ವಾಸಿಸುವ ಮನೆಗಳನ್ನು ನಿರ್ಮಲವಾಗಿಟ್ಟುಕೊಳ್ಳಬೇಕು. ಮಿತವಾಗಿ ಶಾಖಾ ಆಹಾರಗಳನ್ನು ಸೇವಿಸುವವರಾಗಬೇಕು. ಹೆಂಡರು ಮಕ್ಕಳನ್ನು ಮಿತವ್ಯಯದಲ್ಲಿ ಸುರಕ್ಷಿತವಾಗಿ ಜೋಪಾನ ಮಾಡಬೇಕು. ಧರ್ಮಶ್ರದ್ಧೆಯುಳ್ಳವರಾಗಿ ಪುರಾಣ ಪುಣ್ಯಕಥೆಗಳನ್ನು ಕೇಳಬೇಕು. ಧರ್ಮಗ್ರಂಥಗಳನ್ನು ತರಿಸಿಕೊಂಡು ಪ್ರತಿನಿತ್ಯ ಒಂದು ತಾಸಾದರೂ ರಾತ್ರಿಮಲಗುವ ಮುಂಚೆ ಓದಿ ಮಲಗಬೇಕು.

ಯಾರೇ ಆಗಲಿ ಲೋಕದಲ್ಲಿ ಹುಟ್ಟಿದ ಬಳಿಕ ಅಹುದೆನ್ನುವ ಹಾಗೆ ನಡೆಯಬೇಕೆ ವಿನಹ ದುರ್ಮಾರ್ಗ ಪ್ರವೃತ್ತರಾಗಿ ಇಸ್ಪೀಟು, ವ್ಯಭಿಚಾರ, ಕಳವು, ಕೊಲೆ, ಕಲಹ, ಕಾರ್ಪಣ್ಯ, ಮೊದಲಾದವುಗಳನ್ನು ಎಂದೂ ಮಾಡ ಬಾರದು. ಧರ್ಮಭ್ರಷ್ಟರಾಗಿ ಸೇಂದಿ, ಮಾಂಸ ಮೊದಲಾದ ಅಪೇಯಾ ಹಾರಗಳನ್ನು ಸೇವಿಸಬಾರದು. ಸಿಗರೇಟು, ಬೀಡಿ, ಗಾಂಜ, ಮೊದಲಾದ ಧೂಮ್ರಪಾನ ಮಾಡಬಾರದು. ಜೂಜಾಟ ಮೊದಲಾದ ಚಮತ್ಕೃತಿ ಆಟಗಳನ್ನಾಡಿ ವೃಥಾಯಾಸಕ್ಕೆ ಗುರಿಯಾಗಬಾರದು. ಇವನ್ನು ಬಿಟ್ಟು ನೀತಿವಂತರಾಗಿ ಬಾಳಿದರೆ ಎಲ್ಲರೂ ಗೌರವಿಸುತ್ತಾರೆ. ಎಲ್ಲರೂ ತನ್ನ ವರಾಗಿರುತ್ತಾರೆ. ತಾನು ಎಲ್ಲರಿಗೂ ಬೆಲ್ಲದಂತೆ ಕಾಣುತ್ತಾನೆ. ಯಾರಿಗೂ ಸಾಲಗಾರನಾಗದೆ, ಮತ್ತು ರೋಗಿಯಾಗದೆ, ಒಳ್ಳೇ ಜಾಗ್ರತನಾಗಿ ತನ್ನ ಮನೆತನದ ಬಾಳುವೆಯನ್ನು ಸಾಗಿಸಿಕೊಂಡು ಹೋಗಬೇಕು. ಒಕ್ಕಲತನ, ವ್ಯಾಪಾರ, ಕೈಗಾರಿಕೆ, ನೌಕರಿ, ಕೂಲಿ, ಗಾಯನ, ಕವನ, ಧರ್ಮೋಪದೇಶ, ಕೀರ್ತನ, ಭಜನ, ಮೊದಲಾದ ಉದ್ಯೋಗವುಳ್ಳವರು ಮೋಸ, ಕಳವು, ಕಾರ್ಪಣ್ಯಗಳನ್ನು ಮಾಡದೆ ಸತ್ಯಶೀಲರಾಗಿ ಸದ್ವಿನಯ ಸಂಪನ್ನರಾಗಿ ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಶ್ರದ್ಧೆಯಿಟ್ಟು ದುಡಿದು ಉದಾರಮತಿ ಗಳಾಗಿ ಜೀವಿಸಬೇಕು.

ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ವಿಧವಾದ ಆಶ್ರಮಗಳನ್ನು ಯಾವಾಗಲೂ ವೀರಶೈವರು ಮಾತ್ರವಲ್ಲದೆ ಹಿಂದೂ ಧರ್ಮಾವಲಂಬನವುಳ್ಳವರೆಲ್ಲರೂ ವಯಸ್ಸಿಗೆ ತಕ್ಕಂತೆ ಆಯಾಯ ಆಶ್ರಮ ಗಳನ್ನು ಕಾಪಾಡಿಕೊಂಡು ಜೀವಿಸಿ ಕೊನೆಗೆ ಕೇವಲ ಆಧ್ಯಾತ್ಮಭಾವನಾ ಶೀಲರಾಗಿ ಶಿವನಲ್ಲಿ ಬೆರೆತು ಶಿವಧರ್ಮಿಗಳೆನಿಸಿಕೊಳ್ಳಬೇಕು.

ಅಜಂಗಮಂತುಯಲ್ಲಿಂಗಂ ಮೃಚ್ಛಿಲಾದಿ ನಿರ್ಮಿತಂ ।
ತದ್ವರಂ ಜಂಗಮಂ ಲಿಂಗಂ ಶಿವಯೋಗೀತಿ ವಿಶ್ರುತಂ ॥೬೧॥

ಅಚರೇ ಮಂತ್ರ ಸಂಸ್ಕಾರಾಲ್ಲಿಂಗೇವಸತಿ ಶಂಕರಃ ।
ಸದಾಕಾಲಂ ವಸತ್ಯೇವ ಚರಲಿಂಗೇ ಮಹೇಶ್ವರಃ ॥೬೨॥

ಲಿಂಗವು ಚರಲಿಂಗ-ಸ್ಥಿರಲಿಂಗವೆಂದು ಹೀಗೆ ಎರಡು ಬಗೆಯಾಗಿ ಪ್ಪರೂ ಶಿಲೆ ಮೊದಲಾದವುಗಳಿಂದ ನಿರ್ಮಿತವಾದ ಲಿಂಗಮೂರ್ತಿಯು

ಒಂದೆಡೆ ದೇವಸ್ಥಾನದಲ್ಲಿ ಮಂತ್ರ ಸಂಸ್ಕಾರದಿಂದ ಸ್ಥಾಪಿಸಲ್ಪಡುವಂಥಾ ದ್ದಾಗಿ ಸ್ಥಿರಲಿಂಗವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಅಂಥ ಸ್ಥಾವರಲಿಂಗದಲ್ಲಿ ಶಿವನು ಮಂತ್ರಸಂಸ್ಕಾರದಿಂದ ನೆಲೆಸಿರುತ್ತಾನೆ. ಸಕಲ ಭಕ್ತರಿಗೆ ಮೋಕ್ಷ ವನ್ನನುಗ್ರಹಿಸಲಿಕ್ಕಾಗಿ ಚರಲಿಂಗದಲ್ಲಿ ಅಂದರೆ ಶ್ರೀಗುರುನಿರೂಪಿತ ಅಧಿಕಾರ ಮೂರ್ತಿಯಲ್ಲಿ ಶಿವನು ಸದಾವಕಾಲ ವಾಸಿಸುತ್ತಾನೆ. ಆದುದರಿಂದ,

ಸ್ವರೂಪಜ್ಞಾನ ಸಂಪನ್ನೋ ಧ್ವಸ್ತಾಹಂ ಮಮತಾಕೃತಿಃ ।
ಸ್ವಯಮೇವ ಸ್ವಯಂಭೂತ್ವಾ ಚರತೀತಿ ಚರಾಭಿದಃ ॥
(ಶಿ. ಸಿ. ಪ. ೧೫)

ಸ್ವಸ್ವರೂಪಜ್ಞಾನ ಸಂಪನ್ನನಾಗಿ ಶಿವೋಽಹಂಭಾವನೆಯಿಂದ ಯಾವಾಗಲೂ ಭಕ್ತೋದ್ಧಾರಕ್ಕಾಗಿ ಲೋಕದಲ್ಲಿ ಯಾವನು ಸಂಚರಿಸುವನೋ ಅವನೇ ಚರಲಿಂಗ (ಚರಮೂರ್ತಿ) ಎಂಬ ಹೆಸರಿನಿಂದ ಪ್ರಸಿದ್ಧನಾಗಿ ಅಷ್ಟಾವರಣಜಂಗಮನೆಂದು ಹೊಗಳಿಸಿಕೊಳ್ಳುತ್ತಾನೆ.

ಗುರುಗಳ ಪರಂಪರೆಯ ಮೂಲಕ ಉಪದೇಶ ಹೊಂದುವ ಪದ್ಧತಿಯು ವೀರಶೈವರಲ್ಲಿ ಅನಾದಿಕಾಲದಿಂದ ಸಾಗಿಬಂದಿರುವಂತೆ ಅಂಥಾ ಸದ್ಗುರುಗಳವರಿಂದಲೇ ದೀಕ್ಷಾಕಾರ್ಯ ಉಪದೇಶ ಕ್ರಮಗಳನ್ನು ನೆರವೇರಿಸಿಕೊಳ್ಳಬೇಕು. ಸ್ಥಿರ-ಚರಾಧಿಕಾರಿಗಳು ಕೂಡ ಮೋಕ್ಷಕ್ಕಾಗಿ ತಮ್ಮ ಸದ್ಗುರುಗಳಿಂದ ಅಧಿಕಾರ ಸ್ವೀಕಾರ ಮೂಲಕವೇ ಮಹಾಷಟ್‌ಸ್ಥಲೋಪದೇಶವನ್ನು ಪಡೆದುಕೊಳ್ಳಬೇಕು.

ಸ್ಥಿರಪಟ್ಟದವರು ತಮ್ಮ ಪೀಠದಲ್ಲಿದ್ದುಕೊಂಡು ಶಿವಾಗಮರೀತ್ಯಾ ಶಿವಪೂಜಾಧುರಂಧರರಾಗಿದ್ದು ಶಿಷ್ಯಕೋಟಿಗೆ ದೀಕ್ಷಾದಿಕಾರ್ಯಗಳನ್ನನುಗ್ರಹಿಸುತ್ತ ಭಕ್ತರ ನೈಮಿತ್ತಿಕ ಕಾರ್ಯಕಾರಣಗಳಿಗಾಗಿ ದೇಶ ಮಧ್ಯದಲ್ಲಿ ಸಂಚರಿಸುತ್ತಿರುವ ಪದ್ಧತಿಯು ಸನಾತನಕಾಲದಿಂದ ಬಂದುದಾಗಿರುತ್ತದೆ.

ಇನ್ನು ಅಷ್ಟಾವರಣಗಳಲ್ಲಿ ಪ್ರಾಮುಖ್ಯವಾದ ಗುರು-ಲಿಂಗ-ಜಂಗಮ ವಿಚಾರವಾಗಿ ವಿಮರ್ಶಿಸುವಾ? ಗುರುವಿಗೂ, ಗುರು ಲಿಂಗ ಜಂಗಮವು ಬೇಕು. ಜಂಗಮಕ್ಕೂ ಗುರು ಲಿಂಗ ಜಂಗಮ ಬೇಕು. ಆದರೆ ಲಿಂಗವು ಮಾತ್ರ ಅಚರ ವಸ್ತುವಾಗಿರೋಣದರಿಂದ ಅದು ಗುರುಕರದಿಂದ ಷಡಧ್ವ ಶುದ್ಧಿಹೊಂದಿ ಶಿವಕಲಾಪೂರಿತವಾಗಿ ಗುರುಚರವರರಿಗೆ ಪೂಜ್ಯ ವಸ್ತು

ವಾಗಿದೆ. ಅಲ್ಲದೆ ಅದು ಇನ್ನೊಬ್ಬ ವ್ಯಕ್ತಿಯನ್ನು ಪೂಜಿಸುವ ವಸ್ತುವಾಗಿಲ್ಲ; ಮತ್ತು ಇನ್ನೊಬ್ಬರ ಪಾದೋದಕ ಪ್ರಸಾದಗಳನ್ನು ಬಯಸುವುದಿಲ್ಲ. "ಬ್ರಹ್ಮೇತಿಲಿಂಗ ಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ" ಎಂಬಂತೆ ಲಿಂಗವು ಪರಬ್ರಹ್ಮವಾಚಕವು ಮತ್ತು ಸರ್ವಶ್ರೇಷ್ಠವು ಆಗಿರುವುದರಿಂದ ಅದು ಪೂಜ್ಯವಸ್ತುವು ಹಾಗು ಮೋಕ್ಷಕ್ಕೆ ಮೂಲಕಾರಣವು ಆಗಿರುತ್ತದೆ.

ಯಾವ ಗುರುಕುಲದ ಚರವರ್ಯರು ನನ್ನ ಹೊಲ, ನನ್ನ ಆಸ್ತಿ ಎಂಬುವ ಆಶಾ ಆಕಾಂಕ್ಷೆಗಳನ್ನು ಕಿತ್ತೊಗೆದು ಕೇವಲ ನಿರಾಶಾಭಾವನೆ, ಸ್ವಸ್ವರೂಪಜ್ಞಾನಗಳಿಂದ ಪ್ರಕಾಶಮಾನರಾಗಿ "ಸಮಬುದ್ಧ್ಯಾಚರೇದ್ಯೋಗಿ" ಎಂಬುವಂತೆ ಎಲ್ಲಾ ಕಡೆಗೂ ಭಿನ್ನವಸ್ತುಗಳನ್ನಾಗಿ ಕಾಣದೆ ಶಿವಸ್ವರೂಪದಲ್ಲೇ ನೋಡುವಂಥವರಾಗಿ—"ಸರ್ವತ್ರಶಿವಬುದ್ಧಿಮಾನ್" ಎಂದು ಹೊಗಳಿಸಿಕೊಳ್ಳುತ್ತಾ ಯಾವಾಗಲೂ ಲೋಕೋದ್ಧಾರಕ್ಕಾಗಿ ಸಂಚರಿಸುತ್ತಿರುವರೋ ಅವರೇ ನಿಜವಾದ ಯೋಗ್ಯಜಂಗಮರೆಂದು ಕರೆಯಲ್ಪಡುತ್ತಾರೆ. ಇಂಥಾ ಚರವರ್ಯರಲ್ಲಿ ಆಕಸ್ಮಾತ್ ಅಹಂಕಾರ ಉತ್ಪನ್ನವಾಗಿ ಸ್ವಪ್ರತಿಷ್ಠೆಗೆ ಹೊರಟಿದ್ದಾದರೆ ಕರತಲಾಮಲಕವಾಗಿದ್ದ ಶಿವೋಽಹಂ ಪದವು ಕೈಯಿಂದ ಕಳಚಿಹೋಗುವಂಥಾದ್ದಾಗುತ್ತದೆ. ಆದಪ್ರಯುಕ್ತ ಶಿವಸ್ವರೂಪಿಗಳಾದ ಜಂಗಮಾರ್ಯರು ಹೀಗೆ ಕೆಳದರ್ಜೆಗೆ ಬರಬಾರದು. ಇದನ್ನು ಗುರುಸ್ಥಲದ ಚರಮೂರ್ತಿಗಳು ಚನ್ನಾಗಿ ತಿಳಿದುಕೊಂಡು ತಮ್ಮ ಅಧಿಕಾರಸ್ವರೂಪವನ್ನು ಕಳೆದುಕೊಳ್ಳದಂತೆ ವರ್ತಿಸಬೇಕೆಂದು ನಮ್ಮ ಆಶಯವಾಗಿರುತ್ತದೆ.

ವೀರಶೈವರು ಪರಿಣಾಮವಾದಿಗಳು, ಸಾಕಾರ ಮೂರ್ತಿ ಪೂಜಕರು. ಸಾಕಾರ ಪಕ್ಷವು ಆಸ್ತಿಕ ಪಕ್ಷವು; ನಿರಾಕಾರಪಕ್ಷವು ನಾಸ್ತಿಕಪಕ್ಷವು; ವೇದಾಂತ ಮತಗಳಾಗಲಿ ಮುಸ್ಲೀಮ ಮತಗಳಾಗಲಿ ಇನ್ನುಳಿದ ಜೈನ ಬೌದ್ಧಮತಗಳಾಗಲಿ, ನಿರಾಕಾರ ದೇವತಾ ಉಪಾಸನೆ ಮಾಡುತ್ತಾ ಆಚಾರ ವಿಷಯಗಳಲ್ಲಿ ಯಾವದೊಂದು ಕಟ್ಟುನಿಟ್ಟುಗಳಿಲ್ಲದಂತೆ ಸ್ವತಂತ್ರ ವರ್ತನೆಯುಳ್ಳವುಗಳಾಗಿ ಬೆಳೆಯಹತ್ತಿದ್ದು ಇವೆಲ್ಲವುಗಳು ನಾಸ್ತಿಕವಾದದಲ್ಲಿ ತೋರುವಂಥವಾಗಿವೆ. ಆದರೆ ಸನಾತನ ಧರ್ಮಾವಲಂಬಿಗಳಾದ ದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಈ ಮೂರು ಮತಗಳು ಸತ್ಯತ್ವವುಳ್ಳ ಜಗತ್ತಿನಲ್ಲಿ ಸಾಕಾರಮೂರ್ತಿಗಳೇ ಪೂಜಾರ್ಹವಾದವುಗಳನ್ನೂ

ಅವುಗಳಿಂದಲೇ ಮೋಕ್ಷವೆಂಬುದನ್ನೂ ಸಾರುತ್ತವೆ. ಆದ್ದರಿಂದ ಸಾಕಾರ ಸ್ವರೂಪವು ಜಗತ್ಸತ್ಯತ್ವವನ್ನು ಸಿದ್ಧಾಂತಪಡಿಸುವುದಲ್ಲದೆ ಮೋಕ್ಷಪಥವನ್ನು ಸುಲಲಿತವಾಗಿಯೂ ಶೀಘ್ರವಾಗಿಯೂ ತೋರಿಸುವಂಥಾದ್ದಾಗಿದೆ. ಪರೋಕ್ಷ ಮತ್ತು ಅಪರೋಕ್ಷಜ್ಞಾನಗಳು ಸಾಕಾರಾರಾಧನೆಯಿಂದ ತಾವಾಗಿ ಲಭಿಸುತ್ತವೆ. ಆದಕ್ಕಾಗಿ ಜ್ಞಾನಕ್ರಿಯೆಗಳೆರಡೂ ಅವಶ್ಯಕವೆಂದು ನಮ್ಮ ಶಕ್ತಿ ವಿಶಿಷ್ಟಾದ್ವೈತಿಗಳು ಬೋಧಿಸುತ್ತಿದ್ದಾರೆ. ಈ ಜ್ಞಾನ ಕ್ರಿಯೆಗಳ ವ್ಯವಹಾರದಿಂದ ಜಗತ್ತು ಹೇಗೆ ನಡೆದಿದೆಯೋ ಹಾಗೆ ಆಧ್ಯಾತ್ಮ ವ್ಯವಹಾರವು ನಡೆದಿದೆ. ಆದ ಪ್ರಯುಕ್ತ ಕೇವಲ ಜ್ಞಾನಕ್ಕಾಗಲಿ, ಕೇವಲ ಕರ್ಮಕ್ಕಾಗಲಿ, ನಮ್ಮ ಧರ್ಮದಲ್ಲಿ ಪ್ರಾಶಸ್ತ್ಯವಿಲ್ಲ. ಆರವತ್ತುಮೂರು ಮಂದಿ ಪುರಾತನರಲ್ಲಿ ಕೆಲವರು ವೀರಶೈವರಿದ್ದು ಅವರು ಕರ್ಮಪ್ರಧಾನವಾದ ನೇಮನಿತ್ಯಗಳನ್ನು ಆಚರಿಸಿ ನಡೆದಿದ್ದಾರೆ. ಕಲ್ಯಾಣದ ಬಸವಣ್ಣನ ಕಾಲದಲ್ಲಿದ್ದ ಅಲ್ಲಮನು ನಿರಾಕಾರ ಪ್ರಚಾರಕನಾಗಿಯೂ ಉಪಾಸಕನಾಗಿಯೂ ವರ್ತಿಸಿದ್ದಾನೆ. ಇವರೆಲ್ಲರಿಗೆ ಪರಶಿವನ ಸಾಕ್ಷಾತ್ಕಾರವಾಗಿದೆಯೆಂದು ವೀರಶೈವ ಸಿದ್ಧಾಂತಕಾರರು ಎಂದೂ ಹೇಳಲಾರರು. ವೀರಶೈವ ಮಹಾತ್ಮರು ಅಂದಿಗೂ ಇಂದಿಗೂ ಇದ್ದೇ ಇದ್ದಾರೆ. ಅಂಥವರು ಸಿದ್ಧಾಂತವನ್ನೆಂದಿಗೂ ಬಿಟ್ಟವರಾಗಿಲ್ಲ. ಆದ್ದರಿಂದ ನಿರಾಕಾರ ಉಪಾಸನೆಗೆ ಮಹತ್ವವಿಲ್ಲವೆಂದೇ ಗುರು ಲಿಂಗ ಜಂಗಮವೆಂಬ ತ್ರಿಮೂರ್ತಿಗಳ ಸಾಕಾರ ಲಿಂಗಸ್ವರೂಪವನ್ನು ಪರಶಿವನು ಗುರುಮುಖದಿಂದ ಕೊಟ್ಟಿದ್ದಾನೆ.

ಏಕಯೇವ ಶಿವಸ್ಸಾಕ್ಷಾತ್ಸರ್ವಾನುಗ್ರಹಕಾರಕಃ ।
ಗುರುಲಿಂಗಜಂಗಮಾತ್ಮಾ ವರ್ತತೇ ಭುಕ್ತಿಮುಕ್ತಿದಃ ॥

ಎಂಬಂತೆ ಸಕಲ ವೀರಶೈವಭಕ್ತರಿಗೆ ಭೋಗಮೋಕ್ಷಗಳನ್ನು ಅನುಗ್ರಹಿಸಲಿಕ್ಕಾಗಿ ಶ್ರೀಮತ್ ಪರಶಿವನೋರ್ವನೇ ಸಾಕಾರದಲ್ಲಿ ಗುರು, ಲಿಂಗ, ಜಂಗಮಸ್ವರೂಪನಾಗಿ ಪರಿಶೋಭಿಸುತ್ತಿದ್ದಾನೆ.

" ಯಥಾ ಗುರೌ ಯಥಾ ಲಿಂಗೇ ಭಕ್ತಿಮಾನ್ ಪರಿವರ್ತತೇ ।
ಜಂಗಮೇಚ ಯಥಾನಿತ್ಯಂ ಭಕ್ತಿ ಕುರ್ಯಾದ್ವಿಚಕ್ಷಣಃ ॥

ಭಕ್ತಿವಂತನೂ, ವಿಚಕ್ಷಣ ಬುದ್ಧಿಶಾಲಿಯೂ, ಗುರು-ಲಿಂಗ ಈ ಎರಡು ಮೂರ್ತಿಗಳನ್ನು ನಿಷ್ಠೆಯಿಂದ ಪೂಜಿಸುವಂತೆ ಜಂಗಮ

ಮೂರ್ತಿಯಲ್ಲಿಯೂ ಪೂಜ್ಯಬುದ್ಧಿಯನ್ನಿಟ್ಟುಕೊಂಡು ವರ್ತಿಸಬೇಕೆಂದು ವೀರಶೈವ ಶಾಸ್ತ್ರವು ಸ್ಪಷ್ಟವಾಗಿ ಘೋಷಿಸುತ್ತಿದೆ. ನಿರಾಕಾರ, ಅಥವಾ ನಿರಾಭಾರಿ, ನಿಃಶೂನ್ಯ, ಇತ್ಯಾದಿ ಶಬ್ದಪ್ರಯೋಗವು ಭಾವನೆಯ ಅಂಥಾ ಅವಸ್ಥೆಯಲ್ಲಿ ಸೂಕ್ಷ್ಮವಾಗಿ ಅದ್ವೈತಸ್ವರೂಪ ಹೊಂದುವಾಗ ಅನುಭವ ದಿಂದ ತಾನಾಗಿ ಬರುವುದು ಸಹಜವಾದುದಾಗಿದೆ. ಷಟಸ್ಥಲಪ್ರವರ್ತಕ ರಾದ ವೀರಶೈವರು ಕ್ರಮಪ್ರಕಾರ ಅಂಥಾ ನಿರಾಲಂಬ ನಿಜೈಕ್ಯ ಸ್ಥಿತಿಯನ್ನು ಕೊನೆಗೆ ಹೊಂದೇ ಹೊಂದುತ್ತಾರೆ. ಅವರೆಲ್ಲರೂ ನಿರಂಜನ ಅಥವಾ ನಿರಾಭಾರಿ ಜಂಗಮರಾಗಬಹುದೇ? ಜನತೆಯಲ್ಲಿ ತಪ್ಪುಕಲ್ಪನೆಯನ್ನುಂಟು ಮಾಡಿಸಿದ ಇಂಥ ನಿರಂಜನಮೂರ್ತಿಗಳೇ ಶ್ರೇಷ್ಠರೆಂಬುದು ಯಾವ ಶಾಸ್ತ್ರದಲ್ಲಿದೆ. ಷಟಸ್ಥಲಗಳಲ್ಲಿ ಕೊನೆಯದಾದ ಐಕ್ಯಸ್ಥಲದಲ್ಲಿ ಲೀನನಾದವನು ಪೂಜಿಸುವುದಿಲ್ಲ, ಪೂಜೆಮಾಡಿಸಿಕೊಳ್ಳುವುದಿಲ್ಲ. ಇಷ್ಟೇ ಅಲ್ಲ. ಅಲ್ಲಿ ಯಾವ ಅಭಿಮಾನ ಆಕಾಂಕ್ಷೆಗಳೇನೂ ಇರುವುದಿಲ್ಲ. ಈ ಬಗ್ಗೆ ಕೆಳಗಿನ ಶ್ಲೋಕ ಗಳಿಂದ ಚನ್ನಾಗಿ ತಿಳಿಯುತ್ತದೆ.

ನಿರ್ಮಮೋನಿರಹಂಕಾರೋ ನಿರಸ್ತಕ್ಲೇಶಪಂಕಜಃ ।
ಭಿಕ್ಷಾಶೀ ಸಮಬುದ್ಧಿಶ್ಚ ಮುಕ್ತ ಪ್ರಾಯೋ ಮುನಿರ್ಭವೇತ್ ॥

ಪಶ್ಯನ್ ಸರ್ವಾಣಿಭೂತಾನಿ ಸಂಸಾರಸ್ಥಾನಿಸರ್ವಶಃ ।
ಸ್ವಯಮಾನಃ ಪರಾನಂದೇ ಲೀನಾತ್ಮಾ ವರ್ತತೇ ಸುಧೀಃ ॥

ಧ್ಯಾನಂ ಶೈವಂ ತಥಾಜ್ಞಾನಂ, ಭಿಕ್ಷಾಚೈಕಾಂತಶೀಲತಾ ।
ಯತೇಶ್ಚತ್ವಾರಿಕರ್ಮಾಣಿ ನ ಪಂಚಮಿಹ ಭಿದ್ಯತೇ ॥

ಮಮಕಾರ ರಹಿತನೂ, ನಿರಹಂಕಾರಿಯೂ, ಅವಿದ್ಯಾದಿ ಪಂಚಕ್ಲೇಶ ಗಳನ್ನು ನಾಶಗೊಳಿಸಿದವನೂ, ಭಿಕ್ಷಾನ್ನ ಜೀವಿಯೂ, ಆಗಿದ್ದ ಸನ್ಯಾಸಿಯು ಹೊನ್ನು, ಮಣ್ಣುಗಳ ಆಶೆಯಿಲ್ಲದೆ ಸಕಲ ವಸ್ತುಗಳಲ್ಲಿಯೂ, ಸಕಲ ಪ್ರಾಣಿಗಳಲ್ಲಿಯೂ ಸಮಭಾವನೆಯುಳ್ಳವನಾದರೆ ಅವನು ಪರಾನಂದ ದಲ್ಲಿ ಲೀನನಾದ ಪರಬ್ರಹ್ಮ ಸ್ವರೂಪಿಯಾಗಿ ತೋರುತ್ತಾನೆ. ಇಂಥಾ ಯತಿಯು ಧರ್ಮದ ಜನಾಂಗದ ಮೇಲೆ ಅಥವಾ ಅಧಿಕಾರಿಗಳ ಮೇಲೆ ಯಾವ ಶಕ್ತಿಯನ್ನೂ ನಡೆಸಲಿಕ್ಕೆ ಹೋಗುವುದಿಲ್ಲ. ಇವನು ಕೇವಲ ಶಿವಧ್ಯಾನ-ಶಿವಜ್ಞಾನವುಳ್ಳವನೂ, ಭಿಕ್ಷಾನ್ ಸೇವನ-ಏಕಾಂತವಾಸಮಾಡು ವವನೂ ಆಗಿರುತ್ತಾನೆ. ಈ ನಾಲ್ಕು ಕರ್ಮಗಳ ವಿನಃ ಬೇರಾವ ಕರ್ಮ

ಗಳೂ ಇವನಿಗೆ ಸಂಬಂಧಪಟ್ಟಿರುವುದಿಲ್ಲ. ಇಂಥಾ ಅವಸ್ಥಾಸ್ವರೂಪವನ್ನು ಯಾವ ವೀರಶೈವ ವ್ಯಕ್ತಿಯಾದರೂ ತಾಳಲು ಅಡ್ಡಿಯಿರುವುದಿಲ್ಲ.

ಈ ಪ್ರಕಾರ ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರು ದೇಶ ಮಧ್ಯದಲ್ಲಿ ನಿಜವಾದ ವೀರಶೈವಸಿದ್ಧಾಂತವನ್ನು ಬೋಧಿಸುತ್ತ ಸಮಾಜದ ಪ್ರೀತಿಗೊಳಗಾದುದು ಗುರುವರ್ಗದ ಮಠಾಧಿಕಾರಿಗಳಿಗೂ ಅವರ ಮೂಲಕ ಪಟ್ಟಾಧಿಕಾರಿಗಳಿಗೂ ಗೊತ್ತಾಗಿ ಅವರಿಂದಲೂ ಸಹಕಾರ ದೊರೆಯಿತು. ಉಜ್ಜಯಿನೀ, ರಂಭಾಪುರೀ, ಶ್ರೀಶೈಲ ಜಗದ್ಗುರುಗಳಿಗೆ ಈ ವಳಗಾಗಿ ಕಾಶಿಯಲ್ಲಿ ನಡೆದ ಪಂಚಾಚಾರ್ಯರ ಸಮ್ಮೇಲನದಲ್ಲಿಯೇ ಪಂಡಿತರ ಯೋಗ್ಯತೆ ಸಂಪೂರ್ಣವಾಗಿ ತಿಳಿದಿತ್ತು. ಹೀಗೆ ಸರ್ವತೋಮುಖವಾಗಿ ಪಂಡಿತರಿಗೆ ಪ್ರಶಸ್ತಿ ದೊರೆತದ್ದರಿಂದ ನಾರದರ ಸಂಕಲ್ಪದಂತೆಯೂ ಷಣ್ಮುಖನ ವರಪ್ರಸಾದದಂತೆಯೂ ಬಯಸಿದ ಕಾರ್ಯಕ್ಕೆ ಜಯ ಒದಗುವ ಕಾಲ ಸಂಭವಿಸಿತು.

ಅಂದಿನಿಂದ ಎಲ್ಲ ವೀರಶೈವ ಸಮಾಜವು ಎಚ್ಚತ್ತು ನಿಜವಾಗಿ ತಮ್ಮ ಧರ್ಮಸ್ಥಾಪಕರು ಪಂಚಾಚಾರ್ಯರು ; ಅವರೇ ದೀಕ್ಷಾಮೋಕ್ಷಾಧಿಕಾರಿಗಳು ; ಅವರ ವಿನಹ ಬೇರಾರೂ ಗುರುಗಳಾಗಲಾರರೆಂಬುವ ನುಡಿಗಳು ಪ್ರತಿಯೊಬ್ಬರ ಮುಖದಿಂದ ಹೊರಸೂಸಲಾರಂಭಿಸಿದವು. ಅಂದಿನಿಂದ ಧರ್ಮಜಾಗೃತ ವಾತಾವರಣ ಉಂಟಾಗಿ ಗುರುವರ್ಗದವರೂ ಮತ್ತು ಗುರುಭಕ್ತಿಶೀಲರೂ ಕೇವಲ ಆಚಾರ್ಯಸೇವಾತತ್ಪರರಾಗಿ ವರ್ತಿಸಹತ್ತಿದರು. ಆಗಿನ ವಿಷಮವಾತಾವರಣದಲ್ಲಿ ತಮ್ಮ ಸಿದ್ಧಾಂತವನ್ನು ಸೂರೆಗೊಂಡು ಪ್ರಖ್ಯಾತರಾಗಿರುವ ಪಂಡಿತರಚರಿತ್ರೆಯ ವಿಶಾಲತ್ವಕ್ಕೆ ನನ್ನ ಲೇಖನಿಯು ಸಮರ್ಥವಾದುದಲ್ಲ.

ಗೃಹಸ್ಥಾಶ್ರಮಿಗಳು ವಿರಕ್ತರನ್ನು ಮನೆಯಲ್ಲಿ ಕರೆತರಕೂಡದೆಂದು ಮನುಸ್ಮೃತಿಕಾರರು ಘಂಟಾಘೋಷವಾಗಿ ಸಾರುತ್ತಿದ್ದರೂ ಕಾಶೀಜಗದ್ಗುರು ಮಹಾಸ್ವಾಮಿಗಳವರು ತಮ್ಮ ಕರುಣಾದೃಷ್ಟಿಯಲ್ಲಿ ಎಲ್ಲ ಶಿಷ್ಯರೂ ಉದ್ಧಾರವಾಗಲೆಂಬ ಸದುದ್ದೇಶದಿಂದ ಗುರುವರ್ಗದ ವಟುಗಳೊಂದಿಗೆ ವಿರಕ್ತ ವಟುಗಳಿಗೂ ಅಧ್ಯಯನಕ್ಕೆ ಅವಕಾಶ ಕೊಟ್ಟಿದ್ದರು. ಅವರಲ್ಲಿ ಚಿತ್ರದುರ್ಗದ ವಿರಕ್ತ ಮಠದ ಶ್ರೀ ಜಯದೇವಸ್ವಾಮಿಗಳೂ ಒಬ್ಬರಾಗಿದ್ದರು. ಇವರು

ಅಲ್ಲಿ ಕಾಶೀಜಗದ್ಗುರು ಪೀಠಕ್ಕೆ ಸೇರಿದ ಜಂಗಮವಾಡೀಮಠದ ಅನ್ನೋದಕಗಳನ್ನು ಸ್ವೀಕರಿಸುತ್ತ ಗುರುಭಕ್ತಿಯಿಂದ ವಿದ್ಯಾವಂತರಾಗಿದ್ದರೂ ದೇಶಕ್ಕೆ ಬಂದ ಮೇಲೆ ತದ್ವಿರುದ್ಧವಾಗಿ ವರ್ತಿಸಹತ್ತಿದರು. ಗುರುವರ್ಗದವರ ಅಧಿಕಾರದಲ್ಲಿರುವ ಲಿಂಗಧಾರಣ, ದೀಕ್ಷಾ, ವಿವಾಹಾದಿ ಕಾರ್ಯಗಳಲ್ಲಿ ಕೈಹಾಕಿ ತಮ್ಮದೇ ಆದ ಒಂದು ಹೊಸ ಅಧಿಕಾರವನ್ನು ರೂಪಿಸಹತ್ತಿದರು. ಗುರುಗಳನ್ನೂ ಗುರುಪೀಠಗಳನ್ನೂ ಕಡೆಗಣಿಸಿದರು.

ಬೀದರ ಜಿಲ್ಲೆಯ ವೀರಶೈವ ಜ್ಞಾನೇಶ್ವರ ಶರ್ಮನೆಂಬುವನು ಕಾಲಗತಿಯಲ್ಲಿ ಆರ್ಯಸಮಾಜಕ್ಕೆ ಸೇರಿದ್ದು ಪುನಃ ಅವನು ವೀರಶೈವ ಮತದೀಕ್ಷೆ ಪಡೆಯಲು ಅಪೇಕ್ಷೆಯುಳ್ಳವನಾದಾಗ್ಗೆ ಈ ಮುರುಗಿಸ್ವಾಮಿಯವರು ಮೈಸೂರು ಸ್ಟಾರ್ ಪತ್ರಿಕೆಯಲ್ಲಿ ಅವನನ್ನು ವೀರಶೈವ ಧರ್ಮಕ್ಕೆ ತೆಗೆದುಕೊಳ್ಳುತ್ತೇವೆ; ಇದಕ್ಕೆ ಯಾರ ತಕರಾರು ಇದೆ ತಿಳಿಸಿರಿ ಎಂದು ಪ್ರಕಟಿಸಿದರು. ಅದಕ್ಕೆ ಉತ್ತರವಾಗಿ ಕಾಶೀ ಜಂಗಮವಾಡಿ ಮಠದಲ್ಲಿದ್ದ ಗುರುವರ್ಗದ ವಿದ್ಯಾರ್ಥಿಗಳೆಲ್ಲರೂ ತಮ್ಮ ವಿದ್ವತ್ ಸಂಘದಿಂದ ಪ್ರಕಟಣೆ ಹೊರಡಿಸಿದುದೇನೆಂದರೆ :—ಭವಿರೂಪದಲ್ಲಿದ್ದವನಿಗೆ ಶಿವದೀಕ್ಷೆಮಾಡಿ ಶುದ್ಧೀಕರಣಪೂರ್ವಕ ಧರ್ಮದಲ್ಲಿ ತೆಗೆದುಕೊಳ್ಳುವ ಅಧಿಕಾರ ಗುರುಸ್ಥಳದ ಅಧಿಕಾರಿಗಳಿಗಿರುತ್ತದೆಂದೂ ವಿರಕ್ತರಿಗೆ ಏನೂ ಸಂಬಂಧವಿರುವುದಿಲ್ಲವೆಂದೂ ಇಂಥಾ ಧಾರ್ಮಿಕ ಅಧಿಕಾರಕ್ಕೆ ತಾವು ಕೈಹಾಕಬೇಡಿರೆಂದೂ ಚಿತ್ರದುರ್ಗದ ಮುರಿಗಿ ಸ್ವಾಮಿಗಳವರಿಗೆ ಅದೇ ಮೈಸೂರು ಸ್ಟಾರ್ ಪತ್ರಿಕೆ ಮುಖಾಂತರ ಪ್ರಕಟಣೆಯೊಂದನ್ನು ಕಳುಹಿಸಿ ಗುರುವರ್ಗದ ಅಧಿಕಾರಿಗಳೇ ಆ ದೀಕ್ಷಾ ಕಾರ್ಯವನ್ನು ನೆರವೇರಿಸಿದರು.

ಅಂದಿನಿಂದ ಮುರಿಗಿಸ್ವಾಮಿಗಳು ಕಾಶೀಜಂಗಮವಾಡಿ ಮಠದವರ ಮೇಲೆ ಕೋಪಗೊಂಡು ಇನ್ನು ಮೇಲೆ ಆ ಮಠದಲ್ಲಿ ವಿರಕ್ತಮರಿಗಳನ್ನು ಅಭ್ಯಾಸಕ್ಕೆ ಕಳಿಸಬಾರದು? ನಾವು ಒಂದು ವಿದ್ಯಾನಿವಾಸವನ್ನು ಬೇರೆ ಸ್ಥಾಪಿಸಿಕೊಳ್ಳಬೇಕೆಂದಾಲೋಚಿಸಿ ಹಾಗೇ ಪ್ರತ್ಯೇಕ ನಿವಾಸಸ್ಥಳವನ್ನು ವೈಷಮ್ಯದಿಂದ ಮಾಡಿಕೊಂಡವರಾದರು.

ಸಂಸ್ಕೃತ ಶಿಕ್ಷಣವು ಸುಮಾರು ೬೦ ವರ್ಷಗಳ ಹಿಂದೆ ನಮ್ಮ ಕರ್ನಾಟಕದಲ್ಲಿ ಅಷ್ಟೊಂದು ಪ್ರಚಲಿತವಿದ್ದಿಲ್ಲ. ಮೈಸೂರಿನಲ್ಲಿ ನಡೆಯುತ್ತಿದ್ದರೂ

ವೀರಶೈವರಿಗೆ ವಿಶೇಷ ಅನುಕೂಲತೆಗಳಿರಲಿಲ್ಲ. ಅದಕ್ಕಾಗಿ ಸಂಸ್ಕೃತ ಉಚ್ಚ ಶಿಕ್ಷಣಕ್ಕಾಗಿ ಕಾಶೀಕ್ಷೇತ್ರಕ್ಕೆ ಹೋಗಲೇಬೇಕಾಗುತ್ತಿದ್ದಿತು. ಆಗ ಕಾಶೀ ಜಂಗಮವಾಡೀ ಮಠದಲ್ಲಿ ಅಧಿಪತಿಗಳಾಗಿದ್ದ ಶ್ರೀ ಜಗದ್ಗುರು ರಾಜೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ದಕ್ಷಿಣ ದೇಶದ ವಿದ್ಯಾರ್ಥಿಗಳೆಲ್ಲರಿಗೂ ಊಟ ವಸತಿಗಳನ್ನು ಕೊಟ್ಟು ಸಲಹುತ್ತಿದ್ದರು. ಅವರ ಕಾಲಕ್ಕೆ ಅಧ್ಯಯನ ಮಾಡುತ್ತಿದ್ದ ಚಿತ್ರದುರ್ಗ, ಹುಬ್ಬಳ್ಳಿ, ಹಾವೇರಿ, ಬೆಂಗಳೂರು, ಮೈಸೂರು, ಸೊಲ್ಲಾಪುರ, ಕಮತಿಗಿ, ಹಾನಗಲ್ಲ ಮೊದಲಾದ ಗ್ರಾಮಗಳ ಮುಖ್ಯ ಮುಖ್ಯ ವಿರಕ್ತರು ಶ್ರೀಜಗದ್ಗುರು ವಿಶ್ವಾರಾಧ್ಯರ ಪ್ರಸಾದದಿಂದ ಪಾಂಡಿತ್ಯಸಂಪನ್ನ ರಾಗಿ ಬಂದು ಪ್ರಖ್ಯಾತರಾಗಿದ್ದರೂ ಇವರಲ್ಲಿ ಚಿತ್ರದುರ್ಗದ ಮುರಿಗಿಸ್ವಾಮಿ ಯವರೇ ವಿರಕ್ತರ ಚಳವಳಿಯನ್ನು ಮೊದಲು ಮಾಡಿ ಅಖಿಲ ವೀರಶೈವ ಧರ್ಮಕ್ಕೆ ಪ್ರತಿಷ್ಠಾವಂತರಾಗಬೇಕೆಂದು ವಿಶ್ವಪ್ರಯತ್ನ ಮಾಡಿದವರಾದರು. ಗುರುವರ್ಗದ ಮೇಲೆ ಪ್ರಭುತ್ವಹೇರಬೇಕೆಂಬುದೊಂದೇ ಇವರ ಇಚ್ಛೆಯಲ್ಲ; ಎಲ್ಲಾ ವಿರಕ್ತರಿಗೂ ಸಹಿತ ಮೂಲಕರ್ತೃವಾಗಿ ಮೆರೆಯುಬೇಕೆಂದೂ, ತಮ್ಮ ಅಧೀನದಲ್ಲಿ ಸಕಲರೂ ನಡೆಯುಬೇಕೆಂದೂ ಸಾಧಿಸಿದರೇ ಹೊರ್ತು ಈ ಸ್ವಾರ್ಥಪ್ರತಿಷ್ಠೆ ಎಷ್ಟುರವುಟ್ಟಿಗೆ ಮುಂದುವರಿದೀತೆಂಬುದನ್ನು ತಿಳಿಯ ಹಾದರು.

ವೀರಶೈವ ಧರ್ಮ ಜಾಗ್ರತೆಯಲ್ಲಿ ಜಯುಗಳಿಸಿದ ಪಂಡಿತರು ವಿರಕ್ತರ ಈ ಅನಧಿಕಾರವನ್ನು ಹಳ್ಳಿಹಳ್ಳಿಗೂ ತಿಳಿಪಡಿಸಲೋಸುಗ ಪಟ್ಟಚರಾಧಿಕಾರಿ ಗಳ ಸಮ್ಮೇಲನ ಅಗತ್ಯವೆಂದೂ ಆಮೂಲಕವೇ ಸಮಾಜದಲ್ಲಿ ವಿರಕ್ತರ ನಿಜಸ್ಥಿತಿ ಪ್ರಚಾರವಾಗುವದೆಂದೂ ನಿಶ್ಚಯಿಸಿ ಈ ಬಗ್ಗೆ ದೊಡ್ಡ ದೊಡ್ಡ ಮಠಾಧಿಕಾರಿಗಳೊಡನೆ ಆಲೋಚನೆ ನಡೆಯಿಸಲುದ್ಯುಕ್ತರಾದರು. ಅದರಲ್ಲಿ ಕುಂದಗೋಳ ಪಂಚಗ್ರಹ ಹಿರೇಮಠವೇ ಅಗ್ರಸ್ಥಾನವನ್ನು ಪಡೆಯಿತು. ಆ ಮಠದ ಪಟ್ಟದಸ್ವಾಮಿಗಳೂ ಚರಮೂರ್ತಿಗಳಾದ ಶ್ರೀ ಗುರುಪಾದಶಿವಾ ಚಾರ್ಯರೂ ಈ ಕಾರ್ಯಕ್ಕಾಗಿ ಪಂಡಿತರಿಗೆ ಬಹಳ ಸಹಾಯಮಾಡಿದರು.

# ಒಂದನೇ ಪಟ್ಟಚರಾಧಿಕಾರಿಗಳ ಸಮ್ಮೇಳನ

## ಕುಂದಗೋಳ

ಮೊದಲು ಗುರುವರ್ಗದ ಪಟ್ಟಚರಾಧಿಕಾರಿಗಳು ಸುಧಾರಿಸಿದರೆ ಸಕಲ ವೀರಶೈವ ಸಮಾಜವೇ ಸಹಜವಾಗಿ ಸುಧಾರಿಸುತ್ತದೆಂದು ನಿರ್ಧಾರ ಮಾಡಿಕೊಂಡ ಪಂಡಿತರು ಧಾರವಾಡ ಜಿಲ್ಲೆಗೆ ಸೇರಿದ ಕುಂದಗೋಳ ಹಿರೇಮಠದ ಶ್ರೀ ಪಟ್ಟದಸ್ವಾಮಿಗಳಲ್ಲಿ ಪಟ್ಟಚರಾಧಿಕಾರಿಗಳ ಸಮ್ಮೇಳನವನ್ನು ನೆರವೇರಿಸುವ ಬಗ್ಗೆ ವಿಚಾರ ವಿನಿಮಯ ಮಾಡಿದವರಾದರು. ಅದಕ್ಕೆ ಶ್ರೀ ಸ್ವಾಮಿಗಳು ತಮ್ಮ ಮಠದಲ್ಲಿಯೇ ನೆರವೇರಲೆಂಬುವ ಅಭಿಪ್ರಾಯ ಕೊಟ್ಟರಲ್ಲದೆ ಗುರುವರ್ಗದ ಸುಧಾರಣೆ ಎಂದು ಆಗಬಹುದು ಎನ್ನುವ ಲವಲವಿಕೆಯಿಂದ ಒಳ್ಳೇ ಉತ್ಸಾಹಶಾಲಿಗಳಾಗಿ ಸಿದ್ಧತೆಯ ಸಕಲ ಕಾರ್ಯಗಳನ್ನು ಕೈಗೊಂಡರು. ಇದನ್ನು ಕಂಡು ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳು ಬಹಳ ಸಂತೋಷಪಟ್ಟು ಸಮ್ಮೇಲನದ ಕಾರ್ಯ ಒಳ್ಳೇ ಯಶಸ್ವಿಯಾಗಿ ನಡೆಯುವಂತೆ ವ್ಯವಸ್ಥೆಗೊಳಿಸಹತ್ತಿದರು.

ಪ್ರಥಮವಾಗಿ ನಡೆಸಲಿರುವ ಈ ಪಟ್ಟಚರಾಧಿಕಾರಿಗಳ ಸಮ್ಮೇಲನಕ್ಕೆ ಶ್ರೀಜಗದ್ಗುರು ಪಂಚಪೀಠಾಧೀಶರಲ್ಲೊಬ್ಬರನ್ನು ಆಗಮಿಸಿಕೊಳ್ಳುವುದು ಯೋಗ್ಯವೆಂದು ಸರ್ವರೂ ಸಮ್ಮತಪಟ್ಟಂತೆ ಈ ಪ್ರದೇಶದಲ್ಲಿ ಪ್ರಚಾರವಾಗದೆ ಇದ್ದ ಶ್ರೀ ಕೇದಾರಜಗದ್ಗುರುಗಳನ್ನು ಬಿಜಯಂಗೈಸಿಕೊಂಡರೆ ಆ ಪೀಠದ ಪ್ರಕಾಶ ಹೊರಬೀಳುವುದಲ್ಲದೆ ನಮ್ಮ ಸಮ್ಮೇಲನ ಕಾರ್ಯವು ಯಶಸ್ವಿಯಾಗುವುದೆಂದು ಭಾವಿಸಿದ್ದ ಪಂಡಿತರು ಶ್ರೀಕೇದಾರಜಗದ್ಗುರು ವಿಶ್ವಲಿಂಗ ರಾವಲ್ ಮಹಾಸ್ವಾಮಿಗಳವರನ್ನು ಬಿಜಯಂಗೈಸಿಕೊಂಡು ಶ್ರೀ ಸನ್ನಿಧಿಯವರ ನೇತೃತ್ವದಲ್ಲಿಯೇ ಸಮ್ಮೇಲನದ ಸಕಲ ಕಾರ್ಯಗಳು ನೆರವೇರುವಂತೆ ಸಿದ್ಧಗೊಳಿಸಿದರು. ಈ ಸಮ್ಮೇಲನದ ಅಧ್ಯಕ್ಷಪದಕ್ಕೆ ಅಲ್ಲಿಯ ಸ್ವಾಗತಸಮಿತಿಯವರು ಅಬ್ಬೀಗೇರಿ ಬೃಹನ್ಮಠಾಧ್ಯಕ್ಷರಾದ ಶ್ರೀ ಷ. ಬ್ರ. ವೀರಭದ್ರಶಿವಾಚಾರ್ಯಸ್ವಾಮಿಯವರನ್ನು ನಿಶ್ಚಯಮಾಡಿದರು. ಪಂಡಿತಜೀಯವರು ಕಾರ್ಯದರ್ಶಿಗಳಾದರು. ಅವರ ಕಾರ್ಯದರ್ಶಿತ್ವದಿಂದ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮೊದಲಾದ ದೇಶಗಳಲ್ಲಿ ಸಭಾಕಾರ್ಯಕ್ರಮಗಳನ್ನು ಪ್ರಸಿದ್ಧಪತ್ರಿಕೆ ದ್ವಾರಾ ಪ್ರಚಾರಗೊಳಿಸಲಾಯಿತು.

ಕ್ರಿ. ಶ. ೧೯೧೯ ರಲ್ಲಿ ಶ್ರೀ ೧೦೮ ಜಗದ್ಗುರು ಕೇದಾರವೈರಾಗ್ಯ ಸಿಂಹಾಸನಾಧೀಶ್ವರ ಶ್ರೀ ವಿಶ್ವಲಿಂಗರಾವಲ್ ಮಹಾಸ್ವಾಮಿಗಳ ದಿವ್ಯನೇತೃತ್ವದಲ್ಲಿ ನಡೆದ ಈ ಮೊದಲನೆಯ ಪಟ್ಟ-ಚರಾಧಿಕಾರಿಗಳ ಸಮ್ಮೇಲನಕ್ಕೆ ಶ್ರೀ|| ಷ|| ಬ್ರ|| ವೀರಭದ್ರಶಿವಾಚಾರ್ಯರು ಅಧ್ಯಕ್ಷರಾದರು. ಸಮ್ಮೇಲನದ ಯಾವತ್ತು ಕಾರ್ಯಗಳು ಯಶಸ್ವಿಗೊಂಡವು. ಅಭೂತಪೂರ್ವಕ ಶೋಭೆಗೊಂಡ ಈ ಸಭೆಗೆ ನಾನಾ ನಾಡಿನ ಪಂಡಿತರೂ ಸ್ವಾಮಿಗಳೂ ಭಕ್ತಾದಿಗಳೂ ಆಗಮಿಸಿದ್ದರು. ೨ ದಿನಗಳ ಈ ಪ್ರಚಂಡಸಭೆಯಲ್ಲಿ ಕಾಶೀನಾಥರು ಪಟ್ಟಚರಾಧಿಕಾರಿಗಳ ಕರ್ತವ್ಯವನ್ನೂ, ಐಕ್ಯತೆಯನ್ನೂ, ಅದರಿಂದ ಸಾಧಿಸಬೇಕಾದ ವೀರಶೈವ ಧರ್ಮಸುಧಾರಣೆಯನ್ನೂ ವಿರಕ್ತರ ಅನಧಿಕಾರಕಾರ್ಯಗಳನ್ನೂ ವಿವರಿಸುತ್ತ ಎಲ್ಲ ಪಟ್ಟಚರಾಧಿಕಾರಿಗಳ ಮನಸೆಳೆದರು. ಮತ್ತು ಗುರುವರ್ಗಕ್ಕೆ ಅನಿವಾರ್ಯವಾಗಿದ್ದ ವೈದಿಕವಿದ್ಯೆಯನ್ನೂ ಮುಂದೆ ಮುಂದೆ ಪ್ರಚುರಗೊಳಿಸಲಿಕ್ಕಾಗಿ ಅಲ್ಲಲ್ಲಿ ಸಂಸ್ಕೃತಪಾಠಶಾಲೆಗಳ ಸ್ಥಾಪನೆಯ ಆವಶ್ಯಕತೆಯನ್ನೂ, ಗುರುವರ್ಗದ ಶಿಷ್ಟಾಚಾರಗಳ ಬಗ್ಗೆ ಇರಬೇಕಾದಪದ್ಧತಿಗಳನ್ನೂ ಬಳಿಕೆಯಲ್ಲಿ ತರುವಂತೆ ಗೊತ್ತುವಳಿಗಳನ್ನು ಸಿದ್ಧಪಡಿಸಿದರು. ಮತ್ತು ಈ ಎಲ್ಲಾ ಗೊತ್ತುವಳಿಗಳನ್ನು ಹಳ್ಳಿಹಳ್ಳಿಗೂ ಸಂಚರಿಸಿ ಸದಾಕಾಲ ನೆರವೇರಿಸಲಿಕ್ಕಾಗಿ ಅದೇ ಕುಂದಗೋಳ ಹಿರೇಮಠದಲ್ಲಿ "ಅಖಿಲ ಭಾರತೀಯ ಗುರುವರ್ಗೋತ್ತೇಜಕಸಂಘ" ಎಂಬುವ ಒಂದು ಸಂಸ್ಥೆಯನ್ನು ಸ್ಥಾಪಿಸಿ ಆ ಸಂಘದ ದ್ವಾರಾ ಸರ್ವತೋಮುಖವಾಗಿ ಗುರುವರ್ಗದ ಸುಧಾರಣೆಯನ್ನು ಮಾಡತೊಡಗಿದರು. ಆಗ ಅಖಿಲ ಗುರುವರ್ಗದವರು ಎಚ್ಚತ್ತು ಓಹೋ ಇದೊಂದು ಅಪೂರ್ವವೈಶಿಷ್ಟ್ಯ ದೊರೆಯಿತು. ನಾವು ಇಂಥಾ ಸುಧಾರಣೆಯ ಕಾರ್ಯಕ್ರಮವನ್ನು ನೋಡಿದವರೇ ಅಲ್ಲ. ಇದೆಲ್ಲವೂ ಪಂಡಿತರ ಕರ್ತೃತ್ವಶಕ್ತಿಯೆಂದು ಸಕಲರೂ ಕೊಂಡಾಡಿದರು.

## ೯ ನೆಯ ವೀರಶೈವ ಮಹಾಸಭೆ ಬೀರೂರು

ಬೀರೂರಿನ ವೀರಶೈವ ಮಹಾಜನಗಳು ತಮ್ಮ ಗ್ರಾಮದಲ್ಲಿ ವೀರಶೈವ ಮಹಾಸಭೆಯನ್ನು ನೆರವೇರಿಸಬೇಕೆಂದು ನಿರ್ಧರಿಸಿಕೊಂಡು ಸದರಿ ಸಭೆಗೆ ಶ್ರೀಜಗದ್ಗುರು ಪಂಚಪೀಠದವರನ್ನೂ ಸನ್ಯಾಸಿಮಠದವರನ್ನೂ ಬಿಜಯಂ

ಗೈಸಿಕೊಂಡು ಮಹಾಸಭೆಗೆ ಹೆಚ್ಚಿನ ಶೋಭೆಯನ್ನು ತಂದುಕೊಳ್ಳಬೇಕೆಂಬ ಸದಿಚ್ಛೆಯುಳ್ಳವರಾಗಿದ್ದು ಸಭೆಯ ಸಕಲ ಸಲಕರಣಗಳನ್ನು ವ್ಯವಸ್ಥೆ ಮಾಡಿಕೊಂಡರು. ೧೯೧೯ ನೇ ಇಸ್ವಿ ಡಿಶಂಬರ ೨೭, ೨೮, ೨೯ ನೇ ತಾರೀಖುಗಳಲ್ಲಿ ಸಭೆಯನ್ನು ನೆರವೇರಿಸಬೇಕೆಂದು ನೇಮಕಮಾಡಿಕೊಂಡಂತೆ ಸಕಾಲಕ್ಕೆ ಆಂಧ್ರ, ಮಹಾರಾಷ್ಟ್ರ, ಕರ್ನಾಟಕ ವೀರಶೈವ ಮಹಾಜನಗಳೆಲ್ಲರು ಬಂದು ಸೇರಿದರು. ಪಂಚಪೀಠಗಳ ಪೈಕಿ ಉಜ್ಜಯಿನಿ ಪೀಠದ ಜಗದ್ಗುರು ಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳು ಮತ್ತು ಬಾಳೇಹೊನ್ನೂರ ಪೀಠದ ಶ್ರೀಜಗದ್ಗುರು ಪಂಚಾಕ್ಷರಶಿವಾಚಾರ್ಯ ಮಹಾಸ್ವಾಮಿಗಳು ಹಾಗು ಕೇದಾರ ಜಗದ್ಗುರು ಶ್ರೀವಿಶ್ವಲಿಂಗ ರಾವಲ್ ಮಹಾಸ್ವಾಮಿಗಳು ಆಗಮಿಸಿದ್ದರು. ಸನ್ಯಾಸಿಮಠದವರಾರೂ ಬಂದಿರಲಿಲ್ಲ. ಆಗ ವಿರಕ್ತಪಕ್ಷದ ಜನರು ಅನೇಕಅಸಮಂಜಸ ವಿಷಯಗಳನ್ನೆತ್ತಿಕೊಂಡು ಸಭೆ ಉದ್ರೇಕವಾಗುವಂತೆ ಭಯಂಕರ ಕೋಲಾಹಲವನ್ನೆಬ್ಬಿಸಿದರು. ಕೂಡಿದ ಮಹಾಜನವು ಇಬ್ಬಣವಾಗಿಬಿಟ್ಟಿತು. ಎಲ್ಲಿ ನೋಡಿದಲ್ಲಿ ಅವ್ಯವಹಾರಗಳು ಜರುಗಿದವು. ಸಭೆಯು ಅಲ್ಲಿಯ ಮಹಾಜನಗಳ ಸಂಕಲ್ಪದಂತೆ ನಡೆಯಲಾರದಾಯಿತು. ಮತ್ತು ಇದೆಲ್ಲ ಗೊಂದಲಕ್ಕೆ ಚಿತ್ರದುರ್ಗದ ಆಗಿನ ವಿರಕ್ತಸ್ವಾಮಿಗಳೇ ಕಾರಣರೆಂದೂ ಪ್ರಖ್ಯಾತವಾಯಿತು.

ಇತ್ತ ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ ಶ್ರೀಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳು ಆ ವಿಷಮವಾತಾವರಣವನ್ನು ಹೋಗಲಾಡಿಸಲಿಕ್ಕೆ ದೀರ್ಘಾಲೋಚನೆ ಮಾಡಿ ಪಂಡಿತ ಶ್ರೀ ಕಾಶೀನಾಥ ಶಾಸ್ತ್ರಿಗಳವರನ್ನು ಆ ಕ್ಷಣವೇ ಟೆಲಿಗ್ರಾಂಮೂಲಕ ಬರಮಾಡಿಕೊಂಡು ಸದರಿ ಪಂಡಿತರಿಗೆ ಮುಂದಿನ ವಾತಾವರಣ ಯಶೋಭೂಷಣವಾಗುವಂತೆ ಸದ್ಯಃ ಕಾರ್ಯೋನ್ಮುಖರಾಗಬೇಕೆಂದು ಅಪ್ಪಣೆಕೊಡಿಸಿದರು. ಆ ಗುರುವಿನಾಜ್ಞೆಗೆ ಶಿರಬಾಗಿದ ಪಂಡಿತರು ಗುರುದೇವಾ! ಮಹಾಚಾರ್ಯರ ಕೀರ್ತಿಧ್ವಜವು ಹಾರಾಡುವ ಕಾಲ ಈ ಮೈಸೂರಸೀಮೆಯಲ್ಲಿ ಇದೀಗ ಸನ್ನಿಹಿತವಾಗಿದ್ದುದು ಒಳ್ಳೇ ಶುಭೋಧಯವೆಂದು ಉತ್ಸಾಹಭರಿತರಾಗಿ ಮಾರನೇ ದಿವಸ ಶ್ರೀ ಜಗದ್ಗುರು ಮಹಾಸ್ವಾಮಿಗಳವರ ದಿವ್ಯಸನ್ನಿಧಿಯಲ್ಲಿ ಮಹಾಸಭೆಯನ್ನು ಪ್ರಾರಂಭಿಸಿದರು. ಗುರುಭಕ್ತರು ಕಂಕಣಬದ್ಧರಾಗಿ ಒಳ್ಳೇ

ಶ್ರದ್ಧೆಯಿಂದ ಸೇವೆಮಾಡಲು ಸಭೆಯನ್ನು ಸೇರಿದರು. ಪೀಠಾಚಾರ್ಯರ ಅಧ್ಯಕ್ಷತೆಯಲ್ಲಿ ನೆರವೇರಿದ ಈ ಮಹಾಸಭೆಯಲ್ಲಿ ಪಂಡಿತ ಶ್ರೀ ಕಾಶೀನಾಥ ಶಾಸ್ತ್ರಿಗಳವರು ವೀರಶೈವಪ್ರಾಚೀನತ್ವ, ಮಹಾಚಾರ್ಯರಪ್ರಭಾವ ಎಂಬ ವಿಷಯಗಳ ಮೇಲೆ ಒಂದೇ ಸಮನೆ ಆರು ತಾಸುಗಳವರೆಗೆ ವೇದಾಗಮೋಕ್ತ ವಾಗಿ ಭಾಷಣಮಾಡಿ ಜನರಲ್ಲಿ ತುಂಬಿಕೊಂಡಿದ್ದ ಆರ್ವಾಚೀನ ಅಜ್ಞಾ ನಾಂಧತೆಯನ್ನು ಹೋಗಲಾಡಿಸಿ ಕೇವಲ ಗುರುಭಕ್ತಿ ಪ್ರಭಾವವನ್ನು ಪ್ರತಿ ಯೊಬ್ಬರ ರೋಮ ರೋಮಗಳಲ್ಲಿ ವ್ಯಾಪಿಸುವಂತೆ ಮಾಡಿದರು. ಇದು ಪಂಡಿತರ ಮತ್ತೊಂದು ವಿಜಯ.

## ಎರಡನೇ ಪಟ್ಟಚರಾಧಿಕಾರಿಗಳ ಸಮ್ಮೇಲನ

### ನವಿಲಗುಂದ

ಧಾರವಾಡ ಜಿಲ್ಲೆಗೆ ಸೇರಿದ ನವಿಲಗುಂದ ಗ್ರಾಮದಲ್ಲಿ ಪಂಚಗೃಹ ಹಿರೇಮಠದ ಶ್ರೀ ಷ|| ಬ್ರ|| ಪಟ್ಟಾಧ್ಯಕ್ಷ ಬಸವಲಿಂಗಸ್ವಾಮಿಗಳು ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳ ಪ್ರೋತ್ಸಾಹದ ಮೇರೆಗೆ ತಮ್ಮ ಮಠದ ಖರ್ಚಿ ನಿಂದಲೇ ಪಟ್ಟಚರಾಧಿಕಾರಿಗಳ ಎರಡನೇ ಸಮ್ಮೇಳನವನ್ನು ನೆರವೇರಿಸುವ ನಿರ್ಧಾರಮಾಡಿಕೊಂಡು ೧೯೩೦ ನೇ ಮೇ ತಿಂಗಳಲ್ಲಿ ಕರೆದರು. ಈ ಸಮ್ಮೇ ಳನವು ಹೂಲಿ ಪಂಚಗೃಹ ಹಿರೇಮಠದ ಚರಪಟ್ಟಾಧ್ಯಕ್ಷರಾದ ಪಂಡಿತ ತರ್ಕಶೀರ್ಥ, ವೇದಾಂತವಿಶಾರದ, ಸಾಂಖ್ಯಾಲಂಕಾರ, ನ್ಯಾಯವಾಚಸ್ಪತಿ, ಸಂಸ್ಕೃತಸಾಹಿತ್ಯ ವಿಲಾಸ ಇತ್ಯಾದಿ ಪದವೀ ಪ್ರತಿಷ್ಠಾವಂತರಾದ ಶ್ರೀ ಷ|| ಬ್ರ|| ನೀಲಕಂಠಶಿವಾಚಾರ್ಯ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ನೆರವೇ ರಿಸಲ್ಪಟ್ಟಿತು. ಈ ಸಭೆಗೆ ಅನೇಕ ಪಟ್ಟಚರಾಧಿಕಾರಿಗಳೂ, ಮಠಾಧಿಕಾರಿ ಗಳೂ, ಭಕ್ತಶ್ರೇಷ್ಠರೂ, ಧರ್ಮಾಭಿಮಾನಿಗಳೂ ಅಸಂಖ್ಯಾತವಾಗಿ ಆಗ ಮಿಸಿದ್ದರು. ಸ್ವಾಗತವಾದನಂತರ ಅಧ್ಯಕ್ಷರು ಪೀಠವನ್ನಲಂಕರಿಸಿದರು. ಕಾರ್ಯಕ್ರಮದಂತೆ ಅನೇಕ ಪಂಡಿತರ ಭಾಷಣಗಳಾದವು ಅನಂತರ ಅಧ್ಯ ಕ್ಷರು ಮಾತನಾಡುತ್ತ ಈ ಪಟ್ಟಚರಾಧಿಕಾರಿಗಳ ಸಮ್ಮೇಳನವು ವೀರಶೈವ ಧರ್ಮಸಾಮ್ರಾಜ್ಯದ ಪಾರ್ಲಮೆಂಟ ಇದ್ದಂತೆ ಎಂದು ಭಾವಿಸಬೇಕಾಗಿದೆ. ಮತ್ತು ಶ್ರೀಜಗದ್ಗುರು ಪಂಚಾಚಾರ್ಯರ ಸಮ್ಮೇಳನವು ಇದರ ಮೇಲಿನ

ಕೌನ್ಸಿಲ್ ಎಂದು ತಿಳಿಯತಕ್ಕದ್ದು. ಶ್ರೀಜಗದ್ಗುರು ಪಂಚಾಚಾರ್ಯರಿಂದ ಹೇಳಲ್ಪಟ್ಟ ಧರ್ಮದ ಮೂಲ ಆಚಾರವಿಚಾರಗಳನ್ನು ಶಿವಾಗಮಗಳ ಪದ್ಧತಿಯಂತೆ ಸಮಾಜದಲ್ಲಿ ಆಚರಣೆಗೆ ತರಲು ಸಕಲ ಪಟ್ಟಚರಾಧಿಕಾರಿಗಳೂ ಪ್ರಯತ್ನಪಡತಕ್ಕದ್ದು. ಇತ್ಯಾದಿಯಾಗಿ ಅನೇಕ ಧಾರ್ಮಿಕ ನಿಬಂಧನೆಗಳನ್ನೂ ನಡೆಸುವ ರೀತಿಗಳನ್ನೂ ವಿವರಿಸಿ ಹೇಳಿದರು. ಆಗ ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳು ನಮ್ಮ ಧರ್ಮದ ಷಟ್‌ಸ್ಥಲ ಸಿದ್ಧಾಂತವನ್ನು ಶ್ರೀಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯಮಹರ್ಷಿಪುಂಗವರಿಗೆ ಬೋಧಿಸಿದವರಾಗಿದ್ದಾರೆ. ಅಂಥಾ ಸಿದ್ಧಾಂತ (ಶಿದ್ಧಾಂತಶಿಖಾಮಣಿ) ಪ್ರಚಾರವನ್ನು ಎಲ್ಲರೂ ಮಾಡಿ ಮಹಾಚಾರ್ಯರ ಕೀರ್ತಿಯನ್ನು ಸರ್ವತ್ರ ಪ್ರಕಾಶಗೊಳಿಸಬೇಕೆಂದು ಹೇಳುತ್ತ ಅನೇಕ ಅಗತ್ಯವಾದ ಕೆಳಕಂಡ ಗೊತ್ತುವಳಿಗಳನ್ನು ಮಂಡಿಸಲಾಗಿ ಅವೆಲ್ಲವು ಸರ್ವಾನುಮತದಿಂದ ಪಾಸು ಮಾಡಲ್ಪಟ್ಟವು.

## ಪಾಸಾದ ಠರಾವುಗಳು

(೧) ಭರತಖಂಡದಲ್ಲಿರತಕ್ಕ ಯಾವತ್ತು ಗುರುವರ್ಗದವರು ಮತದ ಊರ್ಜಿತಸ್ಥಿತಿಗೆ ಅನುಕೂಲವಾಗುವಂತೆ ಐಕ್ಯದಿಂದಿರತಕ್ಕದ್ದು.

(೨) ವೀರಶೈವ ಮತಸ್ಥಾಪಕರಾದ ಶ್ರೀಜಗದ್ಗುರು ರೇಣುಕಾದಿ ಪಂಚಪೂರ್ವಾಚಾರ್ಯರು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪಿಸಿ ಬ್ರಹ್ಮಸೂತ್ರಗಳ ಮೇಲೆಯೂ, ಶಿವಸೂತ್ರಗಳ ಮೇಲೆಯೂ, ಭಾಷ್ಯಗಳನ್ನು ಬರೆದಿದ್ದಾರೆ. ಇವರ ಈ ಸಿದ್ಧಾಂತಕ್ಕೆ ಶಕ್ತಿವಿಶಿಷ್ಟಾದ್ವೈತವೆಂತಲೂ, ಶಿವಾದ್ವೈತಸಿದ್ಧಾಂತವೆಂತಲೂ, ವಿಶೇಷಾದ್ವೈತಸಿದ್ಧಾಂತವೆಂತಲೂ, ನಾಮಗಳುಂಟು. ಈ ಸಿದ್ಧಾಂತ ಬೋಧಕಗಳಾದ ಗ್ರಂಥಗಳನ್ನೇ ಪ್ರಚಾರ ಮಾಡತಕ್ಕದ್ದು.

(೩) ವೀರಶೈವಧರ್ಮಶಾಸ್ತ್ರಾನುಸಾರವಾಗಿಯೂ, ಪುರಾಣೇತಿಹಾಸ ದೃಷ್ಟಿಯಿಂದಲೂ, ಶ್ರೀಜಗದ್ಗುರು ಪಂಚಾಚಾರ್ಯರೇ ವೀರಶೈವ ಮತ ಸ್ಥಾಪಕರಾಗಿರುತ್ತಾರೆಂಬ ವಿಷಯವನ್ನು ಶಿಷ್ಯಮಂಡಳಿಗೆ ಬೋಧಿಸತಕ್ಕದ್ದು.

(೪) [ಅ] ಎಲ್ಲ ವೀರಶೈವರು ವಿದ್ಯುಕ್ತವಾಗಿ ಶಿವದೀಕ್ಷಾ ಸಂಸ್ಕಾರವನ್ನು ಹೊಂದಬೇಕೆಂತಲೂ, ಲಿಂಗಾಂಗಿಗಳೆಲ್ಲರೂ ತಮ್ಮ ತಮ್ಮ ಇಷ್ಟಲಿಂಗಗಳನ್ನು ಯಾವ ಕಾರಣದಿಂದಲೂ ಬಿಡದೆ ಸದಾ ಧರಿಸಿಕೊಂಡೇ ಇರಬೇಕೆಂತಲೂ ಮತ್ತು ಲಿಂಗಾರ್ಚನೆ ಇಲ್ಲದೆ ಭುಂಜಿಸಕೂಡದೆಂತಲೂ, ಭಕ್ತಾದಿಗಳು ತಮ್ಮ ವಿವಾಹಾದಿ ಕಾರ್ಯಗಳನ್ನು ಯಥಾವಿಧಿಯಾಗಿ ತಮ್ಮ ಗುರುಸ್ಥಲದ ಮಠಾಧಿಕಾರಿಗಳಿಂದಲೇ ಮಾಡಿಸಬೇಕೆಂತಲೂ, ಇದಕ್ಕೆ ವಿರುದ್ಧವಾಗಿ ಆಚರಿಸಿದರೆ ಗುರುವರ್ಗದವರು ಅವರನ್ನು ಬಹಿಷ್ಕರಿಸಬೇಕೆಂತಲೂ, ಈ ಸಮ್ಮೇಲನದವರು ಅಭಿಪ್ರಾಯಪಡುತ್ತಾರೆ.

(ಬ) ಹಿರೇಮಠದವರೇ ಮೊದಲಾದ ಗುರುಸ್ಥಲದವರು ಶಿಷ್ಯರಿಗೆ ದೀಕ್ಷಾ, ಲಿಂಗಧಾರಣ, ವಿವಾಹ, ಮುಂತಾದವುಗಳನ್ನು ವಿಧ್ಯುಕ್ತವಾಗಿ ಮಾಡಿಸಿ ತಾವು ಸ್ವಧರ್ಮಾಚರಣೆಯಲ್ಲಿ ನಿರತರಾಗಿ ಶಿಷ್ಯರಿಗೆ ಧರ್ಮಾಚರಣೆಗಳನ್ನು ಬೋಧಿಸಿ ಅವುಗಳಲ್ಲಿ ಅವರನ್ನು ಪ್ರವೃತ್ತರನ್ನು ಮಾಡಿ, ಕಂಡುಬಂದ ದುರಾಚಾರಗಳನ್ನು ನಿಲ್ಲಿಸಬೇಕೆಂತಲೂ, ಹೀಗೆ ಮಾಡದವರಿಗೆ ಶಿಷ್ಯರು ಹಕ್ಕುಬಾಬು ಕೊಡಕೂಡದೆಂತಲೂ, ಮತ್ತು ಗುರುಪೀಠಗಳ ಆಜ್ಞೆಗೆ ಮೀರಿದವರನ್ನು ತಮ್ಮೊಳಗೆ ತೆಗೆದುಕೊಳ್ಳದಂತೆ ಸಮಾಜದವರು ನಿರ್ಬಂಧಿಸಬೇಕೆಂತಲೂ, ಈ ಸಮ್ಮೇಲನದವರು ಸಮ್ಮತಿಪಡುತ್ತಾರೆ.

(ಶ) ಪಟ್ಟಚರಾಧಿಕಾರಿಗಳು ತಮ್ಮ ತಮ್ಮ ಅಧಿಕಾರಗಳನ್ನು ಧರ್ಮಶಾಸ್ತ್ರಾನುಸಾರವಾಗಿ ತದ್ವಂಶಜರಾದ ಗುರುಸ್ಥಲದ ವಟುಗಳಿಗೆ ಕೊಡಬೇಕಲ್ಲದೆ, ತಪ್ಪು ತಿಳಿವಳಿಕೆಯಿಂದ ಅಕಸ್ಮಾತ್ ಯಾರಾದರು ಭಕ್ತವರ್ಗದವರಿಗೆ ಕೊಡುವುದು ಕಂಡುಬಂದರೆ ಆ ಶಾಸ್ತ್ರವಿರುದ್ಧಪದ್ಧತಿಯನ್ನು ದೂರೀಕರಿಸತಕ್ಕದ್ದು.

(ಓ) ಸಮಸ್ತ ಭಕ್ತಮಾಹೇಶ್ವರರು ತಮ್ಮ ತಮ್ಮ ಸೂತ್ರಗಳಿಗನುಸಾರವಾಗಿ ಗುರುವರ್ಗದವರಿಂದ ಉಪದೇಶವನ್ನು ಪಡೆದುಕೊಳ್ಳಬೇಕಲ್ಲದೆ ಬೇರೆ ಆಶ್ರಮದವರಿಂದ ಶಾಸ್ತ್ರವಿರುದ್ಧವಾಗಿ ಉಪದೇಶವನ್ನು ತೆಗೆದುಕೊಳ್ಳಕೂಡದೆಂದು ಅಧಿಕಾರಿಗಳು ಸಮಸ್ತ ಶಿಷ್ಯಮಂಡಳಿಗೆ ಉಪದೇಶಿಸತಕ್ಕದ್ದು.

(ಛ) ವೀರಶೈವ ಧರ್ಮಶಾಸ್ತ್ರದ ಉದಾತ್ತ ತತ್ವಗಳನ್ನು ಸಮಸ್ತ ಶಿಷ್ಯಮಂಡಳಿಗೆ ತಿಳುಹಿಸಿಕೊಡುವುದಕ್ಕೂ, ಹಾಗೂ ಅವುಗಳನ್ನು ಪ್ರಚಾರ

ದಲ್ಲಿ ತರುವುದಕ್ಕೂ "ಪಂಚಾಚಾರ್ಯ ಪತಾಕಿ" ಎಂಬ ಹೆಸರಿನ ವಾರ ಪತ್ರಿಕೆಯನ್ನು ಆದಷ್ಟು ಶೀಘ್ರವಾಗಿ ಹೊರಡಿಸಬೇಕೆಂದು ಈ ಸಮ್ಮೇಲನ ದವರು ನಿಶ್ಚೈಸಿದ್ದಾರೆ.

(೮) ಸಕಲ ಮತದವರು ತಮ್ಮ ತಮ್ಮ ಮತಸ್ಥಾಪನಾಚಾರ್ಯರ ಜಯಂತ್ಯುತ್ಸವಗಳನ್ನು ಬಹುಭಕ್ತಿಯಿಂದ ಮಾಡುವಂತೆ ವೀರಶೈವಮತದವ ರಾದರೂ, ತಮ್ಮ ಪವಿತ್ರ ಮತಸ್ಥಾಪನಾಚಾರ್ಯರ ಜಯಂತ್ಯುತ್ಸವಗಳನ್ನು ಅವಶ್ಯವಾಗಿ ಬಹುಭಕ್ತಿಯಿಂದ ಮಾಡಬೇಕು. ಪಂಚಪೀಠಗಳಲ್ಲಿ ಅನಾದಿ ಕಾಲಗಳಿಂದಲೂ ತಮ್ಮ ತಮ್ಮ ಮೂಲಾಚಾರ್ಯರ ಜಯಂತ್ಯುತ್ಸವಗಳನ್ನು ಆಯಾಯ ತಿಥಿಗಳಲ್ಲಿ ಆಚರಿಸುತ್ತಿರುವ ಫಾಲ್ಗುಣ ಶು|| ೧೩ ತಿಥಿಯಲ್ಲಿ ಶ್ರೀಜಗದ್ಗುರು ರೇಣುಕಾಚಾರ್ಯರ ಜಯಂತಿಯನ್ನೂ ವೈಶಾಖ ಶು|| ೫ ತಿಥಿಯಲ್ಲಿ ಶ್ರೀಜಗದ್ಗುರು ದಾರುಕಾಚಾರ್ಯರ ಜಯಂತಿಯನ್ನೂ, ವೈಶಾಖ ಶು|| ೩ ತಿಥಿಯಲ್ಲಿ ಶ್ರೀಜಗದ್ಗುರು ಏಕೋರಾಮಾರಾಧ್ಯರ ಜಯಂತಿಯನ್ನೂ, ಮಾಘ ಬ|| ೧೪ ಮಹಾಶಿವರಾತ್ರಿ ದಿವಸ ಶ್ರೀಜಗದ್ಗುರು ವಿಶ್ವಾರಾಧ್ಯರ ಮತ್ತು ಪಂಡಿತಾರಾಧ್ಯರ ಜಯಂತಿಗಳನ್ನೂ ಭರತಖಂಡದೊಳಗಿನ ಯಾವತ್ತೂ, ವೀರಶೈವರು ಬಹು ಭಕ್ತಿಯಿಂದ ಮಾಡತಕ್ಕದ್ದೆಂದು ಈ ಸಮ್ಮೇಲನದವರು ನಿರ್ಧರಿಸಿದ್ದಾರೆ.

(೯) ಒಂದನೇ ಸಮ್ಮೇಲನದಲ್ಲಿ ಪಾಸುಮಾಡಿ ಕಳುಹಿಸಿದಂತೆ ಈ ಸಮ್ಮೇಲನದಿಂದಾದರೂ, ದುರ್ಗದ ಸನ್ಯಾಸಿಗಳ ಅನ್ಯಾಯಕಾರ್ಯವಿಷಯದಲ್ಲಿ ನಿಷೇಧವನ್ನು ವ್ಯಕ್ತಮಾಡಿ ಮೈಸೂರು ಶ್ರೀಮನ್ಮಹಾರಾಜರವರ ಕಡೆಗೆ ಅರ್ಜಿ ಕಳಿಸಲಿಕ್ಕೆ ಕಾರ್ಯದರ್ಶಿಗಳಿಗೆ ಅಧಿಕಾರ ಕೊಟ್ಟಿರುತ್ತದೆ.

(೧೦) ಧರ್ಮಶಾಸ್ತ್ರದ ತಿಳುವಳಿಕೆಯಿಲ್ಲದೆ ಧೂರ್ತತನದಿಂದ ಶಾಸ್ತ್ರ ವಿರುದ್ಧವಾಗಿ ಬರೆದು ವರ್ತಮಾನಪತ್ರಗಳಲ್ಲಿ ಪ್ರಕಟಮಾಡಿದ ಪಾವಟೆ ಯವರ ಲೇಖನಗಳನ್ನು ಸಪ್ರಮಾಣವಾಗಿ ಖಂಡಿಸಿ ನಿಷೇಧಿಸಿದ್ದನ್ನು ಸಕಲ ಗುರುವರ್ಗದವರು ತಮ್ಮ ಶಿಷ್ಯಮಂಡಳಿಗೆ ಬೋಧಿಸತಕ್ಕದ್ದೆಂದು ಈ ಸಭೆಯು ನಿರ್ಧರಿಸಿರುತ್ತದೆ.

# ಗುರುವರ್ಗದ ಪ್ರಾಂತಿಕಪರಿಷತ್ತು

## ಕಲಾದಿಗಿ

ಬಿರೂರು ವೀರಶೈವ ಮಹಾಸಭೆಯನ್ನೂ ಕುಂದಗೋಳ, ನವಿಲಗುಂದ ಗಳಲ್ಲಿ ನಡೆದ ಪಟ್ಟಚರಾಧಿಕಾರಿಗಳ ಸಮ್ಮೇಲನಗಳನ್ನೂ ಯಶಸ್ವಿಗೊಳಿಸಿದ ಪಂಡಿತ ಕಾಶೀನಾಥಶಾಸ್ತ್ರಿಗಳು ಹಾಗೇ ಸಂಚರಿಸುತ್ತಾ ಉತ್ತರಾಭಿಮುಖ ವಾಗಿ ವಿಜಾಪುರ ಜಿಲ್ಲೆಗೆ ಸೇರಿದ ಕಲಾದಿಗಿ ಹಿರೇಮಠಕ್ಕೆ ಆಗಮಿಸಿದರು. ಅಲ್ಲಿಯ ಪೂಜ್ಯ ಶ್ರೀಗಳವರು ಶ್ರೀಶಾಸ್ತ್ರಿಗಳನ್ನು ಆದರದಿಂದ ಗೌರವಿಸಿ ತಮ್ಮ ಮಠದಲ್ಲಿ ಶಿವೈಕ್ಯಶಿವಯೋಗಿಗಳ ವಾರ್ಷಿಕಾರಾಧನೆ ನಡೆಯುವ ಪ್ರಸಂಗವನ್ನು ವಿವರಿಸಿದರು. ಅದ್ಭುತವಾಗಿ ನಡೆಯಲಿರುವ ಈ ಆರಾಧನೆಗೆ ಎಲ್ಲ ಪ್ರಾಂತೀಯ ಗುರುವರ್ಗದ ಪಟ್ಟಚರಾಧಿಕಾರಿಗಳೂ, ಮಠಾಧಿಕಾರಿಗಳೂ ಕೂಡುತ್ತಿರುವ ಯೋಗವು ತಮಗೊಂದು ಸುಯೋಗವೆಂದೇ ಭಾವಿಸಿ ಇದೇ ಸಮಯದಲ್ಲಿ "ಗುರುವರ್ಗದ ಪ್ರಾಂತಿಕಪರಿಷತ್ತನ್ನು" ಕರೆಯಬೇಕೆಂದು ಸ್ವಾಮಿಗಳಿಗೆ ಕೇಳಿಕೊಂಡರು. ಪಂಡಿತರ ಬಾಯಿಂದ ಈಮಾತು ಬರು ವುದೊಂದೇತಡ ತಥಾಸ್ತು ಎಂದು ಒಪ್ಪಿಕೊಂಡ ಸ್ವಾಮಿಗಳು ಕೂಡಲೆ ಆ ಬಗ್ಗೆ ಪ್ರತ್ತೇಕ ವ್ಯವಸ್ಥೆಯನ್ನು ಮಾಡತೊಡಗಿದರು. ಹಸ್ತ ಪತ್ರಿಕೆಗಳೂ ಹೊರಟು ಪ್ರಚಾರವಾದವು. ಆ ಪ್ರಕಾರ ಸಿದ್ಧಗೊಂಡು ನೇಮಕವಾದ ಮಿತಿಗೆ ಅಂದರೆ ಕ್ರಿ. ಶ. ೧೯೫೦ ನೇ ಜುಲೈ ತಿಂಗಳಲ್ಲಿ ಪ್ರಾಂತಿಕಪರಿಷತ್ತು ನಡೆಯಿತು. ಶ್ರೀ ಷ॥ ಬ್ರ॥ ಹೊಳೆಹೊನ್ನೂರು ಪಟ್ಟಾಧ್ಯಕ್ಷರು ಈ ಪರಿಷ ತ್ತಿನ ಅಧ್ಯಕ್ಷತೆ ವಹಿಸಿದರು. ಗುರುವರ್ಗದ ಜಾಗ್ರತೆ, ಐಕ್ಯತೆಗಳ ಬಗ್ಗೆ ಅನೇಕ ಪಂಡಿತರು, ಅಧಿಕಾರಿಗಳು ಭಾಷಣಮಾಡಿದ ನಂತರ ಪಂಡಿತ ಕಾಶೀನಾಥಶಾಸ್ತ್ರಿಗಳವರು ಐವತ್ತು ಅರವತ್ತು ಸಹಸ್ರದವರೆಗೆ ಕೂಡಿದ ಜನಸಂದಣಿಯಲ್ಲಿ ಎತ್ತರವಾದ ವೇದಿಕೆಯ ಮೇಲೆ ನಿಂತು ತಮ್ಮ ಅಮೋಘ ವಾದ ಸುದೀರ್ಘ ಭಾಷಣವನ್ನು ಪ್ರಾರಂಭಿಸಿದರು.

ಗುರುವರ್ಗದ ಮಹಾನುಭಾವರೇ ಶಿವಾಷ್ಟಾವರಣಶೇವಾತತ್ಪರರಾದ ಭಕ್ತಸಂದೋಹವೇ—

ಈ ದಿವಸ ನೀವುಗಳೆಲ್ಲರೂ ಈ ಕಲಾದಿಗಿಯ ಬೃಹನ್ಮಠಾಧ್ಯಕ್ಷ ಶ್ರೀ ಶಿವೈಕ್ಯಶಿವಯೋಗಿಪುಂಗವರ ಸಂಬಂಧವಾದ ವಾರ್ಷಿಕಸಮಾರಾಧ

ಸೋತ್ಸವಕ್ಕಾಗಿ ಆಗಮಿಸಿ ತತ್ಸಮಯದಲ್ಲಿ ನೆರೆದ ಶ್ರೀ ಗುರುವರ್ಗದ ಪ್ರಾಂತಿಕ ಪರಿಷತ್ತಿನಮಂಟಪವನ್ನಲಂಕರಿಸಿದ್ದನ್ನು ನೋಡಿ ಅತ್ಯಾನಂದ ವಾಗುತ್ತದೆ. ಶ್ರೀ ಗುರುಲಿಂಗಜಂಗಮಪೂಜಾಮಹೋತ್ಸವವೂ, ಶಿವಧರ್ಮ ಗೋಷ್ಠಿಯೂ ಸಮಕಾಲದಲ್ಲಿ ಜರಗುವ ಈ ಅರ್ಪಣ ಅನುಭವಗಳೆರಡು ಶಿವಾನುಭವಶಾಸ್ತ್ರಗಳಲ್ಲಿ ಪರ್ಯಾಯನಾಮಗಳನ್ನು ಪಡೆದು ವೀರಶೈವರಿಗೆ ನಿತ್ಯಸೇವ್ಯಗಳಾಗಿರುವವಷ್ಟೆ! ಬರಬರುತ್ತ ಈ ನಿತ್ಯಕ್ರಿಯೆಯು ಕಲಿಕಾಲ ವೈಷಮ್ಯದಿಂದ ಕುಂಠಿತವಾಗಹತ್ತಲು ಮಠಕ್ಕುಂಟಾದ ದುರ್ದಶೆಯನ್ನು ವರ್ಣಿಸಲು ಅಶಕ್ಯವೆನಿಸಿರುವದು. ಈ ದುರ್ದಶೆಯು ದೂರಾಗುವ ಹೊರ್ತು ಮಠದೇಳ್ಗೆಯು ಆಗಲಾರದು. ಇದಕ್ಕಾಗಿ ಅಲ್ಲಲ್ಲಿ ಗುರುವರ್ಗ ದವರ ಸಮ್ಮೇಲನವು ಪುನಃ ಪುನಃ ಆಗಬೇಕಾದದ್ದು ಮೇಲಾದ ಉಪಾಯ ವೆನಿಸಿರುವದು. ಇದರಿಂದ ಜ್ಞಾನಕ್ರಿಯಾಚಾರಗಳು ಪ್ರಚಾರದಲ್ಲಿ ಬಂದು ಮಠಕ್ಕೆ ಸೌಮಂಗಲ್ಯವನ್ನುಂಟುಮಾಡುವವೆಂದು ಹೇಳಲು ಸಂದೇಹವಿಲ್ಲ.

ಗುರುವರ್ಗದವರ ಕರ್ತವ್ಯಕರ್ಮಗಳು ಅವರ ಅಲಕ್ಷ್ಯೆಯಿಂದ ಎಲ್ಲೆಲ್ಲೋ ಸುಳಿಯಲಾರಂಭಿಸಿರುವವೆಂದು ಹೇಳಲು ವಿಷಾದವೆನಿಸುತ್ತದೆ. ಆದರೂ ಮಾತೃವಿಯೋಗವನ್ನು ಹೊಂದಿದ ಕರುಗಳು ಇತರ ಪಶುಗಳನ್ನು ನಂಬದೆ ಬಹುಕಡೆ ಸಂಚರಿಸುತ್ತಿದ್ದರೂ ಅಸ್ಥಿರವಾಸವುಳ್ಳದ್ದಾಗಿ ಹುಡುಕಿ ಕೊಂಡು ಬಂದ ಮಾತೃವಿನ ಧ್ವನಿಯನ್ನು ಕೇಳಿ ಬೀಳುವೆವೆಂಬ ಎಚ್ಚರ ವಿಲ್ಲದೆ ಓಡುತ್ತಬಂದು ತಾಯಿಯ ಸಾನ್ನಿಧ್ಯವನ್ನು ಹೊಂದುವಂತೆ ನಮ್ಮ ಶ್ರೀಗುರುವರ್ಗವು ಅಲಕ್ಷ್ಯೆಯಿಂದ ಕೈಬಿಟ್ಟ ಕರ್ತವ್ಯಕರ್ಮಗಳು ತಾವೇ ಮನಃಪೂರ್ವಕವಾಗಿ ಹುಡುಕಲು ಪ್ರಯತ್ನಿಸಿದಲ್ಲಿ ತಮ್ಮ ಪ್ರಭುಗಳನ್ನು ಹೊಂದಿಕೊಳ್ಳಲು ಅವಕ್ಕೆ ತಡವೆನಿಸುವದಿಲ್ಲ. ಆ ಪ್ರಕಾರ ಪ್ರಕೃತ ಕಾಲದಲ್ಲಿ ಈ ನಮ್ಮ ಗುರುವರ್ಗದವರು ಸ್ವಕರ್ತವ್ಯಕರ್ಮಗಳ ಸುಧಾರಣೆಗೆ ಪ್ರಯತ್ನಿಸಿದ್ದನ್ನು ನೋಡಿದರೆ ಅತ್ಯಾನಂದವಾಗುತ್ತದೆ. ಇದು ಶ್ರೀಮದ್ವೀರಶೈವಮತಸ್ಥಾಪಕ ಶ್ರೀ ಜಗದ್ಗುರು ಪಂಚಾಚಾರ್ಯರ ಕೃಪಾಬಲವೆಂದು ಸಂಪೂರ್ಣವಾಗಿ ಭಾವಿಸುತ್ತೇನೆ. ಅವರವರ ಕರ್ತವ್ಯ ಕರ್ಮಗಳು ಯಾವಾಗಲೂ ಅನುಷ್ಠಾನದಲ್ಲಿರಬೇಕು. ಮತ್ತೂ ಸರ್ವರೂ ಶ್ರೀಮದಾಚಾರ್ಯರ ಸಿದ್ಧಾಂತಜ್ಞರಾಗಿರಬೇಕು. ಅಂದರೆ ಪ್ರಮಾದ ವಶಾತ್ ಉಂಟಾದ ವ್ಯತ್ಯಾಸದಲ್ಲಿ ತಾವಾಗಲೀ ಸಮೀಪವರ್ತಿಗಳಾಗಲೀ

ಸರಿಪಡಿಸಲು ಯತ್ನಿಸಿದರೆ ವ್ಯತ್ಯಾಸವು ದೂರಾಗಲು ಕಷ್ಟವಿಲ್ಲ. ಅನುಷ್ಠಿಸ ತಕ್ಕವರೇ ತಮ್ಮ ಕರ್ತವ್ಯಾನುಷ್ಠಾನವನ್ನು ಮರೆತು ಶಿವಸಿದ್ಧಾಂತ ಜ್ಞಾನವೂ ಶಿಥಿಲವಾದ ಸಮಯದಲ್ಲಿ ಅದರ ಸುಧಾರಣೆಗೆ ಯತ್ನಿಸಿದರೆ ಈ ಕರ್ತವ್ಯಕರ್ಮಗಳು ಯಾರವಿರಬಹುದು ಎಂದು ಬಹು ಜನಗಳಿಗೆ ಸಂಶಯವುಂಟಾಗಿ ಶಿವಸಿದ್ಧಾಂತವನ್ನು ತಿಳಿಯದ ದೋಷದಿಂದಲೂ ತಿಳಿದಿದ್ದರೂ ದಾಕ್ಷಿಣ್ಯದಿಂದಲೂ ಕೆಲಕೆಲವು ಭಕ್ತವರ್ಗ ಮತ್ತು ಗುರುವರ್ಗ ದವರು ಯಾವ ಗುಡಿಯಾದರೇನು ನಿದ್ರೆಯು ಬಂದರೆ ಸಾಕೆಂದೂ ಯಾರ ಮನೆಯಾದರೇನು ಹೊಟ್ಟೆಗೆ ಅನ್ನವು ಬಿದ್ದರೆ ಸಾಕೆಂದೂ ಅನ್ನುವ ಕುತೂಹಲವುಳ್ಳವರಾಗಿರುವರೆಂಬ ಸಂಗತಿಯನ್ನು ಕೇಳಿ, ಎಷ್ಟು ಶೋಚಿಸಿ ದರೂ ತೀರದಾಗಿದೆ. ಧಾರ್ಮಿಕಕ್ರಿಯೆಗಳು ದಾಕ್ಷಿಣ್ಯಕ್ಕೊಳಪಟ್ಟವಲ್ಲ. ರಾಜಕೀಯೋದ್ಯೋಗಿಗಳು ನಮ್ಮವರೇ ಇರುವರೆಂದು ರಾಜಾಜ್ಞೆಗೆ ವ್ಯತ್ಯಾಸ ಗೊಳಿಸಹೋದರೆ ನಾವು ಸುಖಜೀವಿಗಳಾಗದೆ ಹೇಗೆ ರಾಜದಂಡನೆಗೆ ಪಾತ್ರ ರಾಗುವೆವೊ ಅದರಂತೆ ಧಾರ್ಮಿಕಕ್ರಿಯಾವ್ಯತ್ಯಾಸದಲ್ಲಿಯೂ ದಾಕ್ಷಿಣ್ಯವುಳ್ಳ ವರಾದರೆ ಶಿವಾಜ್ಞಾಸಮುಲ್ಲಂಘನದ್ರೋಹಕ್ಕೆ ಒಳಗಾದ ತಪ್ಪಿಗಾಗಿ ನರಕ ದಂಡನೆಯು ಅವರಿಗೆ ವಿಧಿಸಲ್ಪಡದೆ ಇರದು. ಇದನ್ನು ಮನಸ್ಸಿಗೆ ತಾರದಿರು ವದರಿಂದ ಪ್ರಕೃತದಲ್ಲಿ ಸತ್ತಾಧಿಕಾರಿಗಳಿಗೆ ಮುಂದೆ ಹೇಗೆ ಮಾಡಬೇಕೆಂಬು ವಲ್ಲಿ ವೃಥಾ ವ್ಯಾಕುಲವೂ, ಕೆಲವು ರುಚಿಗಾರರು ತಮ್ಮ ಸ್ವೇಚ್ಛಾಚಾರವು ತಮ್ಮನ್ನು ಕೈಬಿಟ್ಟುಹೋದೀತೆಂಬ ಶಂಕೆಯಿಂದ ಅಲ್ಲಲ್ಲೇ ಮಾಡುತ್ತಿರುವ ಕುತಂತ್ರವೂ, ಸಹಜಮಾರ್ಗಗಾಮಿಗಳಿಗೂ ಕೈಬಾಯಿಯಾಡದಂತೆ ಮಾಡು ತ್ತಿರುವವು. ದ್ರವ್ಯಾದಿಗಳ ಒಲುವೆಯಿಂದ ಜನಗಳನ್ನು ಗುಂಪುಗೂಡಿಸಿ ಕೊಂಡು ನಾವು ಕಾರ್ಯಗಳನ್ನು ಮಾಡಹೋದರೆ ಅವು ಸ್ಥಿರತ್ವವನ್ನು ಪಡೆಯುವದಿಲ್ಲ. ಮತ್ತು ಯಾವದೋ ಒಂದರ ಮೋಹದಿಂದ ಒಬ್ಬರದ ನ್ನೊಬ್ಬರಿಗೆ ಮಾಡಲು ಯತ್ನಿಸಿದರೂ ಅವರಿಗೆ ವೃಥಾಪವಾದವೂ, ಸ್ವಕೀಯ ಜನರಲ್ಲಿ ಅಪ್ರೀತಿಯೂ, ಗುಣದೋಷಗಳ ನಿರ್ನಿಮಿತ್ತವಾಗಿ ದ್ರೋಹವೂ ಉಂಟಾಗದೆ ಇರಲಿಕ್ಕಿಲ್ಲ. ಆದರೆ ದ್ರವ್ಯಾದಿಬಲದಿಂದ ಕಾರ್ಯವನ್ನು ಸಾಧಿಸಿದೆ ವೆಂದರೂ ಅದು ತಾನು ಇರುತ್ತಲೇ ಕೆಲವು ದಿನಗಳಮೇಲೆ ಅಥವಾ ತನ್ನ ಪಶ್ಚಾತ್ ಸಮೂಲವಿನಾಶವನ್ನೂ ಹೊಂದಿರುವುದು ಯಾವ ಅನುಭವಿಗಳಿಗೆ ಗೋಚರವಿಲ್ಲ. ಇಂಥವನ್ನು ಮನಸ್ಸಿಗೆ ತರದೆ ಅತಿರಭಸಕಾರ್ಯವನ್ನು

ಮಾಡುವದು ಕೇವಲ ಪಾಪವೆಂದು ಹೇಳುತ್ತೇವೆ. ಕೆಲಕೆಲವು ಕಡೆಯಲ್ಲಿ ಪ್ರತಿಷ್ಠಾಪೇಕ್ಷಿಗಳು ಕರ್ತವ್ಯಾಕರ್ತವ್ಯಗಳನ್ನು ವಿಚಾರಮಾಡದೆ ಪ್ರವರ್ತಿಸಿದ್ದರಿಂದ ವೀರಶೈವರ ಆಚರಣೆಗಳು ನೆತ್ತಿಗೆ ಹತ್ತದೆಹೋಗಿರುವವು. ವೀರಶೈವರಲ್ಲಿಲೌಕಿಕಮಾರ್ಗವೆಂತಲೂ ವೈದಿಕಮಾರ್ಗವೆಂತಲೂ ಎರಡುಮಾರ್ಗಗಳಿರುತ್ತವೆ. ಲೌಕಿಕರಿಗೆ ವೈದಿಕಮಾರ್ಗದಲ್ಲಿ ಪ್ರವೇಶವಿಲ್ಲದ್ದರಿಂದ ಅವರಿಗೆ ಆ ತತ್ವದ ಸುಳಿವೇ ಇಲ್ಲದಾಗಿರುವದು. ಪ್ರಕೃತದಲ್ಲಿ ಆಧುನಿಕ ಉದರಂಭರಣದ ವಿದ್ಯಾಭ್ಯಾಸಬಲದಿಂದ ವೈದಿಕರಿಗೂ ವೈದಿಕಮಾರ್ಗವು ಕಂಡೂ ಕಾಣದಂತೆ ಆಗಹತ್ತಿರುವದೆಂದು ಹೇಳಲು ಯಾರಿಗೆ ತಾನೆ ದುಃಖವಾಗಲಿಕ್ಕಿಲ್ಲ! ಮತ್ತು ಕೆಲವರಲ್ಲಿ ಬುದ್ಧಿಕಲ್ಪಿತಗಳಾದ ಅತಿವಿಚಾರಗಳು ತಲೆದೋರಹತ್ತಿರುವವು. ಅವರಿಗೆ ಶಾಸ್ತ್ರೀಯವಾಗಿಯೂ ರೂಢಿಯಲ್ಲಿಯೂ ಇರತಕ್ಕವುಗಳನ್ನು ವ್ಯತ್ಯಾಸಗೊಳಿಸಬೇಕೆಂಬ ಅಂತರುದ್ದೇಶವನ್ನು ಸಾಧಿಸತಕ್ಕದ್ದೇ ಮುಖ್ಯಕಾರಣವಾಗಿದೆ. ಇದು ಬಲವಾದ ಮೂರ್ಖತನವೆಂದು ಹೇಳಲು ಅಡ್ಡಿಯಿಲ್ಲ. ಏಕೆಂದರೆ ಲೌಕಿಕದಂತೆ ಪಾರಮಾರ್ಥಿಕವನ್ನು ಭಾವಿಸಲು ಅವಕಾಶವು ದೊರೆಯದು. ಇದಕ್ಕೆ ದೃಷ್ಟಾಂತವಾಗಿ ಒಬ್ಬ ರಾಜನಿದ್ದಾನೆಂದು ತಿಳಿಯುವ? ಆ ರಾಜನು ತನ್ನ ಪ್ರಜಾಪಾಲನಕ್ಕಾಗಿ ಕಾಯದೆಯನ್ನು ಮಾಡಿರುತ್ತಾನೆ. ದೈವದುರ್ವಿಲಾಸದಿಂದ ಆ ರಾಜನು ರಾಜ್ಯಭ್ರಷ್ಟನಾಗಲು ಮುಂದಿನ ಪ್ರಜಾಪರಿಪಾಲನೋಪಾಯಗಳು ಮುಂದೆ ಬರುವ ಚಕ್ರವರ್ತಿಯನ್ನೇ ಎದುರುನೋಡುತ್ತಿರುವವು. ಅದರಂತೆ ಧರ್ಮರಾಜ್ಯಕ್ಕೆ ಚಕ್ರವರ್ತಿಯಾದ ಶಿವನು ಬದಲಾಯಿಸಿದರೆಮಾತ್ರ ಧರ್ಮಪ್ರಜಾರಕ್ಷಣೋಪಾಯಹೇತುವಾದ ಧರ್ಮಶಾಸ್ತ್ರವು ಬದಲಾಯಿಸುವದೆಂದು ಹೇಳಲು ಅಡ್ಡಿಯಿಲ್ಲ. ಶಿವನು ಎಂದೂ ಬದಲಾಯಿಸುವಂತೆ ಇಲ್ಲವೆಂಬುದನ್ನು ತಿಳಿದಿದ್ದರೂ ಶಿವನ ಕಟ್ಟಳೆಗಳನ್ನು ಬದಲಾಯಿಸಬೇಕೆಂಬ ಪಾಪಬುದ್ಧಿಯು ಅವರ ಜನ್ಮಾಂತರದ ದುರ್ವಾಸನಾಬಲವನ್ನು ವ್ಯಕ್ತಗೊಳಿಸುತ್ತದೆ.

ಪರೋಪದೇಶವೇಲಾಯಾಂ ಶಿಷ್ಟಾಸ್ಸರ್ವೇಭವಂತಿವೈ ।
ವಿಸ್ಮರಂತೀಹಶಿಷ್ಟತ್ವಂ ಸ್ವಕಾರ್ಯೇಷ ಸಮುಪಸ್ಥಿತೇ ॥

ಎಂಬಂತೆ ಪರೋಪದೇಶ ಮಾಡುವ ಕಾಲದಲ್ಲಿದ್ದ ಬುದ್ಧಿಯು ಸ್ವಕಾರ್ಯದ ಪ್ರಸಂಗದಲ್ಲಿದ್ದರೆ ಆತನನ್ನು ಸತ್ಪುರುಷನೆಂದು ಹೇಳಬಹುದು. ಉಪದೇಶ

ಕಾಲಕ್ಕೊಂದು ತರಹ ಸ್ವಕಾರ್ಯ ಪ್ರಸಂಗದಲ್ಲೊಂದು ತರಹ ಹೀಗೆ ಭಿನ್ನತ್ವ ವಿದ್ದರೆ ಆತನಿಗೇನೆನ್ನಬೇಕೋ ತೋರದು. ಪ್ರಮಾಣವು ಹೀಗಿದ್ದರೂ "ಯಾದೇವ ಸುಂದರಂ ಯಸ್ಯ ತದೇತತ್ತಸ್ಯ ಸುಂದರಂ" ಎಂಬಂತೆ ಜನಗಳು ಅಂಥವರನ್ನು ಹಿಂಬಾಲಿಸಹತ್ತಿದ್ದರಿಂದ ನಿಜವಾದ ಧರ್ಮಾಚಾರಗಳೂ ಗತಾಚಾರಗಳಾಗಹತ್ತಿವೆ. ಇಂತಹ ಪ್ರಸಂಗದಲ್ಲಿ ಸ್ವಬುದ್ಧಿ ಕಲ್ಪಿತ ದುರ್ವಿಚಾರಗಳನ್ನು ಬಿಟ್ಟರೆ ಸಮಾಜದಲ್ಲಿ ಭೇದವೂ ಕಲಹವೂ ಪಾಪವೂ ಸಂಭವಿಸಲಾರದು. ಕೇವಲ ದರಿದ್ರನಾದ ಸಾಮಾನ್ಯ ಮನುಷ್ಯ ನೊಬ್ಬನು ಇಡೀ ದೇಶವನ್ನೇ ಕೊಂಡುಕೊಳ್ಳುವಷ್ಟು ಧನಿಕನೆನಿಸಿದ್ದರೂ ರಾಜಾಜ್ಞೆಯನ್ನು ಮೀರಲಿಕ್ಕಾದೀತೇ? ಆಗಲಿಕ್ಕಿಲ್ಲ. ಆದರೂ ಅಂಥವನು ಪ್ರಜಾಕೋಟಿಯಲ್ಲಿ ಗಣ್ಯನೆನಿಸಿರಬಹುದು. ಇನ್ನು ವಿದ್ಯೆಯಿಂದಲೇ ರಾಜ್ಯಾಧಿಕಾರವೆಂದು ಊಹಿಸಿದ್ದಾದರೆ ಚಕ್ರವರ್ತಿಗಳಿಗಿಂತ ಎಷ್ಟೋ ಜನಗಳು ಹೆಚ್ಚಾಗಿ ವಿದ್ಯೆಯನ್ನು ಕಲಿತವರುಂಟು. ಅಂಥವರೂ ರಾಜನ ಗಾದಿಯನ್ನು ಹತ್ತಲು ಅರ್ಹರೆಂದು ಹೇಳಲಿಕ್ಕಾದೀತೆ? ಹೀಗಾದ ಸಂಗತಿ ಯನ್ನು ಕಂಡವರೂ ಕೇಳಿದವರೂ ಲೋಕದಲ್ಲಿರುವರೇ? ಇಂಥ ಅಸಂಬದ್ಧ ಗಳನ್ನು ಮನಸ್ಸಿಗೆ ಒಪ್ಪಿಗೆ ಮಾಡಿಕೊಂಡಿರುವವನು ತನ್ನ ಪಾಪದ ಬುದ್ಧಿ ಯನ್ನು ಸರ್ವಾತ್ಮನಾ ಬಿಡತಕ್ಕದ್ದೆಂದು ಸೂಚಿಸುತ್ತೇವೆ.

ಕೆಲವು ದಿನದಿಂದೀಚೆಗೆ ಪರಂಪರೆಯಿಂದ ಬಂದ ಧರ್ಮಾಚಾರವು ಕಡಿಮೆಯಾಗಹತ್ತಿದ್ದರಿಂದ ಮತಕ್ಕೆ ಈ ದುಸ್ಥಿತಿಯು ಪ್ರಾಪ್ತವಾಯಿತೆಂದು ತಿಳಿಯತಕ್ಕದ್ದು. ವಿದ್ಯಾರ್ಥಿಗಳ ಸುಧಾರಣೆಯು ವಿದ್ಯಾಗುರುಗಳಿಂದಾದಂತೆ ವೀರಶೈವ ಸಮಾಜಸುಧಾರಣೆಯು ವೀರಶೈವ ಸಮಾಜದ ಗುರುವರ್ಗದವ ರಿಂದಾಗಬೇಕಾದ್ದು ನ್ಯಾಯವಾಗಿರುವುದರಿಂದ ಸಮಾಜಸುಧಾರಣೆಗೆ ಮೊದಲು ಗುರುವರ್ಗವು ಸುಶಿಕ್ಷಿತವಾಗಬೇಕಾಗಿರುವದು. ನಮ್ಮ ಈ ವೀರಶೈವ ಮತದಲ್ಲಿ ಗುರುವರ್ಗ ಭಕ್ತವರ್ಗವೆಂದು ಎರಡು ವರ್ಗಗಳಿರುತ್ತವೆ ಇವೆರಡೂ ಸಮಾಜವು ಸ್ಥಾಪಿತವಾದಂದಿನಿಂದಲೇ ನಡೆದುಬಂದಿರುವವು. ಗುರುವು ಶಕ್ತನಾಗಿದ್ದರೆ ಶಿಷ್ಯನೂ ಶಕ್ತನೇ ಆಗುವನು. ಗುರುವು ಅಶಕ್ತನಾಗಿ ದ್ದರೆ ಶಿಷ್ಯನ ಶಕ್ತಿಯನ್ನು ವರ್ಣಿಸುವುದೇನು?

ಆಚಿ ನೋತಿಚ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಲಂ ॥
ಸ್ವಯಮಾಚರತೆ ಯಸ್ಮಾದಾಚಾರ್ಯಸ್ತೇನ ಚೋತ್ಯತೆ ॥

ವೀರಶೈವ ಶಾಸ್ತ್ರರಹಸ್ಯಾರ್ಥಗಳನ್ನು ಪ್ರಕಟವಾಗಿ ಹೇಳಿ ಶಿಷ್ಯರನ್ನು ಆಚಾರದಲ್ಲಿ ನೆಲೆಗೊಳಿಸುತ್ತಾ ತಾನೂ ಆಚಾರವಂತನಾಗಿದ್ದರೆ ಆಚಾರ್ಯ ನೆಂದು ಹೇಳಿಸಿಕೊಳ್ಳುವನು. ಹೀಗೆ ಶಿವಾಚಾರ್ಯರು ಅಪ್ಪಣೆ ಕೊಡಿಸಿದ್ದು ಈ ಗುರುವರ್ಗವು ಆಮುಹದುಕ್ತಿಗೆ ಯೇಕೆ ಚಿತ್ತವನ್ನಿಟ್ಟಿಲ್ಲವೋ ತಿಳಿಯದು. ಸದ್ಯಃ ಕಾಲದಲ್ಲಿ ನಮ್ಮ ಗುರುವರ್ಗದಲ್ಲಿ ಕೆಲವರು ಸಾಮಾನ್ಯ ಜನರ ಪರಿಸ್ಥಿತಿಯನ್ನು ನೋಡಿ ನೋಡಿ ಲೌಕಿಕವಿದ್ಯೆಯಲ್ಲಿಯೂ ಭಿಕ್ಷೆಯಲ್ಲಿಯೂ ಕೇವಲ ಧನಾರ್ಜನೆಯಲ್ಲಿಯೂ ಪ್ರತಿಷ್ಠಾಕಾಂಕ್ಷೆಯಲ್ಲಿಯೂ ರಾಜಪುರುಷ ಸ್ನೇಹಾಪೇಕ್ಷೆಯಲ್ಲಿಯೂ ತಮ್ಮ ಪೂರ್ವಜರು ಸಂಪಾದಿಸಿಟ್ಟ ಧನ ಜಮೀನು ಇವುಗಳ ಭೋಗ ಮಾತ್ರದಲ್ಲಿಯೂ ಪ್ರಯತ್ನವನ್ನು ಮಾಡುತ್ತಿದ್ದರೆ ಅವರ ಗುಣದೋಷಗಳ ವಿಚಾರಕ್ಕಾಗಿ ತನುಮನೋಧನಗಳನ್ನು ವ್ಯಯಮಾಡಬೇಕೆಂಬುದು ಇನ್ನೊಬ್ಬರ ಕಾರ್ಯವಲ್ಲ. ತಾವೂ ಅದರಂತೆ ತಮ್ಮ ಸುಧಾರಣೆಯನ್ನು ಮಾಡಿಕೊಳ್ಳಲು ಪ್ರಯತ್ನಿಸಬಹುದು. ಹಾಗೆ ಯತ್ನವನ್ನಿಡದೆ ಪರರನ್ನು ಹಳಿಯ ಹತ್ತಿದರೆ ನಾವು ಉಚ್ಚಸ್ಥಿತಿಗೆ ಬಂದಂತಾಗಲಿಲ್ಲ. ಕೂಡಿದ್ದವರಲ್ಲಿ ಒಬ್ಬರಿಗೊಬ್ಬರು ಪರಸ್ಪರ ಕಲಹಗಳನ್ನು ಮಾಡಿದರೆ ಯಾರ್‍ಯಾರ ಅಂತಃಕರಣ ಪ್ರವೃತ್ತಿಗಳು ಯಾರ್‍ಯಾರ ಕಡೆಗೆ ಆಗುವವೋ ಅವರವರಿಗೆ ಅವರವರೇ ಬಾಲವಾಗುತ್ತಾರೆ. ಅಂದ ಮೇಲೆ ನಾವು ಯಾರನ್ನು ನಿಂದಿಸುತ್ತೇವೋ ಅವರು ಮೂಲೆಗುಂಪಾಗಿರುವರೆಂದು ಭಾವಿಸಕೂಡದು. ನಿರ್ನಿಮಿತ್ತವಾಗಿ ನಾವೇ ಅವರಿಗೆ ಜನಗಳ ಒಲಿಮೆಯನ್ನು ಮಾಡಿಕೊಟ್ಟಂತೆಯಾಗುತ್ತದೆ. ಇದು ಗುರುವರ್ಗದವರ ಕರ್ತವ್ಯವಲ್ಲ. ಪದ್ಧತಿಯಂತೆ ನಮ್ಮ ಸುಧಾರಣೆಯನ್ನು ಮಾತ್ರ ನಾವು ಮಾಡುತ್ತ ಹೋದರೆ ನಮ್ಮ ಹೆಸರನ್ನು ಹೇಳುವ ಭಕ್ತರು ನಮ್ಮನ್ನೇ ಅವಲಂಬಿಸಿ ಸುಖಿಸಬಹುದು. ಆಗ್ಯೆ ಜನಗಳಲ್ಲಿ ಪಂಗಡಗಳಾಗಲು ಅವಕಾಶವಿಲ್ಲ. ಇದು ನಮಗೆ ಸರ್ವಾತ್ಮನಾ ಶ್ರೇಶಯಸ್ಕರವಾದ ಪ್ರಯತ್ನವಾಗುವದು. ಈಗಿನ ನಮ್ಮ ಸುಧಾರಣಾ ಪ್ರಯತ್ನವು ಹೊಸದಲ್ಲ. ಶ್ರೀಮಹಾಚಾರ್ಯರು ಶಾಸ್ತ್ರಮರ್‍ಯಾದೆಯಿಂದ ಸಿದ್ಧಾಂತಗೊಳಿಸಿದ್ದನ್ನೇ ಉದ್ದೇಶಿಸಿ ಪ್ರಯತ್ನಿಸತಕ್ಕದ್ದಾಗಿದೆ. ಈ ಪ್ರಯತ್ನದಲ್ಲಿ ಮತ್ತೊಬ್ಬರ ಆಕ್ಷೇಪವು ಎಂದೂ ಬರಲಾರದು. ಸ್ವತಸ್ಸಿದ್ಧವಾದ ವಿಷಯದಲ್ಲಿ ಒಬ್ಬರ ದೂಷಣವೇನು? ಈ ಪ್ರಸಂಗದಲ್ಲಿ ನಮ್ಮ ಗುರುವರ್ಗವು

ಶಾಂತವಾದ ಚಿತ್ತವುಳ್ಳದ್ದಾಗಿ ಧರ್ಮಶಿಕ್ಷಣೆಯನ್ನು ಕೈಕೊಂಡು ಪೂರ್ವದ ಧರ್ಮಾಭ್ಯುದಯದ ಕಾಲವನ್ನು ಪ್ರತ್ಯಕ್ಷಮಾಡಿಕೊಡಬೇಕೆಂದು ಅತ್ಯಾಗ್ರಹದಿಂದ ಸೂಚಿಸುತ್ತೇವೆ.

ನಮ್ಮ ಗುರುವರ್ಗದವರಲ್ಲಿ ವಿದ್ಯೆಯಿಲ್ಲದವರು ಬಹುಜನಗಳಿರುವರು. ಕೆಲವು ವಿದ್ಯಾವಂತರಾದವರು ತಮ್ಮ ಕರ್ತವ್ಯದ ಕಡೆಗೆ ಲಕ್ಷ್ಯಕೊಟ್ಟು ಷಟ್ಸ್ಥಲಸಿದ್ಧಾಂತ ಜ್ಞಾನರತಿಯುಳ್ಳವರಾಗಿ ವೀರಶೈವಸಮಾಜವನ್ನು ಧರ್ಮಶಿಕ್ಷಿತವನ್ನಾಗಿ ಮಾಡದೆ ವೃಥಾ ಕಾಲಹರಣೆಯನ್ನು ಮಾಡತಕ್ಕವರಾಗಿರುವರು. ಈ ದುಸ್ಥಿತಿಯಲ್ಲಿ ಲಿಂಗಧಾರಣಾದಿ ದಶಕರ್ಮಗಳ ವಿಧಿವಿಧಾನಗಳಂತೂ ಎಲ್ಲಿಯೋ ಹೋಗಿರುವವು. ಉಂಡು ಮೈಲಿಗಿ ಬಟ್ಟೆಯನ್ನು ಹಾಕಿಕೊಂಡು ಅಪರ ರಾತ್ರಿಯಲ್ಲಿ ನಿದ್ರಾವಶರಾಗಿರುವ ವಟುಗಳಿಗೆ ರಾತ್ರಿಯಲ್ಲಿಯೇ ವಪನವನ್ನು ಮಾಡಿಸಿ ಇದ್ದಷ್ಟು ನೀರಿನಿಂದ ನಿದ್ರೆಗಣ್ಣಿನಲ್ಲಿಯೇ ಮೈತೊಳಿಸಿ ದೀಕ್ಷೆಗೆ ಇಟ್ಟ ಮುಹೂರ್ತವನ್ನು, ಒಂದು ಮರಿಗೆ ಇಷ್ಟೇ ರೂಪಾಯಿಗಳೆಂದು ಕರಾರು ಮಾಡುವದಕ್ಕೆ ಉಪಯೋಗಿಸಿಕೊಂಡು ಮುಹೂರ್ತಾನಂತರದಲ್ಲಿ ದೀಕ್ಷೆಮಾಡುವದಕ್ಕೆ ಕುಳಿತು ಮಂತ್ರಗಳ ತಾರತಮ್ಯವಿಲ್ಲದೆ ಶಿವಲಿಂಗವನ್ನು ಪಂಚಾಮೃತ ಮತ್ತು ನೀರಿನಿಂದ ತೊಳೆದು ವಟುವಿನ ಕೈತಲೆಗಳನ್ನು ಪೂಜೆಮಾಡಿ ಲಿಂಗವನ್ನು ಕೊರಳಲ್ಲಿ ಕಟ್ಟಿಬಿಟ್ಟರೆ ದೀಕ್ಷೆಯಾಯಿತು. ಅಷ್ಟರೊಳಗೆ ಪರಡಿಯನ್ನು ಹಂಚಿಕೊಳ್ಳುವಗೊಂದಲವೂ ಎದುರುನೋಡುತ್ತಲೇ ಇರುತ್ತದೆ. ಇಂಥ ಆವಸರದ ಗುರುಗಳ ದೀಕ್ಷೆಯು ಶಿಷ್ಯರಲ್ಲಿ ಯಷ್ಟರಮಟ್ಟಿಗೆ ಶಿವತ್ವವನ್ನು ನೆಲೆಗೊಳಿಸುತ್ತಿರಬಹುದು. ಬಲ್ಲವರು ವಿಧ್ಯುಕ್ತಕ್ರಮವು ಹೀಗಿದೆ ಇದರಂತೆ ಮಾಡತಕ್ಕದ್ದೆಂದು ಹೇಳಿದರೂ ಅದನ್ನು ಧಿಕ್ಕರಿಸಿ ತಮ್ಮ ಸ್ವೇಚ್ಛೆಯನ್ನು ಮುಂದುವರಿಸುವವರೇ ನಮ್ಮ ಸಮಾಜದಲ್ಲಿ ಬಹುಭಾಗವನ್ನು ಆವರಿಸಿಕೊಂಡಿದ್ದಾರೆ. ಮಣ್ಣು ಮೂರ್ತಿಯಾಗಬೇಕಾದರೆ ಕೆಲವು ದಿನದಿಂದ ಕೊಳೆಹಾಕಿ ಅದರಲ್ಲಿ ಗಟ್ಟಿಯಾಗುವ ಸಾಮಾನುಗಳನ್ನು ಬೆರಿಸಿ ಕುಟ್ಟುತ್ತಾರೆ. ಆದರೂ ಇದರಿಂದ ಕರಚರಣಾದ್ಯವಯವಯುಕ್ತ ಮೂರ್ತಿಯಾಗಬೇಕಾದರೆ ಚಿತ್ರಕಲೆಯನ್ನು ಸಂಪೂರ್ತಿ ಬಲ್ಲವರೂ ಬಣ್ಣವನ್ನು ಹಚ್ಚುವ ಚಾತುರ್ಯವುಳ್ಳವರೂ ಬೇಕಾಗುತ್ತದೆ. ಇಂಥ ಕೌಶಲ್ಯದಿಂದ ಮೂರ್ತಿಯನ್ನು ಮಾಡಿ ಅದನ್ನು ಆಲಂಕಾರಗಳಿಂದ ಅಲಂಕರಿಸಿ ಸರ್ವರೂ ಆದರಿಸುವಂತೆ ಮಾಡುತ್ತಾರೆ.

ಹಾಗೆ ಮಾಡಿದ ವಿಗ್ರಹವು ಈ ಎಲ್ಲ ಸಂಸ್ಕಾರದಿಂದ ಶಕ್ತಿಯನ್ನು ಪಡೆದು ಇಷ್ಟಾರ್ಥ ಕೊಟ್ಟದ್ದನ್ನೂ ಕೊಡುತ್ತಿರುವದನ್ನೂ ಯಲ್ಲರೂ ಅನುಭವಕ್ಕೆ ತಂದಿರುವರು. ಅದರ ಜ್ಞಾನವಿಲ್ಲದೆ ಬಂದಷ್ಟು ದುಡ್ಡು ಬಂದರೆ ಸಾಕೆಂದು ಕಾಡುಮಣ್ಣಿನಿಂದ ಕರಚರಣಾದ್ಯವಯವಗಳ ಪ್ರಮಾಣವಿಲ್ಲದೆ ಮೂರ್ತಿಯನ್ನು ಮಾಡಿ ಮೇಲೆ ಬಣ್ಣವನ್ನು ಬಳಿದಿಟ್ಟರೆ ಅಂಥ ಮೂರ್ತಿಯು ಯಷ್ಟರವುಟ್ಟಿಗೆ ಗ್ರಾಹ್ಯವಾಗಬಹುದು. ಇದರಂತೆ ಅಪ್ರತ್ಯಕ್ಷವಾದ ಶಿಷ್ಯನ ಬ್ರಹ್ಮರಂಧ್ರಸ್ಥಿತ ಚಿತ್ಕಲೆಯನ್ನು ಆಚಾರ್ಯನು ತನ್ನ ಯೋಗಸಾಮರ್ಥ್ಯದಿಂದ ಹೊರದೆಗೆದು ಅಧಿವಾಸನನ್ಯಾಸಾದಿಗಳಿಂದ ಸುಸಂಸ್ಕೃತವಾದ ಪಂಚಸೂತ್ರ ಘಟಿತ ಶಿವಲಿಂಗದಲ್ಲಿ ನೆಲೆಗೊಳಿಸಿ ಶಿಷ್ಯನ ದೇಹಶುದ್ಧಿಗೈದು ಲಿಂಗಾಂಗ ಸಂಯೋಗವಾದ ಮೇಲೆ ಗುರುವಿನ ಮಂತ್ರಸಹಿತ ಆಚಾರ ಬೋಧೆಯಿಂದ ವಟುವು ಸಲಕ್ಷಣಮೂರ್ತಿಯಾಗಿ ಗೌರವ್ಯನಾಗುವನು. ಹೀಗೆ ಶಿಷ್ಯನ ಮಾಂಸಪಿಂಡವನಳಿದು ಮಂತ್ರಪಿಂಡವನ್ನು ಮಾಡಿ ಶಿಷ್ಯವೃಂದವನ್ನು ಉದ್ಧರಿಸುವ ಆಚಾರ್ಯರು ಅವಶ್ಯಕವಾಗಿ ಬೇಕು. ಇಂಥ ಶಕ್ತಿಯು ಗುರುವರ್ಗಕ್ಕೆ ಮುಖ್ಯವಾದದ್ದಾಗಿರುತ್ತದೆ.

ಒಬ್ಬರು ಒಬ್ಬರನ್ನಾಶ್ರಯಿಸಬೇಕಾದರೆ ಆ ಆಶ್ರಯದಲ್ಲಿ ಒಂದು ಲಾಭವಿರಲಿಕ್ಕೇಬೇಕು. ಇಲ್ಲವಾದರೆ ಆಶ್ರಯಿಸುವ ಪ್ರಸಂಗವು ಬರಲಾರದು. ಶಿಷ್ಯರು ಗುರುಗಳನ್ನು ಆಶ್ರಯಿಸಬೇಕೆಂಬುದು ಮುಕ್ತಿಗೋಸ್ಕರವಿರುತ್ತದೆ. ಆದಕ್ಕಾಗಿ ಶಿಷ್ಯರು ಆಲಸ್ಯದಿಂದಿದ್ದರೂ ಗುರುಗಳು ತಾವಾಗಿಯೇ ಅವರನ್ನು ಬೋಧಿಸಿ ಎಚ್ಚರಿಸಬೇಕಾಗಿದೆ. ತಂದೆಯು ಮಕ್ಕಳನ್ನು ಬಾಲ್ಯದಿಶೆಯಲ್ಲಿ ಊರ್ಜಿತಾವಸ್ಥೆಗೆ ಬರಲಿ ಎಂಬ ಕಾಂಕ್ಷೆಯಿಂದ ಶಿಕ್ಷಿಸುತ್ತಿರುವಂತೆ ಗುರುಗಳಿಗೆ ಶಿಷ್ಯೋದ್ಧಾರವೇ ಮುಖ್ಯ ಕರ್ತವ್ಯವಾಗಿರುವದು. ಹೀಗಾದ ಧರ್ಮರಾಜ್ಯವು ಎಷ್ಟು ಶೋಭಾಯಮಾನವಾದೀತೆಂಬುದನ್ನು ವಾಂಗ್ಮಾತ್ರದಿಂದ ಹೇಳುವದೇಕೆ? ಪ್ರತ್ಯಕ್ಷವಾಗಿಯೇ ಕಾಣಬಹುದು. ಇದನ್ನು ನಮ್ಮ ಗುರುವರ್ಗದವರು ತಮ್ಮ ಉದಾರಚಿತ್ತಕ್ಕೆ ತರಬೇಕಾಗಿದೆ. ಗುರುವರ್ಗದವರಲ್ಲಿ ಕೆಲವರು ವ್ಯವಹಾರಕ್ಕೆ ತೊಡಗಿದ್ದಾರೆ. ಅದು ಅವರ ಕರ್ತವ್ಯವಲ್ಲ. ಅವರಿಗೆ ಲಿಂಗಧಾರಣ ಶಿವದೀಕ್ಷೋಪದೇಶ ಪ್ರತಿಷ್ಠಾ ಮೊದಲಾದ ಶಿವಜ್ಞಾನಕ್ರಿಯೋಪದೇಶಾದಿಗಳು ಮುಖ್ಯ ಕರ್ಮಗಳಾಗಿರುವವು. ಇವುಗಳ ವಿಧಿವಿಧಾನಗಳನ್ನು ಮೊದಲು ತಿಳಕೊಂಡಿರಬೇಕು.

ಹೀಗೆ ಮಾಡಿದ ಶಿಷ್ಯಸಂಸ್ಕಾರವೇ ಸಂಸ್ಕಾರವು. ಇಲ್ಲವಾದರೆ ಅದು ಔಪಚಾರಿಕವೆನಿಸುತ್ತದೆ. ಭಕ್ತನಿಗೆ ಗುರುವಿನಿಂದ ಕೊಡಲ್ಪಟ್ಟ ಅಷ್ಟಾವರಣಗಳಲ್ಲಿ ದೃಢಪ್ರೀತಿಯು ನೆಲೆಗೊಳ್ಳಬೇಕಾದರೆ ವಿಧ್ಯುಕ್ತ ಸಂಸ್ಕಾರಪೂರ್ವಕವಾಗಿ ಷಟ್ಸ್ಥಲ ಜ್ಞಾನಾಚಾರಗಳು ಬೋಧಿಸಲ್ಪಡತಕ್ಕದ್ದು. ಈ ಪದ್ಧತಿಯನ್ನು ಅಂಗೀಕರಿಸದೆ ದುಡ್ಡಿನ ಚೌಕಸಿಯಿಂದ ಒಂದು ತಾಸಿನಲ್ಲಿ ಐವತ್ತು ಅರವತ್ತು ಮರಿಗಳಿಗೆ ಮಾಡುತ್ತ ಬಂದ ದೀಕ್ಷೆಯೇ ಈಗ ಕೆಲವು ಭಕ್ತ ಮಾಹೇಶ್ವರರನ್ನು ಪ್ರತಿಭಟಿಸುವಂತೆ ಮಾಡಿದೆ. ಕೃಶೀವಲನು ಬೀಜಾರೋಪಣೆಗೆ ಭೂಮಿಯನ್ನು ಶುದ್ಧಗೊಳಿಸಿ ಬೀಜವನ್ನು ಬಿತ್ತುವನು. ಅದರಲ್ಲಿ ಕ್ರಮತಪ್ಪಿದರೆ ಕೃಷಿಕರ್ಮದ ಫಲವನುಂಣದೆ ಇತರ ಕೃಷೀವಲರ ಅಪಹಾಸ್ಯಕ್ಕೆ ಗುರಿಯಾಗದೆ ಇರಲಿಕ್ಕಿಲ್ಲ. ಅದರಂತೆ ಧರ್ಮಕೃಷೀವಲರಾದ ಗುರುವರ್ಗದವರು ಶಿಷ್ಯನನ್ನು ಸಂಸ್ಕರಿಸದೆ ಅವನಲ್ಲಿ ಶಿವತತ್ವವನ್ನು ನೆಲೆಗೊಳಿಸುವೆವೆಂದರೆ ಯಾರು ತಾನೆ ನಗರು. ಈ ಕಾರಣದಿಂದ ನಮ್ಮ ಗುರುವರ್ಗವು ವಿದ್ಯಾಪುನೀತವಾಗಿರತಕ್ಕದ್ದು. ಗುರುತ್ವವೂ ವಿದ್ಯೆಯಿಂದಲೇ ಪ್ರಕಾಶಿಸುತ್ತದೆ. ಪಂಚಮುದ್ರೆಗಳನ್ನು ಪಡೆದಂದಿನಿಂದ ಗುರುವರ್ಗದವರ ವೇಷವು ಶಿವವೇಷವಾಗಿದ್ದು ತಮ್ಮ ವಂದನೀಯತ್ವವನ್ನು ಸ್ಥಿರಗೊಳಿಸತಕ್ಕದ್ದಾಗಿರುವದು. ಗುರುವರ್ಗದವರು ಇಂದ್ರಿಯನಿಗ್ರಹಶಾಲಿಗಳಾಗಿ ತಮ್ಮ ವಂಶಕ್ಕೆ ಕಲಂಕ ತರದೆ ಭಕ್ತರಿಗೆ ವಿಕಲ್ಪಹುಟ್ಟಿಸದೆ ಶಾಸ್ತ್ರೋಕ್ತವಾದ ಆಚರಣೆಯುಳ್ಳವರಾಗಿರಬೇಕೆಂದು ನಮ್ಮ ಸೂಚನೆಯಿದೆ.

ಆದರೆ ಭಕ್ತರು ದುಷ್ಟನಕ್ಷತ್ರದಲ್ಲಿ ಹುಟ್ಟಿದ ತಮ್ಮ ಮಕ್ಕಳನ್ನು ಒಂದೊಂದು ಪ್ರಸಂಗದಲ್ಲಿ ಮಠಗಳಿಗೆ ದಾನ ಕೊಡುವದುಂಟು. ಕೊಟ್ಟ ಮಾತ್ರಕ್ಕೆ ಅವರು ಗುರುತ್ವಾಧಿಕಾರಕ್ಕೆ ಅರ್ಹರಾಗುವದಿಲ್ಲ. ಭಕ್ತರಿಗೆ ಗುರುತ್ವಾಧಿಕಾರವು ಇಲ್ಲವೆಂಬುದು ಶಿವಾಗಮಸಿದ್ಧಾಂತಸಮ್ಮತವಾದ ಮಾತಾಗಿದೆ. ಹದಿನಾರು ದಾನಗಳಲ್ಲಿ ಈ ಪುರುಷದಾನವೆಂಬುದು ಇಲ್ಲವೇ ಇಲ್ಲ. ಆದರೆ ಕನ್ಯೆಯು ಮಾತ್ರ ದಾನಾರ್ಹವಾದ ವಸ್ತುವಾಗಿರುವದು. ಕನ್ನಿಕೆಯನ್ನು ಮಠಕ್ಕೆ ಕೊಟ್ಟರೆ ಆಕೆಯನ್ನು ತೆಗೆದುಕೊಂಡವನು ಸ್ವತಃ ಅನುಭವಿಸಬೇಕೇ, ಭೂಮಿ ಮೊದಲಾದ ವಸ್ತುಗಳಂತೆ ಮಠದವರೆಲ್ಲರೂ ಅನುಭವಿಸಬೇಕೇ ಅಥವಾ ತಮಗೆ ಮಗಳು ಆಗಿರುವದರಿಂದ ಅನ್ಯರಿಗೆ ಕೊಡಬೇಕೇ ಎಂದು ವಿಚಾರಮಾಡಿದರೆ ವಿಕಲ್ಪವುಂಟಾಗುತ್ತದೆ. ಮನಿಯುವ

ರೆಲ್ಲರೂ ಅನುಭವಿಸಬೇಕೆಂಬುದು ಕೇವಲ ಪಾಪಹೇತುವಾದದ್ದು. ತೆಗೆದು ಕೊಂಡವನು ಗೃಹಸ್ಥಾಶ್ರಮವನ್ನು ಕೈಕೊಳ್ಳದವನಿದ್ದರೆ ಅದೂ ತುಚ್ಛವು. ಪುತ್ರಿಯೆಂಬ ಭಾವನೆಯಿಂದ ಅನ್ಯರಿಗೆ ಕೊಡಬೇಕಾದರೆ ಅದೇ ಪ್ರಭೇದ ದವನಿಗೇಕೆ ಕೊಡಬಾರದು? ಮೊದಲು ಕೊಡತಕ್ಕವನು ಕೊಡಬೇಕಾ ದರೆ ನಿನಗೆ ಪುತ್ರಿಯನ್ನಾಗಿ ಅಥವಾ ಹೆಂಡತಿಯನ್ನಾಗಿ ಕೊಡುತ್ತೇನೆಂದು ಸಂಕಲ್ಪವನ್ನು ಮಾಡಿರಬೇಕಲ್ಲವೆ? ಹೀಗೆ ನಿಯಮವಿರುವುದನ್ನು ಯಾರಾ ದರೂ ಕೇಳಿರಬಹುದೇ? ಅನ್ಯರಿಗೆ ಕೊಡಬೇಕಾದದ್ದೇ ನ್ಯಾಯವಿರುವ ಪ್ರಸಂಗದಲ್ಲಿ ಮಾಹೇಶ್ವರರಿಗೇ ಕೊಡಬೇಕೆಂಬುದು ದುಷ್ಟವಾದವೇ ಸರಿ. ಈ ದುಷ್ಟಪದ್ಧತಿಯು ಅವಿದ್ಯಾವಂತರ ಅಧಿಕಾರದಲ್ಲಿ ಆಗಿರುವದಲ್ಲದೆ ಶಾಸ್ತ್ರೀಯವಾದದ್ದಲ್ಲ. ಮಠಕ್ಕೆ ಕೊಟ್ಟವರಿಗೆ ಗುರುತ್ವ ದೀಕ್ಷಾಧಿಕಾರವಿದ್ದರೆ ಮನಿಯಲ್ಲಿರತಕ್ಕವರಿಗೆ ಗುರುತ್ವದೀಕ್ಷೆಯು ಯೇಕಾಗಬಾರದು. ಇಂಥ ಅಸಂಗತವು ಕಾಣುತ್ತಿದ್ದರೂ ಬರುವದೆಂಬುದಕ್ಕೆ ನಮ್ಮ ನವವಿಚಾರಿಗಳು ಯಾವಪ್ರಮಾಣವನ್ನು ತೋರಿಸುವರೋ ತಿಳಿಯದು. ಶಿವಾಗಮಗಳಲ್ಲಿರುವ ಗುರುವರ್ಗಭಕ್ತವರ್ಗಗಳು ತಮ್ಮ ದೀಕ್ಷೆಯಿಂದಲೇ ಭಿನ್ನವಾಗಿರುವವು. ಇವು ಗಳ ಅಭೇದಕ್ಕೆ ಹೇಗೆ ಗಮನ ನೀಡುವರೋ ಹೇಳಲು ಕಷ್ಟವು. ಕನ್ಯಾದಾನ ವೆಂದರೆ ಸ್ವಕುಲಸಂಭವನಾಗಿ ಸದಾಚಾರ ಸಂಪನ್ನನಾಗಿ ವರ್ತಿಸುವವನಿಗೆ ಕೊಡುವ ಕನ್ಯಾದಾನವೇ ಶಾಸ್ತ್ರಸಮ್ಮತವಾಗಿ ಮಾಡುವ ದಾನವು—ಇದಕ್ಕೆ

> ಸ್ವಮಾರ್ಗಾಚಾರವರ್ತಿಭ್ಯಸ್ಸ್ವ ಜಾತೀಭ್ಯಸ್ಸದಾವ್ರತೀ ।
> ತದ್ಯುಕ್ತೇಭ್ಯಸ್ಸಮಾಪದ್ಯುತ್ಕನ್ಯಾಂ ಕುಲಸಮುದ್ಭವಾಂ ॥

ಎಂದು ಮಹಾಚಾರ್ಯರ ಉಕ್ತಿಯಿರುತ್ತದೆ. ಇನ್ನು ಮಠಕ್ಕೆ ಕೊಡುವ ಪದ್ಧತಿ ಎಂದರೆ ದುಷ್ಟನಕ್ಷತ್ರದಲ್ಲಿ ಹುಟ್ಟಿದ್ದರ ದೋಷ ನಿವೃತ್ತಿಗೋಸ್ಕರ ವಿರುವದು. ಪ್ರಕೃತದಲ್ಲಿ ಮೂಲ ನಕ್ಷತ್ರದಲ್ಲಿ ಒಂದು ಶಿಶುವು ಹುಟ್ಟಿತೆಂದು ಭಾವಿಸುವಾ? ಶಾಂತಿ ಕಮಲಾಕರ ಮುಂತಾದ ಗ್ರಂಥಗಳಲ್ಲಿ ಹೇಳಿದಂತೆ ದುಷ್ಟನಕ್ಷತ್ರದ ದೋಷ ನಿವೃತ್ತಿಗಾಗಿ ಗೋಮುಖ ಪ್ರಸವ ಶಾಂತಿಯನ್ನು ಮಾಡಿಸಬೇಕೆಂದು ನಿಯಮವಿರುತ್ತದೆ. ಶಾಂತಿಮಾಡಿಸುವುದರಿಂದ ಶುಭ ನಕ್ಷತ್ರದಲ್ಲಿ ಶಿಶುವು ಹುಟ್ಟಿದಂತೆ ಆಗುವದೆಂಬುದೇ ಅದರ ತತ್ವವಿರುವದು. ಹೀಗೆ ಜನಿಸಿದ ಪುತ್ರನನ್ನು ಜನನೀಜನಕರು ನಿಸ್ಸಂದೇಹವಾಗಿ ಅಂಗೀ ಕರಿಸುತ್ತಾರೆ. ಗೋಮುಖ ಪ್ರಸವವೆಂದರೆ ಗೋವಿನಿಂದ ಹುಟ್ಟಿದ್ದೆಂದು

ಅರ್ಥ. ಈ ಸಂದರ್ಭದಲ್ಲಿ ಮಾತಾಪಿತೃಗಳು ವಿಪರೀತ ವಿಚಾರಕ್ಕೆ ಮನವನ್ನಿತ್ತರೆ ಗೋಸಂಜಾತಪುತ್ರನನ್ನು ಅಥವಾ ಪುತ್ರಿಯನ್ನು ಪಶುವಂಶವೆಂದು ಪಶುಗಳ ಜೊತೆಗೆ ಗೋದಲಿಗೆ ಕಟ್ಟುವದಕ್ಕೆ ಹೇಗೆ ಯತ್ನಿಸುವದಿಲ್ಲವೊ ಅದರಂತೆ ಮಠಕ್ಕೆ ಕೊಟ್ಟರೂ ಪ್ರಕೃತ ಸಂಸ್ಕಾರದಿಂದ ದುಷ್ಟನಕ್ಷತ್ರ ದೋಷವು ನಿವೃತ್ತಿಯಾಗಿ ಗುರುಮುಖದಿಂದ ಬಂದ ಶಿಶುವು ಶುಭನಕ್ಷತ್ರದಲ್ಲಿ ಸಂಜಾತವಾಯಿತೆಂದು ಭಾವಿಸಿ ಜನನೀ ಜನಕರು ಪುನಃ ಗುರುದಂಪತಿಗಳಿಂದ ಶಿಶುವನ್ನು ಸ್ವೀಕರಿಸಲು ಅಡ್ಡಿಯಿಲ್ಲ. ಅಕಸ್ಮಾತ್ ಸಂತತಿಯಾಗದೆ ಗುರುವಂಶವು ಬೆಳೆಯುವುದಕ್ಕೆ ಮಾರ್ಗವೇನೆಂದು ಸಂಶಯವು ಹುಟ್ಟುವ ಕಾರಣವಿಲ್ಲ. ತಾನು ಯಾವ ಸಿಂಹಾಸನಕ್ಕೆ ಹೊಂದಿದವನೋ ಆ ಶಾಖೆಯವರೆಲ್ಲ ತನ್ನ ವಂಶದವರೇ ಆಗುವದರಿಂದ ಆ ವಂಶಸಂಜಾತ ವಟುವನ್ನು ತದ್ಧಧಿಕಾರಕ್ಕಾಗಲಿ ವಂಶವೃದ್ಧಿಗಾಗಲಿ ಅಂಗೀಕರಿಸುವುದಕ್ಕೆ ಯಾವ ಆಕ್ಷೇಪವೂ ಇರುವದಿಲ್ಲ. ಹೀಗೆ ನಮ್ಮ ಗುರುವರ್ಗವು ಧರ್ಮದೃಷ್ಟಿಯಿಟ್ಟರೆ ಧರ್ಮವಂಶವು ದೂಷಿತವಾಗದೆಂದು ಹೇಳಲುಸಂಶಯವಿಲ್ಲ.

ರೋಗದ ಕಾರಣವನ್ನು ಊಹಿಸಿ ತಕ್ಕ ಔಷಧಿಯನ್ನು ಕೊಟ್ಟರೆ ರೋಗವು ದೂರಾಗಿ ಸುಖವುಂಟಾಗುವದು ಹಾಗೆ ಮಾಡದೆ ರೋಗಕ್ಕೆವಿರುದ್ಧವಾದ ಔಷಧಿಯನ್ನು ಕೊಟ್ಟರೆ ರೋಗವು ಪ್ರಬಲಿಸಿ ಪ್ರಾಣಕ್ಕೆ ಅಪಾಯ ಬರದೆಇರಲಾರದು. ಅದರಂತೆ ನಾವು ಧರ್ಮಶಿಕ್ಷಣೆಯನ್ನು ಹೊಂದಿ ಅಶಾಸ್ತ್ರೀಯವಾದ ಪದ್ಧತಿಗಳನ್ನು ಬಿಡುತ್ತ ಹೋದರೆ ಗುರುವರ್ಗವು ಒಳ್ಳೇ ಊರ್ಜಿತ ಸ್ಥಿತಿಯನ್ನು ಪಡೆಯುತ್ತದೆ. ನಮ್ಮ ಸುಧಾರಣೆಗೆ ಅನ್ಯರ ದೂಷಣೆಯೂ ಅನ್ಯರ ಭೂಷಣೆಯೂ ಕಾರಣವಾದದ್ದಲ್ಲ. ಕೇವಲ ಶಾಂತಿ ಸಮಾಧಾನಗಳು ನಮಗೆ ಜಯವನ್ನು ಕೊಟ್ಟಂತೆ ರಾಗದ್ವೇಷಗಳು ಕೊಡಲಾರವು. ನಮ್ಮ ಕರ್ತವ್ಯ ಕರ್ಮವು ಹೇಗೆ ಇರಬೇಕೆಂಬುದಕ್ಕೆ ಶ್ರೀಜಗದ್ಗುರು ರೇಣುಕಶಿವಾಚಾರ್ಯರು ಅಗಸ್ತ್ಯ ಋಷಿಗೆ ಬೋಧಿಸಿದ ಏಕೋತ್ತರ ಶತಸ್ಥಲಗಳಲ್ಲಿ ಉಕ್ತವಾದ ಗುರುರಕ್ಷಣೆಯಿಂದ ಊಹಿಸಬಹುದಾದ ಸಿದ್ಧಾಂತಶಿಖಾಮಣಿಯ ಪ್ರಮಾಣವನ್ನು ಇಲ್ಲಿ ಕೊಡುವೆವು.

## ಗುರುಲಕ್ಷಣ

ತತೋವಿವೇಕಸಂಪನ್ನೋ ವಿರಾಗೀ ಶುದ್ಧಮಾನಸಃ
ಜಿಜ್ಞಾಸುಃ ಸರ್ವಸಂಸಾರದೋಷಧ್ವಂಸಕರಂ ಶಿವಂ ॥

ಋಷ್ಯೈತಿ ಲೋಕವಿಖ್ಯಾತಂ ಲೋಭಮೋಹವಿವರ್ಜಿತಂ ।
ಆತ್ಮತತ್ವವಿಚಾರಜ್ಞಂ ವಿಮುಕ್ತವಿಷಯಭ್ರಮಂ ॥
ಶಿವಸಿದ್ಧಾಂತತತ್ತ್ವಜ್ಞಂ ಛಿನ್ನಸಂದೇಹವಿಭ್ರಮಂ ।
ಸರ್ವತಂತ್ರಪ್ರಯೋಗಜ್ಞಂ ಧಾರ್ಮಿಕಂ ಸತ್ಯವಾದಿನಂ ॥
ಕುಲಕ್ರಮಾಗತಾಚಾರಂ ಕುಮಾರ್ಗಾಚಾರವರ್ಜಿತಂ ।
ಶಿವಧ್ಯಾನಪರಂ ಶಾಂತಂ ಶಿವತತ್ವವಿವೇಕಿನಂ ॥
ಭಸ್ಮೋದ್ಧೂಲನನಿಷ್ಣಾತಂ ಭಸ್ಮತತ್ವವಿವೇಕಿನಂ ।
ತ್ರಿಪುಂಡ್ರಧಾರಣೋತ್ಕಂಠಂ ಧೃತರುದ್ರಾಕ್ಷಮಾಲಿಕಂ ॥
ಲಿಂಗಧಾರಣಸಂಯುಕ್ತಂ ಲಿಂಗಪೂಜಾಪರಾಯಣಂ ।
ಲಿಂಗಾಂಗಯೋಗತತ್ವಜ್ಞಂ ನಿರೂಢಾದ್ವೈತವಾಸನಂ ।
ಲಿಂಗಾಂಗಸ್ಥಲಭೇದಜ್ಞಂ ಶ್ರೀಗುರುಂ ಶಿವವಾದಿನಂ ॥

ಈ ಪ್ರಮಾಣದಿಂದ ನಮ್ಮ ಗುರುವರ್ಗವು ತಮ್ಮ ಗುರುನಾಮವನ್ನು ಎಂದು ಸಾರ್ಥಕ ಮಾಡಿಕೊಳ್ಳುವದೋ ಅಂದಿಗೆ ನಮ್ಮ ಸಮಾಜವು ಪವಿತ್ರವಾಗುವದು. ಇದರಂತೆ ವರ್ತಿಸಿದರೆ ನಮ್ಮ ಆಚಾರ್ಯರ ಮಾತನ್ನು ನಾವು ನಡಿಸಿದಂತೆಯಾಗುತ್ತದೆ. ಇಲ್ಲವಾದರೆ ನಮ್ಮ ಆಚಾರ್ಯರ ಮಾತನ್ನು ನಾವೇ ಖಂಡಿಸಿದಂತೆಯಾಗುವುದು. ಹೀಗಾದ ಮೇಲೆ ನಮ್ಮ ಮಾತನ್ನು ಎರಡನೆಯವರು ಕೇಳಲಿಲ್ಲವೆಂದು ಅನ್ನುವದು ಸಯುಕ್ತಿಕವೆನಿಸದು. ಗುರುವಿಗೂ ಶಿಷ್ಯನಿಗೂ ನಿತ್ಯ ಸಂಬಂಧವಿದ್ದು ಆ ಸಂಬಂಧಕ್ಕೆ ಇದೇ ಪದ್ಧತಿಯು ಕಾರಣವೆಂದು ನಿಶ್ಚಯಿಸಿದ ಮತ್ತು ಆಚರಿಸಿದ ಮತ್ತು ಆಚರಿಸಿ ತೋರಿಸಿದ ಮಾರ್ಗವನ್ನು ಬಿಟ್ಟು ಭಕ್ತರನ್ನು ನಡೆಸಿಕೊಳ್ಳುವದಕ್ಕೆ ಇನ್ನಾವ ದಾರಿಯನ್ನೂ ಕಾಣಲಾರೆವು. ನಾವು ವ್ಯಾಘ್ರಸ್ವರೂಪವನ್ನು ಧರಿಸಿದರೆ ಅವರೂ ಅದೇ ಸ್ವರೂಪವನ್ನೇ ಹೊಂದಬಹುದು. ನಾವು ಶಾಂತಾಕಾರದಿಂದೊಪ್ಪಿದರೆ ಅವರೂ ಶಾಂತಾಕಾರವುಳ್ಳವರಾಗುವರು. ಇದನ್ನು ಧ್ಯಾನಕ್ಕೆ ತಂದು ನಮ್ಮ ಸುಧಾರಣೆಯೇ ಭಕ್ತಸುಧಾರಣೆಯೆಂದು ನಿಶ್ಚಯಿಸಿ ನಮ್ಮ ಗುರುವರ್ಗದವರು ಧಾರ್ಮಿಕಶಿಕ್ಷಣೆಯಲ್ಲಿ ನಿರತರಾಗಬೇಕೆಂದು ಅಲ್ಪಾಗ್ರಹದಿಂದ ಹೇಳುತ್ತೇವೆ.

## ದೀಕ್ಷಾಮಹತ್ವ

ದೀಕ್ಷೆಯೆಂಬುದು ಶಿವನಿಗೂ ಜೀವನಿಗೂ ನಿತ್ಯಸಂಬಂಧವನ್ನುಂಟು ಮಾಡಿಕೊಡತಕ್ಕದ್ದಿರುವದು. ದೀಕ್ಷೆಯಿಲ್ಲದೆ ನಮಗೆ ಧರ್ಮಾಧಿಕಾರವು ದೊರೆ

ಯುವದಿಲ್ಲ. ಜನನವಾದ ಕೂಡಲೆ ನಮಗೆ ಲಿಂಗಧಾರಣೆಯಾದರೂ ಪೂರ್ಣ ವೀರಶೈವತ್ವವು ದೊರೆತಂತಾಗಲಿಲ್ಲ. ಕನ್ನಿಕೆಯನ್ನು ಇಂಥ ವರನಿಗೆ ಕೊಡುತ್ತೇನೆಂದು ವಾಗ್ದಾನಮಾಡಿದ ಮಾತ್ರಕ್ಕೆ ಈ ಕನ್ನಿಕೆಗೆ ಈ ವರನು ಪತಿಯಾಗ ತಕ್ಕವನೆಂದು ಗೊತ್ತಾಯಿತಲ್ಲದೆ ಆಗ್ಯೆ ಅವರಿಗೆ ಶಾರೀರಕ ಸುಖವು ದೊರಿಯಲಾರದು. ಶಾರೀರಕ ಸುಖಕ್ಕೆ ವಿವಾಹಾದಿ ಸಂಸ್ಕಾರಗಳು ಬೇಕಾಗುವಂತೆ ಲಿಂಗವೇ ಪತಿ ತಾನೇ ಸತಿಯೆಂಬ ವೀರಶೈವನಿಗೆ ಜಾತಕರ್ಮವು (ಲಿಂಗಧಾರಣವು) ವಾಗ್ದಾನದಂತೆಯೂ ಲಿಂಗಾಂಗಸಂಯೋಗ ದಾಯಕವಾದ ಶಿವದೀಕ್ಷೋಪದೇಶವು ವಿವಾಹಾದಿ ಸಂಸ್ಕಾರದಂತೆಯೂ ಇರುವದೆಂದು ಭಾವಿಸಬಹುದು. ಇದರಿಂದ ವೀರಶೈವನಿಗೆ ಪೂರ್ಣಪತ್ನಿತ್ವವು ದೊರೆತು ಲಿಂಗರೂಪ ಪತಿಯೊಡನೆ ಅಭೇದದಿಂದ ವರ್ತಿಸುವ ಸುಸ್ಥಿತಿಯು ಒದಗುತ್ತದೆ. ವೀರಶೈವನಿಗೆ ಲಿಂಗಧಾರಣವು ಮುಖ್ಯ ಚಿಹ್ನವಿರುವದು "ಅಮೃತಸ್ಯಚ ಯದ್ವೇದೆ ನಿರುಕ್ತಂ ದೇವಧಾರಣಂ" ಎಂಬ ಪ್ರಮಾಣದಿಂದ ಲಿಂಗಧಾರಣವು ಮುಕ್ತಿಗೋಸ್ಕರ ವಿರುವದರಿಂದ ವೀರಶೈವನಿಗೆ ಲಿಂಗಧಾರಣವೇ ಮುಖ್ಯಚಿಹ್ನವೆಂದು ವೇದಾಗಮುಸಮ್ಮತವಾದ ಶಿವಾಚಾರ್ಯಸಿದ್ಧಾಂತವಿರುವದು. ಲಿಂಗವೆಂದರೆ ಬ್ರಹ್ಮಾತಿರಿಕ್ತವಾದ ವಸ್ತುವಲ್ಲ "ಬ್ರಹ್ಮೇತಿಲಿಂಗಮಾಖ್ಯಾತಂ ಲಿಂಗರೂಪೀಶಿವಸ್ಸ್ವಯಂ" ಇತ್ಯಾದಿ ಪ್ರಮಾಣಗಳಿಂದ ಬ್ರಹ್ಮ ಲಿಂಗ ಶಿವ ಇವು ಪರ್ಯಾಯನಾಮಗಳಾಗಿರುವವು. ಸಕಲ ವೇದಾಂತಗಳೂ ಬ್ರಹ್ಮಧಾರಣವನ್ನೇ ಪ್ರತಿಪಾದಿಸುತ್ತವೆ. ಲಿಂಗ (ಬ್ರಹ್ಮ) ಧಾರಣವು ಅಂತರ್ಲಿಂಗಧಾರಣವೆಂತಲೂ ಬಹಿರ್ಲಿಂಗಧಾರಣವೆಂತಲೂ ಎರಡು ಪ್ರಕಾರವಿರುತ್ತದೆ. ಅಂತರ್ಲಿಂಗಧಾರಣವು ಬಹಿರ್ಲಿಂಗಧಾರಣ ಪೂರ್ವಕವಾಗಿರುವದು ಬಹಿರ್ಲಿಂಗಧಾರಣ ಪೂಜಾದಿಗಳಿಲ್ಲದೆ ಅಂತರ್ಲಿಂಗಧಾರಣ ಪೂಜಾದಿಗಳು ಸಿದ್ಧಿಸುವದಿಲ್ಲ. ಕಟ್ಟಿಗಿಯೊಳಗಿನ ಬೆಂಕಿಯೂ ಗೋಪಿನ ಹೊಟ್ಟೆಯೊಳಗಿರುವ ತುಪ್ಪವೂ ಘರ್ಷಣ ದೋಹನಗಳಿಂದಲ್ಲದೆ ಹೊರಗೆ ಬಂದು ಜಡತ್ವವನ್ನೂ ದೇಹರೋಗವನ್ನೂ ಕಳೆಯವು. ಒಳಗಿರುವ ಚಿದಾತ್ಮನೇ ಬಹಿರಿಷ್ಟಲಿಂಗರೂಪದಿಂದ ಧರಿಸಲ್ಪಟ್ಟು ಪೂಜಿಸಲ್ಪಡುವನೆಂದು ತಿಳಿಯಬೇಕು. ಅಂತರ್ಲಿಂಗೋಪಾಸನೆಯು ಮುಖ್ಯೋಪಾಸನೆಯೆಂತಿದ್ದರೂ ಅದು ಉಪಾಸಕನಿಗೆ ಸುಸ್ಥಿರವಾಗಿ ಕೊಡಬೇಕಾದ ಸುಖವನ್ನು ಕೊಡುವದಿಲ್ಲ. ದರ್ಪಣವೆಂದು ಬಾಯಿಯಿಂದ ಉಚ್ಚರಿಸಿದ

ಮಾತ್ರಕ್ಕೆ ನಮ್ಮ ಮುಖದಲಕ್ಷಣವನ್ನು ಕಾಣಲಾರೆವು. ಆದಕ್ಕೆ ದರ್ಪಣವೇ ಬೇಕಾಗುತ್ತದೆ. ಮತ್ತು ಗಜಶಾಸ್ತ್ರ ಅಶ್ವಶಾಸ್ತ್ರಗಳನ್ನು ಓದಿದ್ದರೂ ಅವುಗಳ ಆರೋಹಣವನ್ನು ಮಾಡಿಯೇ ಆ ಸುಖವನ್ನು ಅನುಭವಿಸಬೇಕಲ್ಲದೆ ಅಧ್ಯಯನವನ್ನು ಮಾಡಿದ ಮಾತ್ರದಿಂದ ಸುಖಾನುಭವವು ಉಂಟಾಗಲಾರದು. ಅದರಂತೆ ಬಹಿರುಪಾಸನೆಯಿಂದಲ್ಲದೆ ಅಂತರುಪಾಸನೆಯು ಸಿದ್ಧಿಸುವದಿಲ್ಲವೆಂತಲೂ, ಅಂತರ್ಲಿಂಗಧಾರಣವು ಸಿದ್ಧಿಸಲಿ ಸಿದ್ಧಿಸದಿರಲಿ ಬಹಿರ್ಲಿಂಗಧಾರಣವು ವೀರಶೈವನಿಗೆ ಅವಶ್ಯಕವಾದದ್ದೆಂತಲೂ ಶ್ರೀ ಮಹಾ ಶಿವಾಚಾರ್ಯರು ಸಿದ್ಧಾಂತಗೊಳಿಸಿರುವರು. ಇಂಥ ಶಿವಲಿಂಗವು ಶಕ್ತಿವಿಶಿಷ್ಟ ವಾಗಿರುತ್ತದೆ. ಗೋಳಕವೇ ಶಿವಲಿಂಗವೆಂತಲೂ ಪೀಠವೇ ಶಕ್ತಿಯೆಂತಲೂ ಶಿವಾಗಮಗಳ ಉಕ್ತಿಯಿರುವದರಿಂದ ಶಿವಲಿಂಗವು ಶಿವಶಕ್ತ್ಯಾತ್ಮಕವಾಗಿರುವ ದೆಂದುಸುರುವದಕ್ಕೆ " ಶಿವೋಲಿಂಗಮು ಮೈವಾಂಗಂ" ಎಂದು ಪ್ರಮಾಣವೂ ಇರುವದು. ಹೀಗೆ ಲಿಂಗ ಮತ್ತು ಅಂಗ ಇವುಗಳಿಗೆ ಸಂಯೋಗವುಂಟಾಗಿ ತತ್ಸಂಬಂಧವಾದ ಜ್ಞಾನದಲ್ಲಿ ಯಾವಾಗಲೂ ವಿನೋದ ಪಡತಕ್ಕವನೇ ವೀರಶೈವನಾಗಿರುವನು. ಇದಕ್ಕೆ ಆಗಮಪ್ರಮಾಣವೂ ಹೀಗೆ ಇರುವದು.

ವಿಶಬ್ದೇನೋಚ್ಯತೆ ವಿದ್ಯಾ ಶಿವಜೀವೈಕ್ಯ ಬೋಧಿನೀ ।
ತಸ್ಯಾಂ ರಮಂತೆ ಯೇಶೈವಾ ವೀರಶೈವಾಸ್ತುತೆಮತಾಃ ॥

ಅಂದರೆ ಶಿವ ಮತ್ತು ಜೀವ ಇವರಿಗೆ ಏಕತ್ವವನ್ನು ಹೇಳುವವಿದ್ಯೆಯು ಯಾವದೋ ಅದು -ವಿ-ಯಂಬಶಬ್ದದಿಂದ ಹೇಳಲ್ಪಡುತ್ತದೆ. ಅಂಥ ವಿದ್ಯೆ ಯಲ್ಲಿ ಯಾವಾಗಲೂ ವಿನೋದ ಮಾಡತಕ್ಕ ಶೈವನು ಆವಾತನೋ ಆತನೇ ವೀರಶೈವನು. ಹೀಗಿರುವುದರಿಂದ ಇಂಥ ಲಿಂಗಾಂಗಸಾಮರಸ್ಯ ಜ್ಞಾನಬೋಧಕವಾದ ದಿವ್ಯವಿದ್ಯದಲ್ಲಿ ವಿನೋದ ಸುಖಸಂಪತ್ತನ್ನು ಕೊಡುವ ಶ್ರೀಗುರುಸ್ವಾಮಿ ಕೃತ ಶಿವದೀಕ್ಷೆಯು ವೀರಶೈವನಿಗೆ ಅತ್ಯವಶ್ಯಕ ವಾಗಿರುವದು. ಆದ್ದರಿಂದಲೇ ಅವನಿಗೆ ವೀರಶೈವನೆಂಬ ನಾಮವು ಅನ್ವರ್ಥಕವಾಗುವುದರಿಂದ ಆ ಕಾಲಕ್ಕೆ ಗುರುಸ್ವಾಮಿಯು ಶಿವದೀಕ್ಷೆಯನ್ನು ಮಾಡಿ ಷಟ್ಸ್ಥಲಜ್ಞಾನಾಚಾರಗಳನ್ನು ಹೇಗೆ ಬೋಧಿಸುತ್ತಾನೋ ಆಕಟ್ಟಳೆ ಪ್ರಕಾರ ವರ್ತಿಸತಕ್ಕದ್ದು. ಜ್ಞಾನಾಚಾರಗಳು ದೀಕ್ಷೆಯಿಂದಲೇ ದೊರೆಯಬೇಕಾದ್ದರಿಂದ ನಮ್ಮ ಮತದಲ್ಲಿ ಸ್ತ್ರೀಯರೂ ಪುರುಷರೂ

ಶಿವದೀಕ್ಷೆಯನ್ನು ಹೊಂದಿಯೇ ತೀರಬೇಕು. ಒಬ್ಬರು ದೀಕ್ಷಾನ್ವಿತರಾಗಿ ಇನ್ನೊಬ್ಬರು ದೀಕ್ಷಾಸಂಸಾರವನ್ನು ಹೊಂದದಿದ್ದರೆ ಅವರ ಸಂಬಂಧವು ಅಯುಕ್ತವೆಂದು ನಮ್ಮ ಸಿದ್ಧಾಂತವಿರುವದು. ಮತ್ತು ಒಂದು ಮನೆತನಕ್ಕೆ ಒಬ್ಬನೇ ಗುರುವಿರತಕ್ಕದ್ದೆಂಬುದಕ್ಕೆ

" ಏಕಏವಗುರುರ್ಬ್ರಹ್ಮನೆ ಭ್ರಾತೃಭಾರ್ಯಾತ್ಮಜಾತ್ಮನಾಂ !
ಇತ್ಥಂತೇಷಾಂಚ ಸರ್ವೇಷಾಂ ಯಥಾಹಂ ಜಗತಾಂಪತಿಃ ॥

ಇತ್ಯಾದಿ ಪ್ರಮಾಣಗಳಿರುವವು. ಹೆಂಡತಿಗೊಬ್ಬ ಗುರುವು, ಗಂಡನಿಗೊಬ್ಬ ಗುರುವು, ಅಣ್ಣನಿಗೊಬ್ಬ ಗುಡುವು, ತಮ್ಮನಿಗೊಬ್ಬ ಗುರುವು, ಹೀಗೆ ಗುರುಬಾಹುಲ್ಯವಿದ್ದದ್ದಾದರೆ ಮನೆತನದ ನಿಪಾತಕ್ಕೆ ಕಾರಣವಾಗಿರುವದು. ಮನೆತನಕ್ಕೆ ಒಬ್ಬಗುರುವೆಂಬುದು ರೂಢಿಯಲ್ಲಿಯೂ ಶಾಸ್ತ್ರದಲ್ಲಿಯೂ ಪ್ರಸಿದ್ಧವಾಗಿರುವದು. ಹೀಗಿದ್ದರೂ ಕೆಲವು ಶಿವಾಜ್ಞಾವಂಚಕರು ಪರಶಿವನ ಅಪ್ಪಣೆಯನ್ನು ಶಿಥಿಲಗೊಳಿಸಲು ಪ್ರಯತ್ನಪಡುತ್ತಿರುವರು. ಶಿವಶಿವ! ಶಿವಾಜ್ಞೆಯನ್ನೇ ಮೀರಿದ ಈ ಧರ್ಮಭ್ರಷ್ಟರು ಇನ್ನೇತಕ್ಕೆ ಹೇಸುವರೋ ತಿಳಿಯದು. ಇವರು ಯಾವ ಸ್ತ್ರೀಯಾದರೇನು ಯಾವ ಪುರುಷನಾದರೇನು ಅಗಿದು ತಿಂದ ಅನ್ನರಸವೇ ಸ್ತ್ರೀಪುರುಷರಲ್ಲಿ ರಕ್ತರೇತಸ್ಸುಗಳಾಗಿ ಅವೆರಡರ ಸಂಯೋಗದಿಂದ ಪಿಂಡವಾಗುತ್ತಿರುವದು. ಇಂಥಾದ್ದರಲ್ಲಿ ಸ್ತ್ರೀಪುರುಷರ ಜಾತಿ ತಾರತಮ್ಯ ಏತಕ್ಕೆ ಬೇಕು; ಎಂದು ಹೇಳುತ್ತಾರೆ. ಇದು ಸರ್ವಥಾ ಚಾಂಡಾಲತ್ವವೇ ಸರಿ. ವೀರಶೈವಮತದ ತಳಹದಿಯು ಶ್ರೀಮದಾಚಾರ್ಯರಿಂದ ಸುಸ್ಥಿರವಾಗಿ ರಚಿಸಲ್ಪಟ್ಟಿರುವದು. ಅಂಥ ನಿಸ್ಸಂದಿಗ್ಧವಾದ ಮಾರ್ಗದಲ್ಲಿಯೂ ಈ ದುಷ್ಟವಿಚಾರವು ಪಾಪಭೂಯಿಷ್ಠವಾಗಿರುವದೆಂದು ಹೇಳಬೇಕಾದ ಕಾರಣವಿಲ್ಲ. ಇಂಥವರು ಒಂದೊಂದು ಕಾಲದಲ್ಲಿ ಹುಟ್ಟಿ ಸಾಯುತ್ತಿರುವರು. ಆದ್ದರಿಂದ ಅಶಾಸ್ತ್ರೀಯವೂ ಅಸೂಯಾ ಪರವೂ ಆದ ಇಂಥ ಕುವಿಚಾರಗಳನ್ನು ಮಾಡದೆ ಶಿವಸಿದ್ಧಾಂತದಲ್ಲಿ ಶ್ರದ್ಧೆಯುಳ್ಳವರಾಗಿ ತಮ್ಮ ಪೂರ್ವಜರ ಪದ್ಧತಿಯನ್ನು ಸ್ಮರಿಸಿ ಭಕ್ತನಿಗೆ ದೀಕ್ಷಾವಿಧಾನವು ಕೇವಲ ಗುರುಲಿಂಗ ಜಂಗಮ ಪೂಜಾಧಿಕಾರಪ್ರಾಪ್ತಿಯಿಂದ ಮುಕ್ತಿಯನ್ನು ಪಡೆಯುವದಕ್ಕಿರುವದೆಂದೂ, ಗುರುವಿಗೆ ದೀಕ್ಷಾಸಂಸ್ಕಾರವು ಪಂಚಮುದ್ರಾಪ್ರಾಪ್ತಿಯಿಂದ ಶ್ರೀಮದಾಚಾರ್ಯರ ಸಿದ್ಧಾಂತವನ್ನು ತಿಳಿದು ಆಚರಿಸುತ್ತಾ

ಸಮಸ್ತ ಶಿಷ್ಯ ವೃಂದವನ್ನು ಉದ್ಧರಿಸಿ ಶಿವೈಕ್ಯತೆಯನ್ನು ಪಡೆಯಲು ಅರ್ಹವಾಗಿರುವದೆಂದೂ ತಿಳಿಯತಕ್ಕದ್ದಾಗಿರುವುದು. ಆದ್ದರಿಂದ ನಮ್ಮ ವೀರಶೈವಮತದ ಸ್ತ್ರೀಪುರುಷರೆಲ್ಲರೂ ಶಿವದೀಕ್ಷೆಯನ್ನು ಹೊಂದಿ ಶಿವಾಪ್ಷಾವರಣ ಸೇವೆಯಿಂದ ಧನ್ಯರಾಗಬೇಕೆಂದು ಸೂಚಿಸುತ್ತೇವೆ.

"ಆಚಾರಃ ಪರಮೋಧರ್ಮಃ" ಅಂದರೆ ಆಚಾರವು ಉತ್ಕೃಷ್ಟವಾದ ಧರ್ಮವಾಗಿದೆ ಆಚಾರದಿಂದಲ್ಲದೆ ಶಿವಜ್ಞಾನವು ಹುಟ್ಟುವದಿಲ್ಲ. ಕೆಲವರು ಜ್ಞಾನಕ್ಕೆ ಪ್ರಾಧಾನ್ಯವನ್ನು ಹೇಳಿಕೊಂಡು ಕ್ರಿಯೆಯಲ್ಲಿ ಅಪ್ರೀತಿಯನ್ನು ತೋರಿಸುತ್ತಾರೆ. ಅದು ಅದ್ವೈತ ಮತದ ತತ್ವವಾಗಿದೆ. ವೀರಶೈವ ಮತದ ಸಿದ್ಧಾಂತವು ಕೇವಲ ಜ್ಞಾನಕ್ಕೆ ಪ್ರಾಧಾನ್ಯವನ್ನು ಹೇಳುವದಿಲ್ಲ. ಕ್ರಿಯಾವಿಶಿಷ್ಟಜ್ಞಾನಕ್ಕೆ ಪ್ರಾಧಾನ್ಯವನ್ನು ಹೇಳುತ್ತದೆ. ಒಂದೇರೆಕ್ಕೆಯುಳ್ಳಪಕ್ಷಿಯು ಹೇಗೆ ಗಗನಕ್ಕೆ ಹಾರಲಾರದೋ ಅದರಂತೆ ಕೇವಲ ಕ್ರಿಯೆಯಿಂದ ಕೇವಲ ಜ್ಞಾನದಿಂದ ಮೋಕ್ಷವು ದೊರೆಯುವುದಿಲ್ಲ. ಕುರುಡ ಕುಂಟರಿಗೆ ಹೇಗೆ ಸಾಪೇಕ್ಷತ್ವವಿರುವದೋ ಅದರಂತೆ ಕ್ರಿಯಾಜ್ಞಾನಗಳಿಗೆ ಸಾಪೇಕ್ಷತ್ವವು ಇರುತ್ತದೆ.

ಜ್ಞಾನೇಸಿದ್ಧೇಪಿ ವಿದುಷಾಂ ಕರ್ಮಾಪಿವಿನಿಯುಜ್ಯತೆ ।
ಫಲಾಭಿಸಂಧಿರಹಿತಂ ತಸ್ಮಾತ್ಕರ್ಮಸಥಂತ್ಯಜೇತ್ ॥

ಇತ್ಯಾದಿ ಪ್ರಮಾಣಗಳಿಂದ ಜ್ಞಾನವು ತನಗೆ ಸಿದ್ಧಿಯಾಗಿದ್ದರೂ ಕರ್ಮವನ್ನು ಬಿಡಕೂಡದೆಂದೇ ನಿಶ್ಚಯವಿರುವದು. ಕರ್ಮದಲ್ಲಿ ಒಂದು ವಿಶೇಷವಿದೆ. ಕರ್ಮವು ಸಕಾಮವೆಂತಲೂ, ನಿಷ್ಕಾಮವೆಂತಲೂ ಎರಡು ಪ್ರಕಾರವಿರುವದು. ಸಕಾಮಕರ್ಮಗಳು ಭವಕ್ಕೆ ಕಾರಣವಾಗಿರುತ್ತವೆ. ನಿಷ್ಕಾಮಕರ್ಮಗಳು ಮುಕ್ತಿಗೆ ಹೇತುವಾಗಿರುವವು. ಆದ್ದರಿಂದ ಏನೊಂದು ಫಲವನ್ನೂ ಬೇಡದೆ ಶಿವಾರ್ಪಣ ಬುದ್ಧಿಯಿಂದ ಶಿವಪೂಜಾದಿ ಕರ್ಮಗಳನ್ನು ಮಾಡಲಿಕ್ಕೆ ಬೇಕು.

ಕರ್ಮವಿಧ್ಯುಕ್ತ ಮುತ್ಸೃಜ್ಯ ಸ್ವಜಾತಿವಿಹಿತಂ ನರಾಃ ।
ಯೇರ್ಚಯಂತಿ ಶಿವಂತೇಷಾಂ ಪೂಜಾಂಗೃಹ್ಣಾತಿನೇಶ್ವರಃ ॥

ತನ್ನ ಜಾತಿಗೆ ಹೇಳಿದ ಕರ್ಮವನ್ನು ಬಿಟ್ಟು ಯಾವನು ಶಿವಾರ್ಚನೆಯನ್ನು ಮಾಡುತ್ತಾನೋ ಅವನ ಪೂಜೆಯನ್ನು ಪರಶಿವನು ಸ್ವೀಕರಿಸುವು

ದಿಲ್ಲ. ಇತ್ಯಾದಿ ಪ್ರಮಾಣಗಳಿಂದ ಕ್ರಿಯಾಪರಿತ್ಯಾಗವು ದುಷ್ಟಮಾರ್ಗವೇ ಸರಿ; ನಮ್ಮ ಪೂರ್ವಜರು ಕ್ರಿಯಾಯುಕ್ತ ಜ್ಞಾನಪ್ರಭಾವದಿಂದಲೇ ಮುಕ್ತಿಯನ್ನು ದೊರಕಿಸಿದರೆಂಬುದಕ್ಕೆ ಅವರ ಚರಿತ್ರಗಳೇ ಕಾರಣಗಳಿರುವವಾದ ಪ್ರಯುಕ್ತ ವೀರಶೈವರೆಲ್ಲರೂ ಶಿವದೀಕ್ಷೆಯ ಅನಂತರ ಗುರುವು ಉಪದೇಶಿಸಿದ ಪ್ರಕಾರ ತಮ್ಮ ತಮ್ಮ ಆಶ್ರಮಧರ್ಮಗಳನ್ನು ಬಿಡದೇ ಆಚರಿಸುತ್ತಿರಬೇಕು.

ಪ್ರಕೃತ ಗುರುಗಳಲ್ಲಿ ಆಚಾರ ಬೋಧೆಯು ಇಲ್ಲದ್ದರಿಂದ ಹಳ್ಳಿಯಲ್ಲಿ ಒಂದುವಿಧವಿದ್ದರೆ ಪಟ್ಟಣಗಳಲ್ಲಿ ಒಂದು ವಿಧವು; ಅದರಲ್ಲಿಯೂ ಬಡವರು, ಧನಿಕರು, ಸ್ತ್ರೀಯರು, ಪುರುಷರು, ಅಕ್ಷರಸ್ಥರು, ಅನಕ್ಷರಸ್ಥರು ಈ ಭೇದದಿಂದ ಭಿನ್ನತೆಯನ್ನು ಹೊಂದಿ ವಿರೂಪತೆಯನ್ನೇ ಪಡೆದಿರುವದು. ಇದನ್ನು ಮೊದಲು ಸರಿಪಡಿಸುವುದರಲ್ಲಿ ನಮ್ಮ ಗುರುವರ್ಗದವರು ಯತ್ನಿಸಬೇಕು. ಪೂರ್ವದಂತೆ ಈಗ ಧರ್ಮಕ್ಕೆ ರಾಜರ ಸಹಾಯವು ಇಲ್ಲ. ಅದನ್ನು ರಕ್ಷಿಸುವ ಭಾರವು ಅವರವರ ತಲೆಯ ಮೇಲೆಯೇ ಬಿದ್ದಿರುವದು. ಅದರಲ್ಲಿ ಗುರುವರ್ಗಕ್ಕೆ ಧರ್ಮಪಾಲನೆಯು ನಿತ್ಯವ್ರತವಾಗಿದೆ; ಅವರಲ್ಲಿ ಆಲಸ್ಯವುಂಟಾದರೆ ಆ ದ್ರೋಹವು ಅವರನ್ನು ಬಿಡದು. ಸದ್ಯಃಕಾಲದ ದುಸ್ಥಿತಿಯು ಗುರುವರ್ಗದವರು ತಮ್ಮ ಕರ್ತವ್ಯವನ್ನು ಬಿಟ್ಟದ್ದರಿಂದುಂಟಾಗಿದೆ ಎಂದು ಹೇಳಲು ಸಂದೇಹವಿಲ್ಲವು. ಪೂಜಾವ್ರತಕ್ಕಾಗಿ ಹೇಳಿದ ತಿಂಗಳುಗಳಲ್ಲಿ ಮಠ ಮನೆ ಮುಂತಾದವುಗಳಲ್ಲಿ ಗುರುಲಿಂಗಜಂಗಮಾರ್ಚನೆಗಳು ಬಹುವಿಜೃಂಭಣೆಯಿಂದ ಮಾಡಲ್ಪಡುತ್ತಿದ್ದವು. ಈಗ ಅನುಸ್ವಪ್ನದೃಷ್ಟಗಳಾಗಿರುವವು. ಆದ್ದರಿಂದ ಅಷ್ಟಾವರಣಗಳಲ್ಲಿಯ ವಿಶ್ವಾಸವು ದೂರಾಗಿ ಜೊತೆಗೆ ವಿಪರೀತಭಾವನೆಯೂ ಹುಟ್ಟಿರುವದು. ಈ ದುಸ್ಥಿತಿಯನ್ನು ನೋಡಿ ಯಾರಿಗೆ ತಾನೇ ವ್ಯಥೆಯಾಗಲಿಕ್ಕಿಲ್ಲ. ನಮ್ಮ ವೀರಶೈವರು ಈರೀತಿ ಆಲಸ್ಯಭಾವವನ್ನು ಹೊಂದದೆ ತಮ್ಮ ತಮ್ಮ ಆಶ್ರಮಾಚಾರಗಳನ್ನು ಕೈಕೊಂಡು ಷಟ್ಸ್ಥಲ ಜ್ಞಾನದಿಂದ ಪವಿತ್ರರಾಗಬೇಕೆಂದು ಅತ್ಯಾನಂದದಿಂದ ಹೇಳುತ್ತೇವೆ.

ಈ ವೀರಶೈವ ಮತದ ಸಿದ್ಧಾಂತದ ಮೇಲಿಂದಲೂ ಶಿಲಾಶಾಸನಾದಿ ಅನೇಕ ಸಹಾಯಸಂಪತ್ತಿಯ ಮೇಲಿಂದಲೂ ಪ್ರಾಚೀನವಾದದ್ದೆಂದು ಸ್ಫುಟವಾಗಿರುವದು. ಕೆಲವು ದೂರದೃಷ್ಟಿಯಿಲ್ಲದ ಅಸೂಯೆ ಜನಗಳು

ಆಧುನಿಕವೆಂದು ಹೇಳಿದರೂ ವೇದಾಗಮಗಳ ಪ್ರಮಾಣಗಳ ಮೇಲಿಂದ ಆ ದುರುಕ್ತಿಯು ದೂರಾಗದೆ ಇಲ್ಲ. ಇತ್ತಕಡೆಗೆ ಅನೇಕ ಸಭೆಗಳಾಗಿ ವೀರಶೈವಮತದ ಪ್ರಾಚೀನತ್ವದ ವಿಷಯದಲ್ಲಿ ವಿದ್ವಜ್ಜನರಿಂದ ಸಂಶಯವು ಹೋಗಲಾಡಿಸಲ್ಪಟ್ಟಿರುವದು. ಈ ಬಗ್ಗೆ ನಮ್ಮ ವಿದ್ವನ್ಮಣಿಗಳು ಶ್ರೀಶಿವಾಚಾರ್ಯವರ್ಯರ ಸಿದ್ಧಾಂತಬೋಧಕ ಗ್ರಂಥಗಳ ಅನ್ವೇಷಣೆಯನ್ನು ಮಾಡಿ ಮತದ ಆಧಿಕ್ಯಕ್ಕೆ ಹೆಚ್ಚು ಪ್ರಯೋಜನವನ್ನುಂಟುಮಾಡಬೇಕೆಂದು ಸೂಚಿಸುತ್ತೇನೆ.

ಧರ್ಮಾಭಿಮಾನಿಗಳೇ, ಈವರೆಗೂ ಅಚಲಚಿತ್ತರಾಗಿ ನಮ್ಮ ಉಪನ್ಯಾಸ ಕೇಳಿದ್ದನ್ನು ನೋಡಿ ಅತ್ಯಾನಂದವಾಗುತ್ತದೆ. ಮುಖ್ಯವಾಗಿ ನಮ್ಮ ಮತವು ಪ್ರಾಚೀನವೂ, ಪೂಜ್ಯವೂ ಆಗಿರುವದು. ಮತೀಯರು ಧರ್ಮಚ್ಯುತರಾಗಬೇಕೆಂದೇ ಶ್ರೀಗುರುವರ್ಗವು ತದ್ಬೋಧೆಗೆ ಸಿದ್ಧವಾಗಿರುವದು. ಇಷ್ಟು ಸೌಲಭ್ಯವು ಯಾವ ಮತದಲ್ಲಿಯೂ ಸಿಗಲಾರದು. ಇಂಥ ಸ್ಥಿತಿಯಲ್ಲಿದ್ದರೂ ಆಚಾರ್ಯರ ಸದುಪದೇಶವು ಗ್ರಂಥಗಳಲ್ಲಿಯೇ ಉಳಿಯುತ್ತ ಬಂದದ್ದರಿಂದ ಮತಕ್ಕೆ ಬಂದ ಹೀನಸ್ಥಿತಿಗೆ ಬೋಧಕಗುರುವರ್ಗವೇ ಕಾರಣವಾಯಿತು. ಇನ್ನು ನಮ್ಮ ಗುರುವರ್ಗವು ವಿದ್ಯಾಪವಿತ್ರತೆಯನ್ನು ಪಡೆದು ಧರ್ಮಜ್ಞಾನಾಚಾರಗಳನ್ನಾಚರಿಸಿ ಭಕ್ತರನ್ನು ಅವುಗಳಲ್ಲಿ ಪ್ರವರ್ತಕರನ್ನಾಗಿ ಮಾಡಿ ತಮ್ಮ ಕರ್ತವ್ಯಕರ್ಮವನ್ನು ಸಾಧಕಗೊಳಿಸುವುದರಿಂದ ನಮ್ಮ ವೀರಶೈವ ಮತವು ಸರ್ವಮಾನ್ಯವಾಗುವುದೆಂದು ಹೇಳಿ ನಮ್ಮ ಉಪನ್ಯಾಸವನ್ನು ಶ್ರೀಜಗದ್ಗುರು ಪಂಚಾಚಾರ್ಯರ ಸ್ಮರಣಪೂರ್ವಕವಾಗಿ ಸಮಾಪ್ತಿಗೊಳಿಸುತ್ತೇವೆ ಎಂದು ಹೇಳಿ ಪಂಡಿತರು ವಿರಮಿಸಿದರು.

ಅನಂತರ ಶ್ರೀ ಹೊಳೆಹೊನ್ನೂರ ಪಟ್ಟಾಧ್ಯಕ್ಷರು ಅಧ್ಯಕ್ಷಪೀಠದಿಂದ ಮಾತನಾಡುತ್ತ—

ಗುರುತ್ವಾಧಿಕಾರವು ಸಾಮಾನ್ಯವಾದುದಲ್ಲ. ಕೇವಲ ಗುರುವರ್ಗದಲ್ಲಿ ಜನಿಸಿದ ಮಾತ್ರದಿಂದ ನಾನು ಗುರು ಎಂದು ತಿಳಿಯುವುದು ವಂಶಾಭಿಮಾನವನ್ನು ಮಾತ್ರ ಪ್ರಕಟ ಮಾಡಿದಂತಾಗುವುದು. ಆ ವಂಶಕ್ಕಿದ್ದ ಗೌರವಾತಿಶಯಗಳು ಅದಕ್ಕನುಗುಣವಾದ ಗುಣಗಳಿಂದ ಭೂಷಿತರಾಗಿರಬೇಕು. ಗುಲಾಬಿ, ಮಲ್ಲಿಗೆ ಪುಷ್ಪಗಳು ಅರಳಿದಾಗ್ಯೂ ಸುವಾಸನೆಯನ್ನು ಬೀರದಿ

ದ್ದರೆ ನಿರ್ಗಂಧ ಕುಸುಮಗಳೆಂಬ ಅಗೌರವವನ್ನು ಪಡೆಯುತ್ತವಷ್ಟೆ? ಆದುದದ ರಿಂದ ಗುರುವಂಶ ಸಂಭೂತರು ಗುರುಲಕ್ಷಿತರಾಗಿರಬೇಕು. ವಂಶಾನುಗತ ವಾಗಿ ಬಂದ ಗುಣಪರಂಪರೆಯ ಅವ್ಯಕ್ತಸ್ಥಿತಿಯನ್ನು ಪ್ರಕಟಮಾಡಿಕೊಳ್ಳು ವುದು ಪ್ರತಿಯೊಬ್ಬ ಗುರುಸಂತತಿಯವರ ಆದ್ಯ ಕರ್ತವ್ಯವಾಗಿದೆ.

ವೀರಶೈವ ಮತದಲ್ಲಿ ವೀರಮಾಹೇಶ್ವರರಿಗೆ ಪೂಜ್ಯತೆಯು ನೈಸರ್ಗಿಕ ವಾಗಿ ಇರಬೇಕಾದರೆ ಈ ವರ್ಗದವರಲ್ಲಿ ಅನೂಚಾನವಾಗಿದ್ದ ವೈದಿಕ ಸದ್ವಿದ್ಯೆಯ ಸಂಸ್ಕೃತಿಯನ್ನು ಗುರುವರ್ಗವು ಚನ್ನಾಗಿ ಕಾಪಾಡಿಕೊಳ್ಳ ಬೇಕಾಗಿದೆ. ಮತ್ತು ಸತ್ಯ, ಶಾಂತಿ, ಸದಾಚಾರ, ದಯೆ, ವಿವೇಕಾದಿ ಸದ್ಗುಣ ಸಮುದಾಯವೇ ಗುರುಮೂರ್ತಿಗಳಿಗೆ ಮುಖ್ಯ ಅಲಂಕಾರ ಪ್ರಾಯವಾದವು ಗಳಾಗಿದೆ. ಇದೀಗ ಗುರುವರ್ಗವು ಚೇತರಿಸಿಕೊಂಡು ವೀರಶೈವ ಸನಾತನ ಧರ್ಮಪ್ರಚಾರ ಮೂಲಕ ಧರ್ಮವೇ ಜಯವೆಂದು ಧ್ವಜವನ್ನು ಎತ್ತಿ ಹಿಡಿದಿದೆ. ಈ ಧರ್ಮಧ್ವಜವನ್ನು ಅಖಿಲ ಗುರುವರ್ಗವು ಸಮಸ್ತಭಾಗದಲ್ಲಿ ಸ್ಥಾಪಿಸಿ ಪೋಷಿಸಬೇಕಾಗಿದೆ.

ಕರ್ಣಾಟಕದಲ್ಲಿ ವೀರಶೈವ ಗುರುವರ್ಗದ ಜಾಗೃತಿಯ ಕಾರ್ಯಗಳು ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರ ಪ್ರಯತ್ನ ವಿಶೇಷದಿಂದ ವೇಗದಲ್ಲಿ ಸಾಗಿರುವುದು ಬಹುಸ್ತುತ್ಯವಾಗಿದೆ. ಇದೇ ರೀತಿಯಾಗಿ ಗುರುವರ್ಗದ ಸಭೆ ಸಮ್ಮೇಲನಗಳನ್ನು ಎಲ್ಲಾ ಪ್ರದೇಶಗಳಲ್ಲಿ ಪ್ರತಿವರ್ಷ ತಪ್ಪದಂತೆ ನೆರವೇರಿ ಸುತ್ತ ಹೋಗಬೇಕಾಗಿ ಸಮಸ್ತ ವೀರಶೈವ ಮಹಾಜನಗಳಲ್ಲಿ ಬೇಡಿಕೊಳ್ಳ ಲಾಗುತ್ತದೆ. ಎಂದು ತಮ್ಮ ಭಾಷಣ ಮುಗಿಸಿದರು. ಆಗ ಸಮ್ಮಿಲಿತವಾದ ಈ ಪ್ರಚಂಡ ವೀರಶೈವ ಪ್ರಾಂತಿಕ ಪರಿಷತ್ತಿನಲ್ಲಿ ಕೆಳಕಂಡ ಠರಾವುಗಳು ಸರ್ವಾನುಮತದಿಂದ ಸ್ವೀಕರಿಸಲ್ಪಟ್ಟವು.

## ಪರಿಷತ್ತಿನಲ್ಲಿ ಪಾಸಾದ ಠರಾವುಗಳು

(೧) ವೀರಶೈವ ವೈದಿಕ ಸನಾತನ ಧರ್ಮಕ್ಕೆ ಬಾಧೆ ಬರದಂತೆ ಎಲ್ಲರೂ ರಕ್ಷಿಸಬೇಕು.

(೨) ಮತಸ್ಥಾಪನಾಚಾರ್ಯರ ಪವಿತ್ರಾಭಿದಾನಗಳು ಪ್ರತಿಯೊಬ್ಬ ವೀರಶೈವನ ಹೃತ್ಪಟಲದಲ್ಲಿ ಒಡಮೂಡುವಂತೆ ಪ್ರಚಾರ ಮಾಡಬೇಕು.

(೩) ಮಠಾಚಾರ್ಯರ ಸಿದ್ಧಾಂತಗಳನ್ನು ಸರ್ವತ್ರ ಹರಡಿಸಬೇಕು.

(೪) ಅಖಿಲ ಭಕ್ತವರ್ಗದವರಿಗೆ ಆಯಾಯ ವಿಶಿಷ್ಟಜಾತಿ-ಧರ್ಮಗಳನ್ನು ಪಾಲಿಸಲು ಬೋಧಿಸಬೇಕು.

(೫) ಗುರುವರ್ಗದ ಚಿಕ್ಕಬಾಲಕರನ್ನು ವೈದಿಕ ವಿದ್ಯಾಭ್ಯಾಸದಲ್ಲಿಯೇ ತೊಡಗಿಸಬೇಕು. ವೈದಿಕ ವಿದ್ಯಾರ್ಜನೆಯಾದನಂತರ ಉಳಿದ ವಿದ್ಯೆಗಳನ್ನು ಕಲಿಸಬಹುದು.

(೬) ಗುರುವರ್ಗದವರಿಂದ ಪ್ರಸಿದ್ಧಿಸಲ್ಪಟ್ಟ ಗ್ರಂಥಗಳನ್ನೇ ಪ್ರಮಾಣ ಗ್ರಂಥಗಳೆಂದು ಪ್ರಚಾರ ಮಾಡಬೇಕು.

(೭) ಶ್ರೀಜಗದ್ಗುರು ಪಂಚಾಚಾರ್ಯರ ಜಯಂತ್ಯುತ್ಸವಗಳನ್ನು ಅಖಿಲ ಪ್ರಪಂಚದಲ್ಲಿ ವಿಸ್ತಾರವಾಗಿ ನೆರವೇರುವಂತೆ ಪ್ರಚಾರ ಮಾಡಬೇಕು. ಈ ಜಯಂತ್ಯುತ್ಸವ ಸಮಯದಲ್ಲಿ ವೀರಶೈವ ಮಠಾಚಾರ್ಯರ ನಿಜಸಿದ್ಧಾಂತ ತತ್ವಗಳನ್ನು ಸರ್ವತ್ರ ಹರಡಬೇಕು.

(೮) ಶ್ರೀಜಗದ್ಗುರು ಪಂಚಾಚಾರ್ಯರ ಭಾವಪಟಗಳೂ, ಲಿಂಗೋದ್ಭವ ರಜತಮೂರ್ತಿಗಳೂ, ಪ್ರತಿಯೊಬ್ಬ ವೀರಶೈವರ ಮನೆಯಲ್ಲಿ ಪ್ರಕಾಶಿಸುವಂತೆ ಪ್ರಯತ್ನಿಸಬೇಕು.

(೯) ಅಖಿಲ ವೀರಶೈವ ಜನಾಂಗದ ನಿತ್ಯನೈಮಿತ್ತಿಕ ವಿಧಿಗಳನ್ನು ವೀರಶೈವ ಮಠಾಚಾರ್ಯರ ಸಿದ್ಧಾಂತದಂತೆ ಸಾಗಿಸಬೇಕು.

(೧೦) ಸಮಸ್ತ ವೀರಶೈವರು ಆಚರಿಸುವ ವೈದಿಕ ದಶಕರ್ಮಗಳಲ್ಲಿ ವಿರಕ್ತರು ಸಮಾವೇಶಗೊಳ್ಳದಂತೆ ಜಾಗ್ರತಗೊಳಿಸಬೇಕು. ಮತ್ತು ಗುರುವರ್ಗದವರು ವಿರಕ್ತರಲ್ಲಿ ಸಾಮರಸ್ಯ ಆಚರಣೆಗೆ ಹೋಗದಂತೆ ಕಟಬದ್ಧರಾಗಿ ನಡೆಯಬೇಕು.

## ೩ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನ
## ಮನಗೂಳಿ

ಕಲಾದಗಿಯಲ್ಲಿ ನಡೆದ ಪ್ರಾಂತಿಕ ಪರಿಷತ್ತು ದಿಗ್ವಿಜಯ ಹೊಂದಿದ್ದನ್ನು ಮನಗೂಳಿ ಹಿರೇಮಠದ ಶ್ರೀ||ಷ||ಬ್ರ|| ಸಂಗನಬಸವಶಿವಾಚಾರ್ಯಸ್ವಾಮಿಗಳು

ಕಣ್ಣಾರೆ ಕಂಡು ಆನಂದಭರಿತರಾಗಿ ತಾವೂ ತಮ್ಮ ಮಠದಲ್ಲಿ ಮೂರನೇದಾಗಿ ಪಟ್ಟಚರಾಧಿಕಾರಿಗಳ ಸಮ್ಮೇಲನವನ್ನು ನಡೆಯಿಸಬೇಕೆಂದು ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರಲ್ಲಿ ಆಲೋಚಿಸಿದರು. ಈ ಸುದ್ದಿಯನ್ನು ಕೇಳಿದ ಪಂಡಿತರಿಗೆ ಮೈಯುಬ್ಬಿತು ವಪ್ಪಿಗೆಯನ್ನೂ ಕೊಟ್ಟರು. ಕ್ರಿ. ಶ. ೧೯೩೧ ನೇ ಜೂನ್ ತಿಂಗಳಲ್ಲಿ ಶ್ರೀ ಷ॥ ಬ್ರ॥ ಜಿಣ್ಣೀಹಳ್ಳಿ ಪಟ್ಟಾಧ್ಯಕ್ಷರವರ ಘನ ಅಧ್ಯಕ್ಷತೆಯಲ್ಲಿ ಸಮ್ಮೇಲನ ನಡೆಯುವಂತೆ ನಿರ್ಣಯಿಸಲಾಯಿತು.

ಈ ಸಮ್ಮೇಲನದ ಅಂಗವಾಗಿ ಏಕಾದಶರುದ್ರರ (ಹನ್ನೊಂದು ಜನ ಪಟ್ಟಚರಾಧಿಕಾರಿಗಳ) ಪೂಜೆಯನ್ನು ಹನ್ನೊಂದು ಮಂಟಪಗಳಲ್ಲಿ ಬೇರೆ ಬೇರೆಯಾಗಿ ಮಾಡುವ ಸಂಕಲ್ಪಮಾಡಿ ಎಲ್ಲವನ್ನೂ ಸಿದ್ಧಗೊಳಿಸಿದರು. ನೇಮಕವಾದ ಮಿತಿಗೆ ಕೂಡಿದ ಅಸಂಖ್ಯಾತ ಜನಸಂದಣಿಯಲ್ಲಿ ಮೊದಲು ಮಂಟಪ ಪೂಜೆ ನಡೆಯಿತು. ಪ್ರತಿಯೊಂದು ಮಂಟಪದಲ್ಲಿ ಕುಳಿತ ಶಿವ ಸ್ವರೂಪಿಗಳಾದ ಪಟ್ಟಾಧಿಕಾರಿಗಳು ಭಸ್ಮ-ರುದ್ರಾಕ್ಷ-ದಂಡ-ಕಮಂಡಲುಗ ಳಿಂದ ಶೋಭಿಸಿದವರಾಗಿ ಶಂಕರನ ಪ್ರತಿರೂಪಗಳೋ ಏನೋ ಎನ್ನುವಂತೆ ಒಪ್ಪಿದ್ದರು. ಮಡಿಯಿಂದ ಕಾಯಿಕರ್ಪೂರ-ಫಲ-ಪುಷ್ಪಗಳನ್ನು ಕೈಯಲ್ಲಿ ಹಿಡಿದುಕೊಂಡು ಬರುತ್ತಿರುವ ದಂಪತಿಗಳ ಭಕ್ತಿವಾತ್ಸಲ್ಯವೂ, ದೂರದಿಂದಲೇ ಹಾವಭಾವಗಳಿಂದ ನಯವಿನಯಗಳಿಂದ ನಲಿಯುತ್ತಿರುವ ಶಿಷ್ಯಶ್ರೇಣಿಯ ಗುರುಭಕ್ತಿಯೂ, ಕುಣಿದಾಡಿ ಹಾಡುತ್ತ ನರ್ತಿಸುತ್ತಿರುವ ಗುರುಭಜನಾ ಶ್ರೇಣಿಯೂ, ಗುರುವರ್ಗದ ಪ್ರಭಾವವನ್ನು ಹೊರಸೂಸುವಂತಿತ್ತು. ಇಂಥ ಮನೋಹರವೂ ಭಕ್ತಿಭಾವೋದ್ರೇಕವೂ ಆದ ಮಂಟಪ ಪೂಜೆ ಮುಗಿದ ಮೇಲೆ ಬಂದಂಥ ಅತಿಥಿಗಳಿಗೆ ಅನ್ನಸಂತರ್ಪಣೆಯಾದ ನಂತರ ಸಾಯಂಕಾಲ ಸಭೆ ನಡೆಯಿತು.

ಈ ಮೊದಲು ಪ್ರಸಿದ್ಧಪಡಿಸಿದಂತೆ ನಡೆದ ಈ ೩ ನೇ ಪಟ್ಟಚರಾಧಿ ಕಾರಿಗಳ ಸಮ್ಮೇಲನಕ್ಕೆ ಬೆಣ್ಣೀಹಳ್ಳಿ ಪಟ್ಟಾಧ್ಯಕ್ಷರು ಅಧ್ಯಕ್ಷರಾದರು. ಸ್ವಾಗತ ಭಾಷಣವಾದನಂತರ ಅನೇಕ ಪಟ್ಟಚರಾಧಿಕಾರಿಗಳೂ ಶಾಸ್ತ್ರಿಗಳೂ ನಾನಾ ವಿಷಯಗಳಲ್ಲಿ ಭಾಷಣಮಾಡಿದನಂತರ ಪಂಡಿತ ಕಾಶೀನಾಥಶಾಸ್ತ್ರಿ ಗಳವರ ಭಾಷಣವು ಪ್ರಾರಂಭವಾಯಿತು. ಅವರು ಹೇಳಿದ್ದೇನೆಂದರೆ— ಗುರುತ್ವಾಧಿಕಾರವು ಸಾಮಾನ್ಯವಾದುದಲ್ಲ. ಗುರುವಂಶದಲ್ಲಿ ಜನಿಸಿದವ

ರೆಲ್ಲರೂ ಆ ಅಧಿಕಾರವನ್ನು ಉಳಿಸಿಕೊಂಡು ಹೋಗಬೇಕಾದರೆ ಅದಕ್ಕನು ಗುಣವಾದ ಗುಣಗಳಿಂದ ಭೂಷಿತರಾಗಿರಬೇಕು. ಉತ್ತಮ ಪುಷ್ಪಗಳಲ್ಲಿ ಸುವಾಸನೆಯು ಹೇಗೆ ಬೆರೆತುಕೊಂಡಿರುವುದೋ ಅದರಂತೆ ಗುರುವಂಶೀಯರಲ್ಲಿ ಸದ್ಗುಣಗಳು ನೆಲೆಸಿರಬೇಕು. ಇದು ಅನುವಂಶದಿಂದ ಉಳಿದು ಬರಬೇಕಾದರೆ ಗುರುವಂಶೀಯರು ವಿದ್ಯಾವಂತರಾಗಬೇಕು. ಆಚಾರಶೀಲರಾಗಬೇಕು. ಶಿವಯೋಗಸಾಧಕರಾಗಬೇಕು. ಶಿಷ್ಯಕೋಟಿಯನ್ನು ತಮ್ಮ ಯೋಗಬಲದಿಂದ ಎಳೆದುಕೊಳ್ಳುವ ಶಕ್ತಿವಂತರಾಗಬೇಕು. ಈ ಸಾಧನೆಗಳಿಗಾಗಿ ಗುರುವರ್ಗದ ಮಠಾಧಿಕಾರಿಗಳು ತಮ್ಮ ತಮ್ಮ ಮಠಗಳಲ್ಲಿ ವೇದ ಪಾಠಶಾಲೆಗಳನ್ನು ಸ್ಥಾಪಿಸಿ ತನ್ಮೂಲಕ ತಮ್ಮ ವಂಶವನ್ನು ತಿದ್ದಿಕೊಳ್ಳುವುದಲ್ಲದೆ ಜಗತ್ತಿಗೇ ಜ್ಞಾನದಾನಮಾಡಿಕೊಡಬೇಕು. ಎಂದು ಗುರುವರ್ಗದ ಪ್ರಗತಿಪರವಾದ ಅನಂತ ವಿಷಯಗಳನ್ನು ಹೇಳುತ್ತ ಭಕ್ತೋದ್ಧಾರದ ಸಾಧನಗಳನ್ನೂ ವಿವರಿಸಿದರು. ಹೀಗೆ ನಾನಾಮೂಲಕ ಶೋಭೆಗೊಂಡ ೩ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನವು ಶ್ರೀಜಗದ್ಗುರು ಪಂಚಾಚಾರ್ಯರ ಜಯಜಯಃಕಾರದೊಡನೆ ಮುಕ್ತಾಯಗೊಂಡಿತು.

## ೪ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನ

### ಸತ್ತೀಗೇರಿ

ಪಂಡಿತ ಕಾಶೀನಾಥಶಾಸ್ತ್ರಿಗಳವರ ಪ್ರಯತ್ನದಿಂದಲೂ ಆತ್ಮಬಲದಿಂದಲೂ ಗುರುಗಳ ಅನುಗ್ರಹದಿಂದಲೂ ನಡೆದ ಮೂರು ಪಟ್ಟಚರಾಧಿಕಾರಿಗಳ ಸಮ್ಮೇಲನಗಳು ಒಂದಕ್ಕಿಂತಲೂ ಒಂದು ಹೆಚ್ಚು ವೈಭವದಲ್ಲಿ ನಡೆದುದನ್ನು ಕಂಡು ಬೆಳಗಾಂವಿ ಜಿಲ್ಲಾ ಸತ್ತೀಗೇರಿ ಹಿರೇಮಠದ ಪಟ್ಟದ ಸ್ವಾಮಿಗಳವರು ಪಂಡಿತರನ್ನು ತಮ್ಮಲ್ಲಿಗೂ ಬರಮಾಡಿಕೊಂಡು ಅವರ ಮೂಲಕ ತಾವು ನಾಲ್ಕನೇದಾಗಿ ಪಟ್ಟಚರಾಧಿಕಾರಿಗಳ ಸಮ್ಮೇಲನ ನಡೆಯಿಸಬೇಕೆಂದು ಮನಸ್ಸು ಮಾಡಿದರು. ಅದಕ್ಕೆ ಪಂಡಿತರ ಪ್ರೋತ್ಸಾಹವೂ ದೊರೆಯಿತು. ಧಾರವಾಡ, ವಿಜಾಪೂರ, ಜಿಲ್ಲೆಗಳಲ್ಲಿ ಮೆರೆದ ಆಚಾರ್ಯರ ಜಯಪತಾಕೆಯನ್ನು ಬೆಳಗಾಂವಿ ಜಿಲ್ಲೆಯಲ್ಲಿಯೂ ಮೆರಿಸಬೇಕೆಂದು ಇಚ್ಛಿಸುತ್ತಿದ್ದ ಪಂಡಿತರಿಗೆ ಇದು ಜೇನು ಸವಿದಂದಾಯಿತು.

ಆಗಿನ ಕಾಲದಲ್ಲಿ ಧಾರ್ಮಿಕ ಸಭೆಗಳೇ ಜರುಗುತ್ತಿದ್ದಿಲ್ಲವಾದ್ದರಿಂದ ಸಭೆ ಹೇಗೆ ನಡೆಯುವುದೋ ನೋಡಬೇಕು ಎಂಬ ಕುತೂಹಲದಿಂದ ಬೆಳಗಾಂವಿ ಜಿಲ್ಲೆಯ ಜನರೆಲ್ಲಾ ಕಾತುರರಾಗಿದ್ದರು. ಅದರಲ್ಲಿ ಕಾಶೀನಾಥ ಶಾಸ್ತ್ರಿಗಳವರ ಭಾಷಣ ಕೇಳುವುದೊಂದು ಎಲ್ಲರಿಗೂ ಪ್ರೀತಿ. ಇವರ ಭಾಷಣ ನಡೆಯಿತೆಂದರೆ ಮುಂದೆ ಮುಂದೆ ಎಗ್ಗಳವಾಗುತ್ತ ಹೋಗುತ್ತಿತ್ತೇವಿನಃ ಕುಗ್ಗುತ್ತಿರಲಿಲ್ಲ. ಇದೊಂದು ಅವರ ಸುಕೃತ ವಿಶೇಷವಾಗಿತ್ತು. ಪಂಡಿತರ ವೇಷಭೂಷಣಗಳೂ, ಆಚಾರವಿಚಾರಗಳೂ, ನಡೆನುಡಿಗಳೂ, ಶಿಸ್ತು ಸಂಯಮಗಳೂ ಎಂಥ ವ್ಯಕ್ತಿಯನ್ನೂ ದಂಗುಗೊಳಿಸುವಂತಿದ್ದವು. ಅದರ ಜೊತೆಗೆ ವೀರಶೈವಶಾಸ್ತ್ರಸಮ್ಮತವಾದ ಗಂಭೀರವಾಕ್ಯಗಳೂ, ಸುಲಲಿತ ಹಾಗು ವ್ಯಾಕರಣಶುದ್ಧವಾದ ಶಬ್ದಸಂಗ್ರಹಗಳೂ, ಪುರಾಣೇತಿಹಾಸ ಪ್ರಸಿದ್ಧ ವಿಷಯಗಳೂ, ಕಂಪನಮಯವಾದ ಸ್ವರಲಾಲಿತ್ಯವೂ ಒಂದರೊಳಗೊಂದು ಬೆರೆತು ಪ್ರೇಕ್ಷಕರನ್ನು ಇಷ್ಟೇ ಅಲ್ಲ ಅಳುವ ಕೂಸುಗಳನ್ನು ಸಹ ಆನಂದ ಗೊಳಿಸುತ್ತಿದ್ದವು. ಇಂಥ ವ್ಯಕ್ತಿಯ ಪ್ರಭಾವವು ಸತ್ತೀಗೇರಿ ಸಮ್ಮೇಲನದ ಮೂಲಕ ಬೆಳಗಾಂವಿ ಜಿಲ್ಲೆಯನ್ನು ಆವರಿಸಬೇಕಾಗಿತ್ತು.

ಅಂತೆಯೇ ನಿಯಮಿತವಾದ ವೇಳೆಗೆ ಗಲಗಲಿ ಚರಮೂರ್ತಿಸ್ವಾಮಿ ಗಳವರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಎಷ್ಟೋ ಸ್ವಾಮಿಗಳ ಹಾಗು ಶಾಸ್ತ್ರಿಗಳ ಭಾಷಣಗಳಾದವು. ಆದರೂ ಜನತೆಗೆ ತೃಪ್ತಿಯಿರಲಿಲ್ಲ. ಹತ್ತು ಸಾವಿರ ಜನಸಂದಣಿಯಲ್ಲಿ ಎತ್ತರವಾದ ವೇದಿಕೆಯ ಮೇಲೆ ನಿಂತು ಪಂಚಾ ಚಾರ್ಯರ ಸ್ತೋತ್ರಮಾಡಿದ ಪಂಡಿತ ಕಾಶೀನಾಥ ಶಾಸ್ತ್ರಿಗಳವರು ಭಾಷಣ ಪ್ರಾರಂಭಿಸಿದರು. ವೀರಶೈವರಿಗೆ ಪ್ರಾಮುಖ್ಯವಾಗಿದ್ದ ಅಷ್ಟಾವರಣ ಪಂಚಾ ಚಾರ ಷಟ್‌ಸ್ಥಲಗಳನ್ನೂ ಅವುಗಳ ಭೇದಭಾವಗಳನ್ನೂ ವಿಶದವಾಗಿ ವಿವರಿ ಸುತ್ತ ಇವುಗಳ ಬೋಧನೆಗಾಗಿ ಗುರುವರ್ಗದವರಾದ ಮಠಾಧಿಕಾರಿಗಳು ಹೇಗೆ ಹೇಗೆ ವರ್ತಿಸಬೇಕೆಂಬುದನ್ನು ಪಂಡಿತಪಾಮರರಾದಿಯಾಗಿ ಸಕಲ ರಿಗೂ ತಿಳಿಯುವಂತೆ ಹೇಳಿದರು. ಮತ್ತು ಗುರುವರ್ಗದವರ ಹಾಗು ವಿರಕ್ತರ ಕಾರ್ಯಾಕಾರ್ಯ ವಿವರಣೆಯನ್ನು ತಿಳಿಸಿಕೊಟ್ಟು ಸಂಸಾರಿಕರಾದ ಯಾವತ್ತು ವೀರಶೈವ ಬಾಂಧವರಿಗೆ ವಿರಕ್ತರ ಅಂದರೆ ಸನ್ಯಾಸಿಗಳ ಸಹವಾ ಸವೇ ಯೋಗ್ಯವಲ್ಲೆಂದು ಅನೇಕ ಗ್ರಂಥಾಧಾರಗಳಿಂದ ಸ್ಪಷ್ಟಪಡಿಸಿದರು.

ಇವರ ಬಾಯಿಂದ ಹೊರಟ ವೀರಶೈವ ಧಾರ್ಮಿಕ ವಿಚಾರಗಳು ಪ್ರತಿಯೊಬ್ಬರ ಹೃದಯದಲ್ಲಿ ಶಿಲಾಲಿಪಿಯಂತೆ ಶಾಶ್ವತವಾಗಿ ಉಳಿದವು. ಇಂಥ ಅಪ್ರತಿಹತವಾದ ಬೋಧನೆಯು ಇವರ ಭಾಷಣದಲ್ಲಿ ಅಡಕವಾಗಿದ್ದುದರಿಂದಲೇ ೭-೮ ನೂರುವರ್ಷಗಳಿಂದ ಮನೆಮಾಡಿಕೊಂಡಿದ್ದ ವಿರಕ್ತರ ಅಧಿಕಾರ ಬಲಗಳು ೭-೮ ವರ್ಷಗಳಲ್ಲಿ ಅಡಗಿ ಹೋಗಿ ಮೂಲೆಗುಂಪಾಗಿದ್ದ ಗುರುವರ್ಗದ ಅಭಿವೃದ್ಧಿಗೆ ಕಾರಣವಾಯಿತು. ಹೀಗೆ ಗುರುವರ್ಗದ ಯಶೋದುಂದುಭಿಯಲ್ಲಿಯೇ ಈ ೪ನೇ ಸಮ್ಮೇಲನವು ಪೂರ್ತಿಗೊಂಡು ಪಂಡಿತರ ಕೀರ್ತಿಯು ಜಗತ್ತನ್ನು ಪಸರಿಸಿತು.

## ಪಂಚಮಹಾಪೀಠಗಳ ಸೇವೆ

### ಶ್ರೀಕೇದಾರಪೀಠ

ಹಿಮಾಚಲಪ್ರದೇಶದ ಉನ್ನತಪರ್ವತ ಮಧ್ಯದಲ್ಲಿ ಶ್ರೀಕೇದಾರನಾಥ ದೇವಸ್ಥಾನವು ಜಗದಾದಿಯಿಂದಲೂ ಶೋಭಿಸುತ್ತಿದ್ದು ಶ್ರೀಜಗದ್ಗುರು ಪಂಚಾಚಾರ್ಯರಲ್ಲಿ ಒಬ್ಬರಾದ ಏಕೋರಾಮಾರಾಧ್ಯರ ವೈರಾಗ್ಯಸಿಂಹಾಸನ ಮಠವು ಅಲ್ಲಿ ವಿರಾಜಿಸುವಂಥಾದ್ದಾಗಿದೆ. ಈ ನಾಡಿನಲ್ಲಿದ್ದ ಟೆಹರೀ ಮಹಾರಾಜರು ಈ ಮಠದ ಶಿಷ್ಯರಾಗಿದ್ದು ಮೇಲ್ವಿಚಾರಣೆ ನೋಡುತ್ತಿದ್ದರು. ಪ್ರಾಚೀನಕಾಲದಲ್ಲಿ ಈ ಮಠಕ್ಕೆ ೯೦೦ ಗ್ರಾಮುಗಳ ಜಹಾಗೀರಿ ಇದ್ದರೂ ಕಾಲಾನುಗುಣವಾಗಿ ಕಡಿಮೆಯಾಗುತ್ತ ಬಂದು ಬ್ರಿಟಿಷರ ಕಾಲದಲ್ಲಿ ೧೪೧ ಗ್ರಾಮುಗಳ ಜಹಾಗೀರಿ ಮಾತ್ರ ಉಳಿಯಿತು. ಇದರ ಕೆಳಗಡೆ ಸದರಿ ಪೀಠಕ್ಕೆ ಸಂಬಂಧಿಸಿದ ಓಖಿ (ಉಷಾ) ಮಠವೆಂಬುದೊಂದಿರುತ್ತದೆ. ಈ ಮಠಕ್ಕೆ ಸಂಬಂಧಪಟ್ಟ ಎಲ್ಲಾ ದೇವಾಲಯುಗಳ ಮೇಲೆ ಕೇದಾರ ಮಠದವರ ಸಂಪೂರ್ಣ ಅಧಿಕಾರವಿರುತ್ತದೆ. ಈ ಕೇದಾರಮಠಕ್ಕೆ ಪ್ರಾಚೀನ ಕಾಲದಿಂದಲೂ ವೀರಶೈವರಲ್ಲಿ ಪೂಜ್ಯರೆನಿಸಿರುವ ದಕ್ಷಿಣದೇಶದ ಜಂಗಮ ವಟುಗಳೇ ಅಧಿಕಾರಕ್ಕೆ ಬರುವಂಥವರಾಗಿದ್ದಾರೆ. ಈ ಸಂಪ್ರದಾಯದಂತೆ ಪಂಡಿತರ ಕಾಲವಲ್ಲಿ ಪೀಠಾರೋಹಣರಾಗಿ ವಿರಾಜಿಸುತ್ತಿದ್ದ "ವಿಶ್ವಲಿಂಗರಾವಲ್" ಮಹಾಸ್ವಾಮಿಗಳು ದಕ್ಷಿಣದೇಶಕ್ಕೆ ಆಗಮಿಸದೆ ಇದ್ದುದರಿಂದಲೂ, ಪೀಠದ ಪ್ರಕಾಶವು ಈ ನಾಡಿನ ಜನತೆಗೆ ತಿಳಿಯದ್ದರಿಂದಲೂ, ಪೀಠಕ್ಕೆ ಋಣ

ಬಾಧೆಯು ಹೆಚ್ಚಾಗಿ ಮಹಾಸ್ವಾಮಿಗಳು ವ್ಯಸನಾಕ್ರಾಂತರಾಗಿದ್ದುದ ರಿಂದಲೂ, ಇವೆಲ್ಲವನ್ನು ಸರಿಪಡಿಸಲೋಸುಗ ಶ್ರೀ ಕಾಶೀನಾಥಶಾಸ್ತ್ರಿಗಳು ಕ್ರಿ. ಶ. ೧೯೧೯ ರ ಸುಮಾರಿನಲ್ಲಿ ಸದರೀ ಪೀಠದ ಜಗದ್ಗುರು ಮಹಾಸ್ವಾಮಿ ಗಳವರನ್ನು ಮೊದಲು ಕುಂದಗೋಳದಲ್ಲಿ ನಡೆದ ೧ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನದ ಸಮಾರಂಭಕ್ಕೆ ಪ್ರಯತ್ನಪೂರ್ವಕ ಬಿಜಯಂಗೈಸಿಕೊಂಡು ಬಂದು ಅಲ್ಲಿಂದ ಕರ್ನಾಟಕದ ನಾನಾಭಾಗಗಳಲ್ಲಿ ಸಂಚಾರಮಾಡಿಸಿ ಪ್ರಸಿದ್ಧ ಪಡಿಸಿದರು.

ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ೧೦೮ ಶ್ರೀಜಗ ದ್ಗುರು ಸಿದ್ಧಲಿಂಗಶಿವಯೋಗೀಂದ್ರ ಮಹಾಸ್ವಾಮಿಗಳ ಅಪ್ಪಣೆ ಪ್ರಕಾರ ಶಾಸ್ತ್ರಿಗಳವರು ಶ್ರೀ ಕೇದಾರ ಜಗದ್ಗುರುಗಳವರನ್ನು ಉಜ್ಜಯಿನೀ ಪೀಠಕ್ಕೆ ಆಗಮಿಸಿಕೊಂಡು ಬಂದರು. ಅಲ್ಲಿ ಉಭಯ ಜಗದ್ಗುರುಗಳ ಸಂದರ್ಶನವು ಸಂಭಾಷಣಗಳು, ಆನಂದವಾಗಿ ಜರುಗಿದವು. ಆ ಉಜ್ಜಯಿನೀ ಸಂಸ್ಥಾನಮಠ ದಲ್ಲಿ ೬ ತಿಂಗಳ ಪರ್ಯಂತರ ಇದ್ದ ಶ್ರೀಜಗದ್ಗುರು ವಿಶ್ವಲಿಂಗರಾವಲ್ಲರ ಮುಪ್ಪಿನ ದೇಹಕ್ಕೆ ಅನಾರೋಗ್ಯ ಉಂಟಾಗಿ ಬಹಳ ತಾಪ ಪಡುವವ ರಾದರು. ಆಗ ಅವರು ತಮ್ಮ ಜೀವನ ಯಾತ್ರೆಯು ಮುಗಿಯಿತೆಂಬುದನ್ನು ತಿಳಿದು, ಶ್ರೀಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳವರನ್ನೂ ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರನ್ನೂ ಕರೆಯಿಸಿ ತಮ್ಮ ಉತ್ತರಾಧಿಕಾರದ ಬಗ್ಗೆ ವಿಚಾರವಿನಿಮಯ ನಡೆಸಿದರು. ಶ್ರೀಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿ ಗಳೂ ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳೂ ಕೂಡಿ ಮಹಾಸ್ವಾಮಿ! ತಮ್ಮ ಅಪ್ಪಣೆ ಹೇಗೆ ಆಗುತ್ತದೆಯೋ ಹಾಗೆ ಕಾರ್ಯ ಮಾಡುತ್ತೇವೆಂದು ವಚನ ವನ್ನಿತ್ತರು. ಆಗ ಶ್ರೀಕೇದಾರ ಜಗದ್ಗುರುಗಳವರು ತಮ್ಮಲ್ಲಿ ನಿಷ್ಠೆಯಿಂದ ಸೇವೆಮಾಡಿಕೊಂಡಿದ್ದ ಪಂಡಿತ ಗಂಗಾಧರಶಾಸ್ತ್ರಿಗಳವರಿಗೆ ನಮ್ಮ ಉತ್ತರಾಧಿ ಕಾರ ಕೊಡುತ್ತೇವೆ. ಇದನ್ನು ನೆರವೇರಿಸಿರಿ ಎಂದು ಅಪ್ಪಣೆಯನ್ನಿತ್ತರು. ಆ ಪ್ರಕಾರ ಶ್ರೀಶಾಸ್ತ್ರಿಗಳವರು ಉಭಯ ಜಗದ್ಗುರು ಸನ್ನಿಧಿಯಲ್ಲಿ ಸಭೆ ಯನ್ನು ಸೇರಿಸಿ ಉತ್ತರಾಧಿಕಾರ ಸಂಬಂಧ ಭಾಷಣವನ್ನು ಮಾಡಿ ಗುರು ಪೀಠಗಳ ಪದ್ಧತಿಯಂತೆಯೂ, ಸರ್ಕಾರದ ಅನುಮತಿಯಂತೆಯೂ, ಗಂಗಾ ಧರಶಾಸ್ತ್ರಿಗಳ ಹೆಸರಿಗೆ ಅಧಿಕಾರಪತ್ರವನ್ನು ಬರೆಯಿಸಿ ಆನಂದಪಡಿಸಿದರು. ನಂತರ ಆ ಪತ್ರಕ್ಕೆ ಉಭಯ ಜಗದ್ಗುರುಗಳ ಸಹಿಗಳೂ ಅನೇಕ ಮಹಾ

ಜನಗಳ ಸಹಿಗಳೂ ನಮೂದಿಸಲ್ಪಟ್ಟು ಸರ್ಕಾರದಲ್ಲಿಯೂ ಕೂಡ ಒಪ್ಪಿಗೆ ಪಡೆದದ್ದಾಯಿತು.

ಮುಂದೆಮುಂದೆ ಜಗದ್ಗುರುಗಳಿಗೆ ಬಹಳ ಅಸ್ವಸ್ಥವಾಗಿ ಕೆಲವುದಿವಸಗಳಲ್ಲಿ ಅವರು ಉಜ್ಜಯಿನಿ ಮಠದಲ್ಲಿಯೇ ಲಿಂಗಾನಂದವನ್ನು ಹೊಂದಿದರು. ಅನಂತರ ಆ ಮೃತ್ಯುಪತ್ರದ ಪ್ರಕಾರ ಉತ್ತರಾಧಿಕಾರ ಮಾಡುವ ಬಗ್ಗೆ ಶ್ರೀ ಉಜ್ಜಯಿನಿ ಜನರುಗಳೂ ಶ್ರೀ ಶಾಸ್ತ್ರಿಗಳವರೂ ಕೂಡಿ ದೀರ್ಘಾಲೋಚನೆಯುಳ್ಳವರಾಗಿ ಎರಡುಸಾವಿರಮೈಲು ದೂರದಲ್ಲಿರುವ ಹಿಮಾಚಲಪ್ರದೇಶಕ್ಕೆ ಹೋಗಿ ಅಲ್ಲಿ ಏನೊಂದೂ ಅರಿಯದ ನಾವು ಪಟ್ಟಾಭಿಷೇಕ ಮಹಾಕಾರ್ಯವನ್ನು ಮಾಡುವುದು ಸಾಧ್ಯವಾಗಲಾರದೆಂದೂ ಅದೇ ಕಾರ್ಯವನ್ನು ಇದೇ ಪೀಠದಲ್ಲಿ ಮಾಡಿದರೆ ಸಕಲ ವಿಷಯಗಳಿಗೂ ಅನುಕೂಲವಾಗುತ್ತದೆಂದೂ ನಿರ್ಧರಿಸಿ ಆ ಪ್ರಕಾರ ಕೇದಾರಪೀಠವಿರುವ ಆ ಯಾವ ಯು. ಪಿ. ಸರ್ಕಾರದವರಿಂದಲೂ ಟಿಹರೀ ಮಹಾರಾಜರಿಂದಲೂ ಅನುಮತಿ ಪಡೆದುಕೊಂಡು ಉತ್ತರಾಧಿಕಾರದ ಮಂಗಲಕಾರ್ಯಕ್ಕಾಗಿ ಸಿದ್ಧಗೊಳಿಸಹತ್ತಿದರು. ಶ್ರೀಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳು ಶುಭಮುಹೂರ್ತದಲ್ಲಿ ಶ್ರೀ ಗಂಗಾಧರಶಾಸ್ತ್ರಿಗಳಿಗೆ ಶ್ರೀ ಕೇದಾರಪೀಠದ ಪಟ್ಟಾಭಿಷೇಕ ಕಾರ್ಯವನ್ನು ಬಹು ವಿಜೃಂಭಣೆಯಿಂದ ನೆರವೇರಿಸುತ್ತಲೇ ನೂತನ ಜಗದ್ಗುರುಗಳಿಗೆ "ಶ್ರೀಜಗದ್ಗುರು ನೀಲಕಂಠಲಿಂಗರಾವಲ್ ಮಹಾರಾಜ" ಎಂಬ ನಾಮಕರಣ ಮಾಡಿದರು.

ಶಾಸ್ತ್ರಿಗಳವರು ಈ ಸಮಾರಂಭದಲ್ಲಿ ಬಹು ಪರಿಶ್ರಮವಹಿಸಿ ಸರ್ವ ಕಾರ್ಯವ್ಯವಸ್ಥೆಯನ್ನು ಸಕಲರೂ ಕೊಂಡಾಡುವಂತೆ ನಡೆಸಿದರು. ಈ ನೂತನ ಜಗದ್ಗುರುಗಳು ಹೊಸದಾಗಿ ದೇಶಮಧ್ಯದಲ್ಲಿ ಬಿಜಯಂಗೈಸಬೇಕೆಂದು ಅವರಿಗೆ ಉಜ್ಜಯಿನೀ ಸಂಸ್ಥಾನದ ಸಿಬ್ಬಂದಿಸಾಮಾನುಗಳನ್ನು ಕೊಡಿಸಿ ಸಂಚಾರಕ್ಕೆ ಹೊರಡಿಸಿದರು. ನೂತನ ಜಗದ್ಗುರುಗಳ ಅಪೂರ್ವ ಸಂದರ್ಶನದಿಂದ ಹಳ್ಳಿಹಳ್ಳಿಗೂ ಸಂತೋಷಭರಿತರಾದ ಶಿಷ್ಯರು ಅಪಾರ ಕಾಣಿಕೆಯನ್ನು ಕೊಟ್ಟು ಪೀಠದ ಶ್ರೇಯೋಭಿವೃದ್ಧಿಗೆ ಕಾರಣರಾದರೆಂದು ತಿಳಿಸಲು ಸಂತೋಷವಾಗುತ್ತದೆ. ಶಾಸ್ತ್ರಿಗಳು ಆಗಾಗ್ಗೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನಡೆಯುವ ಅಡ್ಡಪಲ್ಲಕ್ಕಿ ಮಹೋತ್ಸವಗಳಿಗೆ ಹೋಗಿ

ಜಗದ್ಗುರು ಸನ್ನಿಧಿಯಲ್ಲಿ ನೆರವೇರುವ ಸಭಾಕಾರ್ಯಗಳಲ್ಲಿ ವೀರಶೈವಶಾಸ್ತ್ರ ಸಿದ್ಧಾಂತಗಳ ಬಗ್ಗೆ ಭಾಷಣಮಾಡಿ ಕೇದಾರಪೀಠದ ಪ್ರಾಚೀನ ವಿಷಯ ಗಳನ್ನು ಪ್ರಚಾರಗೊಳಿಸುವವರಾಗಿದ್ದರು. ಈ ಪ್ರಕಾರ ಕೇದಾರಪೀಠದ ಉನ್ನತಿಯನ್ನು ಹೃತ್ಪೂರ್ವಕಮಾಡಿದ ಕಾಶೀನಾಥರು ಏಕೋರಾಮಾ ರಾಧ್ಯನ ಪೂರ್ಣಾನುಗ್ರಹಕ್ಕೆ ಪಾತ್ರರಾದರು.

## ಶ್ರೀಮದ್ರಂಭಾಪುರೀಪೀಠ

ಪಶ್ಚಿಮಕ್ಕಿರುವ ಸಂಹ್ಯಾದ್ರಿ ಪರ್ವತದ ಮಲಯಾಚಲಪ್ರದೇಶವು ಪವಿತ್ರವಾದ ಭದ್ರಾನದಿಯ ರಮ್ಯಪ್ರದೇಶವಾಗಿರುವುದು. ಇಲ್ಲಿ ಅಗಸ್ತ್ಯಾದಿ ಮಹಾಋಷಿಗಳು ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರಿಂದ ಶಿವತತ್ತ್ವೋಪದೇಶ ಪಡೆದವರಾಗಿದ್ದಾರೆ. ಶ್ರೀ ರೇಣುಕಾಚಾರ್ಯರು ವೀರಶೈವಮತದ ಸಾರ್ವಭೌಮಾಧಿಕಾರವನ್ನು ನಡೆಯಿಸಿ ವಿಖ್ಯಾತಿಗೊಂಡ ರಂಭಾಪುರೀ ವೀರಸಿಂಹಾಸನಮಠವೂ ಇದೇ ಭಾಗದ ಬಾಳೇಹೊನ್ನೂರಿನಲ್ಲಿ ವಿರಾಜಿಸುತ್ತಿದೆ. ಅನಾದಿಕಾಲದಿಂದ ವೀರಶೈವರಿಗೆ ಸಾಕ್ಷಾತ್ ಕೈಲಾಸದಂತೆ ಪರಿಶೋಭಿಸುತ್ತಿದ್ದ ಈ ವೀರಸಿಂಹಾಸನಮಠದ ಪರಂಪರೆಯಲ್ಲಿ ಉತ್ತರೋ ತ್ತರ ಜಗದ್ಗುರುಗಳಾಗುತ್ತಬಂದು ಕ್ರಿ. ಶ. ೧೯೩೨ ರ ಸುಮಾರಿನಲ್ಲಿದ್ದ ಶ್ರೀ ಜಗದ್ಗುರು ಪಂಚಾಕ್ಷರಶಿವಾಚಾರ್ಯಮಹಾಸ್ವಾಮಿಗಳವರು ಪೀಠದ ಮಾಮೂಲು ಪದ್ಧತಿಯಂತೆ ತಮ್ಮ ಉತ್ತರಾಧಿಕಾರವನ್ನು ಯಾವ ಗುರು ವರ್ಗದ ವಟುಗಳಿಗೂ ವಹಿಸದೆ ಶಿವಸಾಯುಜ್ಯವನ್ನೈದಿದರು. ಆಗ ಈ ಧರ್ಮಪೀಠವು ಅನಾಯಕವಾಯಿತು.

ಸಮಯ ಸಾಧಿಸಿಕೊಂಡಿದ್ದ ಕೆಲ ವಿರಕ್ತರು ಈ ಪೀಠಕ್ಕಿರುವ ಗುರು ವರ್ಗದ ಸಾರ್ವಭೌಮಾಧಿಕಾರವನ್ನು ತಪ್ಪಿಸಬೇಕೆಂದೂ, ಓಟಿನಮೂಲಕ ಯಾವನಾದರೊಬ್ಬ ಅನಾಮಧೇಯನನ್ನು ಅಧಿಕಾರಿಯನ್ನಾಗಿ ಮಾಡ ಬೇಕೆಂದೂ, ಸಾಧ್ಯವಾಗದಿದ್ದಲ್ಲಿ ಇದನ್ನು ಯಾವಾಗಲೂ ಅನಾಯಕ ವಾಗಿಯೇ ಉಳಿಸಬೇಕೆಂದೂ ಉದ್ದೇಶಪಟ್ಟು ಕೆಲಜನ ಭಕ್ತರನ್ನು ಮುಂದೆ ಮಾಡಿ ಮೈಸೂರು ಸರ್ಕಾರದಲ್ಲಿ ವ್ಯಾಜ್ಯಹೂಡಿಸಿದರು.

ಬಾಳೇಹೊನ್ನೂರಿನ ಮಠವು ಮೈಸೂರು ಸಂಸ್ಥಾನದ ಚಿಕ್ಕ ಮಂಗಳೂರ ಜಿಲ್ಲೆಗೆ ಸೇರಿದ್ದಾಗಿತ್ತು. ಈ ಸಂಸ್ಥಾನದ ಆಢಳಿತವು ಬ್ರಿಟಿಷ್ ರೆಸಿಡೆಂಟನ ಅಂಕಿತದಲ್ಲಿದ್ದರೂ ಕರ್ನಾಟಕರತ್ನಸಿಂಹಾಸನಾಧೀಶ್ವರರೆಂದು ಹೆಸರಾದ ಆಗಿನ ಮೈಸೂರು ನಾಲ್ವಡಿ ಶ್ರೀಕೃಷ್ಣರಾಜ ಒಡೆಯರವರ ಸರ್ವಾಧಿಕಾರದಲ್ಲಿತ್ತು.

ರಂಭಾಪುರೀ ಪೀಠಾಧೀಶ್ವರರು ಕೈಲಾಸವಾಸಿಗಳಾದ ವಿಷಯವು ನಾನಾಮೂಲಕ ದೇಶದ ತುಂಬಾ ಹಬ್ಬಿತು. ವಿರಕ್ತರು ನ್ಯಾಯಹೂಡಿಸಿದ ಸುದ್ದಿಯೂ ಪಸರಿಸಿತು. ಆಗ ಉಜ್ಜಯಿನಿ ಜಗದ್ಗುರು ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ವ್ಯಸನಾಕ್ರಾಂತರಾಗಿ ಈ ಪೀಠದ ಉತ್ತರಾಧಿಕಾರವು ಗುರುವರ್ಗದ ವಟುಗಳಿಂದಲೇ ನಡೆಯುವ ವ್ಯವಸ್ಥೆ ಹೇಗಾಗಬೇಕೆಂಬ ಬಗ್ಗೆ ಆಲೋಚಿಸಲು ಪಂ॥ ಕಾಶೀನಾಥಶಾಸ್ತ್ರಿಗಳವರನ್ನು ಕರೆಯಿಸಿಕೊಂಡು ಆ ಪೀಠದ ತೊಂದರೆ ನಿವಾರಣೆಗಾಗಿ ಅಪ್ಪಣೆಯನ್ನಿತ್ತರು. ಆಗ ಶಾಸ್ತ್ರಿಗಳು ಕೈಮುಗಿದು " ಗುರುವಚನದಿಂದಧಿಕ ಸುಧೆಯುಂಟೆ " ಎಂಬ ಶಾಸ್ತ್ರವಿಧಿಯನ್ನು ಜ್ಞಾಪಿಸಿ ಗುರುದೇವಾ ? ಈ ನಿಮ್ಮ ಸಂತೋಷಕರವಾದ ವಾಣಿಯು ನನಗೆ ಅಗಾಧ ಬಲವನ್ನು ಕೊಟ್ಟಿರುತ್ತದೆ. ಪಂಚಪೀಠಗಳ ತೊಂದರೆಯ ನಿವಾರಣಾ ಶಕ್ತಿಯನ್ನು ಪಂಚಾಚಾರ್ಯರು ನನಗೆ ಹುಟ್ಟು ವಾಗಲೇ ಅನುಗ್ರಹಿಸಿರುತ್ತಾರೆ. ನನ್ನ ತಂದೆತಾಯಿಗಳು ಪೀಠಗಳ ಹಾಗೂ ಮಹಾಚಾರ್ಯರ ಸೇವೆಗಾಗಿಯೇ ನನ್ನನ್ನು ಹೆತ್ತಿದ್ದಾರೆ. ಎಂದು ಹಲವಾರು ಮುಖದಿಂದ ಗೆಲ್ಲುವ ತಮ್ಮ ಧೃಢವಿಶ್ವಾಸವನ್ನು ವ್ಯಕ್ತಗೊಳಿಸಿದ್ದಕ್ಕೆ, ಜಗುದ್ಗುರುಗಳು ಸಂತುಷ್ಟರಾಗಿ ಕಾಶೀನಾಥಾ ! ನೀನು ಈ ಗುರುಪೀಠದ ವ್ಯಾಜ್ಯದಲ್ಲಿ ಧೀರನಾಗಿ ನಿಂತು ಹೋರಾಡಿ ವಿಜಯಶಾಲಿಯಾಗು ? ಷಣ್ಮುಖ ನಂತಿದ್ದ ನಿನ್ನ ಬ್ರಹ್ಮಚರ್ಯ ವ್ರತವೂ ಆಚಾರ್ಯ ಭಕ್ತಿಯೂ ಜಗತಿನಲ್ಲಿ ಸಚ್ಚರಿತ್ರೆಯುಳ್ಳವಾಗಲಿ ! ಎಂದು ಹೃತ್ಪೂರ್ವಕ ಆಶೀರ್ವದಿಸಿದರು. ಆಗ ಪಂಡಿತರು ಮಹಾತ್ಮರ ಈ ಅಭಯವಚನಕ್ಕೆ ಶಿರಬಾಗಿ ಗುರುಸಾರ್ವ ಭೌಮರೇ ! ತಮ್ಮ ಕೃಪಾಶೀರ್ವಾದವೇ ನನಗೆ ವಜ್ರಾಯುಧಃ, ತಪಃಫಲಗಳೇ ಎನಗೆ ಮಹಾಪ್ರಸಾದ ; ಆಚಾರ್ಯರ ಸೇವೆಯೇ ಎನ್ನ ಜೀವನದ ಮಾರ್ಗ ; ಎನ್ನ ಸಂಕಲ್ಪವೇ ಗುರುವರ್ಗೋತ್ತೇಜಕ ಸಾಧನವಾಗಿದ್ದು ಇವುಗಳವಿನಃ

ಮತ್ತಾವುದಕ್ಕೂ ಗಮನಿಸಲಾರೆ ; ಎನ್ನುತ್ತ ರಂಭಾಪುರೀ ಪೀಠದ ಸೇವೆಗೆ ಕಂಕಣಬದ್ಧರಾದರು.

ಈ ವ್ಯಾಜ್ಯದಲ್ಲಿ ಪ್ರತಿಕಕ್ಷಿಗಳು ಕ್ಷಣಕ್ಷಣಕ್ಕೂ ಬೇರೆ ಬೇರೆ ಕ್ರಿಯೆಗಳನ್ನು ತಂದೊಡ್ಡುತ್ತಿದ್ದರೂ ಪಂಡಿತರು ಹೆದರದೆ ತಕ್ಷಣದಲ್ಲಿಯೇ ತಕ್ಕ ಪ್ರತಿಕ್ರಿಯೆಗಳನ್ನು ಮಾಡುತ್ತಿದ್ದರು. ಇವರ ಈ ವಿಧವಾದ ಅದ್ಭುತ ಕರ್ತೃತ್ವಶಕ್ತಿಯನ್ನು ಕಂಡು ದೇಶದ ಜನರೆಲ್ಲಾ ಚಕಿತರಾಗಿದ್ದರಲ್ಲದೆ, ವಿರೋಧಿಗಳೂ ಸಹ ಇವರ ಆತ್ಮಶಕ್ತಿಯ ಪ್ರಭಾವವನ್ನು ವರ್ಣಿಸುತ್ತಿದ್ದರು. ಹೀಗೆ ಈ ವ್ಯಾಜ್ಯವು ಮೈಸೂರು ಗವರ್ನಮೆಂಟಿನಲ್ಲಿ ಮೂರು ವರ್ಷಗಳ ಕಾಲ ಅವಿಚ್ಛಿನ್ನವಾಗಿ ನಡೆಯಿತು. ಇಂಥ ಪ್ರಚಂಡ ಧರ್ಮವ್ಯಾಜ್ಯವು ಈ ಪ್ರಪಂಚದಲ್ಲಿ ಹಿಂದೆ ಎಂದೂ ನಡೆದಿರಲಿಕ್ಕಿಲ್ಲ. ಮುಂದೆ ಎಂದೂ ನಡೆಯಲಿಕ್ಕಿಲ್ಲ ಎಂದು ಜನಗಳು ತಮ್ಮಷ್ಟಕ್ಕೆ ತಾವೇ ಮಾತಾಡಿಕೊಳ್ಳುತ್ತಿದ್ದರು.

ಸರ್ಕಾರದಲ್ಲಿ ಈ ರೀತಿ ಒಂದು ಕಡೆ ವ್ಯಾಜ್ಯ ನಡೆಯುತ್ತಿದ್ದರೂ ಪಂಡಿತರು ಮತ್ತೊಂದು ಕಡೆ ಸಮಾಜದ ಬಲವನ್ನು ಕಟ್ಟುತ್ತಿದ್ದರು. ಅದಕ್ಕಾಗಿ ಕರ್ನಾಟಕದ ನಾನಾಭಾಗದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಭೆಗಳನ್ನು ಕರೆದು ಆ ಮೂಲಕ ವೀರಶೈವರಿಗೂ ರಂಭಾಪುರೀ ಪೀಠಕ್ಕೂ ಇರುವ ಸಂಬಂಧವನ್ನೂ, ಆ ಪೀಠದ ಮಹತ್ವವನ್ನೂ, ಪೀಠಸ್ಥಾಪಕರಾದ ಶ್ರೀಜಗದ್ಗುರು ರೇಣುಕಾಚಾರ್ಯರ ಅದ್ಭುತಲೀಲೆಗಳನ್ನೂ, ರಾಜಾಧಿರಾಜರು ಆ ಪೀಠಕ್ಕೆ ಸಲ್ಲಿಸಿದ ಸೇವೆಯನ್ನೂ, ಈಗ ಅನಾಯಕವಾಗಿರುವ ಆ ಪೀಠವನ್ನು ಸನಾಯಕವಾಗಿ ಮಾಡುವ ರೀತಿಯನ್ನೂ ಸರಸವಾಗಿ ವಿವರಿಸಿ ಪೀಠದ ಶಿಷ್ಯಕೋಟಿಯನ್ನು ಎಚ್ಚರಿಸಿದರು. ಮತ್ತು ಆ ಪೀಠಕ್ಕೆ ಬರುವ ಉತ್ತರಾಧಿಕಾರಿಯು ವೀರಶೈವವೃಂದಕ್ಕೆ ಶಿಖಾಮಣಿಸ್ವರೂಪನೂ, ಆಚಾರವೇ ಸಂಪತ್ತಾಗುಳ್ಳವನೂ, ಶಿವಜ್ಞಾನಕ್ಕೆ ಮಹಾಸಾಗರಸ್ವರೂಪನೂ, ಬೌದ್ಧಾದಿಪ್ರತಿಕೂಲಸಿದ್ಧಾಂತಗಳೆಂಬ ಮಹಾಂಧಕಾರಕ್ಕೆ ಸೂರ್ಯನಂತಿರುವವನೂ, ಸನಾತನವಾದ ಶಿವಭಕ್ತಿಯೆಂಬ ವೃಕ್ಷವನ್ನು ರಕ್ಷಿಸುವವನೂ, ಗುರುವರ್ಗದ ಮಾಹೇಶ್ವರಜಂಗಮವಂಶದಲ್ಲಿ ಜನಿಸಿದವನೂ, ಬ್ರಹ್ಮಚರ್ಯಪಾಲಕನೂ, ಸುರೂಪಿಯೂ, ಭಸ್ಮತ್ರಿಪುಂಡ್ರನೂ, ರುದ್ರಾಕ್ಷಮಾಲಾ

ಲಂಕೃತನೂ ಮೊದಲಾದ ಆಚಾರ್ಯಸಂಪ್ರದಾಯವಿಶಿಷ್ಟಗುಣಗಳನ್ನು ವರ್ಣಿಸಿ ಗುರುಮೂರ್ತಿಯ ಸ್ವರೂಪವನ್ನು ಎಲ್ಲರಿಗೆ ಮನನಮಾಡಿಕೊಟ್ಟರು. ಮತ್ತು ಸಕಲ ವೀರಶೈವರಿಗೆ ಗುರುವರ್ಗದ ಮಾಹೇಶ್ವರಜಂಗಮರೇ ಪಟ್ಟಾಧಿಕಾರದಿಂದ ಗುರುಗಳಾಗುವರೆಂದೂ, ಪೀಠಾಧಿಕಾರದಿಂದ ಧರ್ಮ ಸಾಮ್ರಾಜ್ಯದ ಸಾರ್ವಭೌಮಾಧಿಕಾರ ಹೊಂದುವರೆಂದೂ ಹೇಳಿ ಮಠಾಧಿಕಾರಿಗಳ ಶ್ರೇಷ್ಠತ್ವವನ್ನು, ವೀರಶೈವ ಸ್ತ್ರೀಪುರುಷರಾದಿಯಾಗಿ ಸಕಲರಿಗೂ ಮನನಮಾಡಿಕೊಟ್ಟರು. ಇದನ್ನು ಕೇಳಿದ ಜನಸ್ತೋಮವು ಮೆಚ್ಚುಗೆಯುಳ್ಳದ್ದಾಗಿ ಎಲ್ಲಾ ಹಳ್ಳಿ ಪಟ್ಟಣಗಳಲ್ಲಿ ಪಂಡಿತರ ಅಭಿಪ್ರಾಯಕ್ಕೆ ಮಾನ್ಯತೆ ದೊರೆಯಲಾರಂಭಿಸಿತು. ವಿಚಾರಜ್ಞರಾದ ಮಹಾ ಜನರು ಮೇಲ್ಕಂಡ ಸರ್ವಲಕ್ಷಣ ಸಂಪನ್ನನಾದ ವಟುವನ್ನೇ ಆರಿಸಬೇಕೆಂದು ನಿರ್ಧರಿಸಿದರು. ರಂಭಾಪುರೀ ಪೀಠಕ್ಕೆ ಸಮೀಪದಲ್ಲಿರುವ ನರಸಿಂಹರಾಜ ಪುರದ ಯಜಮಾನ ಮ|| ರಾ|| ರಾ|| ಯಿಂ-ನಿ-ಶಾಂತಪ್ಪಶೆಟ್ಟರವರು ವೀರ ಕಂಕಣ ಕಟ್ಟಿ ಕೆಲಸಮಾಡಲುದ್ಯುಕ್ತರಾದರು.

ಹೀಗೆ ಪಂಡಿತರು ಉಪನ್ಯಾಸ ಬೋಧೆಯಿಂದಲೂ, ಆತ್ಮಶಕ್ತಿಯ ಬಲದಿಂದಲೂ ಭರತಖಂಡದಲ್ಲಿರುವ ಸಮಸ್ತ ಭಕ್ತಶ್ರೇಷ್ಠರ ಹಾಗೂ ಗುರುವರ್ಗದವರ ಸೂತ್ರಗಳನ್ನೆಲ್ಲ ತಮ್ಮ ಸ್ವಾಧೀನದಲ್ಲಿಟ್ಟುಕೊಂಡು ಅಹೋರಾತ್ರಿಯನ್ನದೆ ಪೀಠದ ಸೇವೆಯಲ್ಲಿ ಮಗ್ನರಾಗಿದ್ದರು. ಕ್ರಿ. ಶ. ೧೯೩೪ ನೇ ಇಸ್ವಿಯಲ್ಲಿ ಮೈಸೂರು ಗವರ್ನಮೆಂಟಿನವರು ಪ್ರತಿಕಕ್ಷಿಗಳ ಅಭಿಪ್ರಾಯದಂತೆ ಪೀಠಕ್ಕೆ ಓಟಿನ ಮೂಲಕ ವಟುವನ್ನಾರಿಸಬೇಕೆಂದು ಹುಕುಂ ಹೊರಡಿಸಿದರು. ಆವಾಗ ಪಂಡಿತರು ವಿಶೇಷ ವ್ಯಸನ ಪಟ್ಟರು. ಆದರೂ ಎದೆಗುಂದದೆ ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ಯೋಚಿಸಿ ಧರ್ಮದಿಂದಲೇ ಬೆಳೆದು ಬಂದಿರುವ ಭಾರತದಲ್ಲಿ ಧರ್ಮಪೀಠಾಧಿಪತಿಗಳ ಸಂಪ್ರದಾಯವನ್ನು ಕೆಡಿಸುವದು ಅನ್ಯಾಯವೆಂದೂ, ಈವರೆಗೆ ಯಾವ ಧರ್ಮಪೀಠಗಳಲ್ಲಿಯೂ ಈ ತರದ ಪ್ರಮಾದವಾಗಿರುವದಿಲ್ಲೆಂದೂ, ಮುನಸಿಪಾಲ್ಟಿ ಲೋಕಲ್ ಬೋರ್ಡುಗಳ ಅಧ್ಯಕ್ಷ ಚುನಾವಣೆಯಂತೆ ಜಗದ್ಗುರು ಪೀಠಕ್ಕೆ ಚುನಾವಣೆ ನಡೆಸುವುದು ನೀತಿಬಾಹಿರವೆಂದೂ, ಧರ್ಮಪ್ರಭುಗಳೆಂದು ಹೆಸರಾಂತ. ಶ್ರೀ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಈ ರೀತಿ ಅಧರ್ಮ ತಲೆಯೆತ್ತುವು

ದೆಂದರೆ ದೇಶದ ಅವನತಿಗೆ ಕಾರಣವೆಂದೂ ದೇಶ ದೇಶಾಂತರ ಮಹಾಜನಗಳಿಂದ ಮೈಸೂರು ಸರ್ಕಾರಕ್ಕೆ ತಿಳಿಸುವಂತೆ ಮಾಡಿದರು.

ಮೇಲ್ಕಂಡ ಓಟಿನ ಆರ್ಡರ ಹೊರಟ ಸಮಯದಲ್ಲಿ ಶ್ರೀಮನ್ಮಹಾರಾಜರವರು ಹಿಮಾಲಯ ಪ್ರಾಂತದ ಡೆಹರಾಡೂನಿನಲ್ಲಿ ವಾಸವಾಗಿದ್ದರು. ಆ ಧರ್ಮಪ್ರಭುಗಳಿಗೂ ಈ ಅನ್ಯಾಯದ ವಿಷಯವನ್ನು ಅರಿಕೆಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಪಂಡಿತರು ಭರತಖಂಡದ ನಾನಾ ಭಾಗಗಳ ಮೂಲಕ ಡೆಹರಾಡೂನಿಗೆ ಒಂದೇ ದಿವಸ ಸುಮಾರು ಒಂದುಸಾವಿರ ಟೆಲಿಗ್ರಾಮುಗಳು ತಲ್ಪುವಂತೆ ವ್ಯವಸ್ಥೆ ಮಾಡಿದರು. ಮತ್ತು ಓಟಿನ ಮೂಲಕ ವಟುಚುನಾವಣೆ ನಡೆಸುವದು ಸರಿಯಾದುದಲ್ಲವೆಂದೂ, ಸನಾತನವಾದೀ ಪೀಠಕ್ಕೆ ಸಂಸಮಾನ ವಾದ ಕಾಶೀ, ಕೇದಾರ, ಉಜ್ಜಯಿನಿ, ಶ್ರೀಶೈಲಕ್ಷೇತ್ರಗಳಲ್ಲಿರುವ ಜಗದ್ಗುರು ಪೀಠಾಧಿಪತಿಗಳ ಅಭಿಪ್ರಾಯದಂತೆ ವಟುವನ್ನು ನೇಮಿಸುವುದು ಯೋಗ್ಯವೆಂದೂ, ಶ್ರೀ ಶೃಂಗೇರಿ ಮಠದಿಂದ ಮಹಾಪ್ರಭುಗಳ ಗಮನಕ್ಕೆ ಬರುವಂತೆ ವ್ಯವಸ್ಥೆ ಮಾಡಿದರು.

ಶ್ರೀಶೃಂಗೇರಿಪೀಠದ ಶ್ರೀಗಳವರು ಆಗ್ಗೆ ರಾಮೇಶ್ವರದ ಹತ್ತಿರ 'ಕೊಮಾರಲಿಂಗಂ' ಎಂಬ ಟವನ್ನಿನಲ್ಲಿ ಮೊಕ್ಕಾಂ ಮಾಡಿದ್ದರು. ಶ್ರೀಗಳವರ ಅಪ್ಪಣೆಯ ಮೇರೆಗೆ ಆ ಮಠದ ಏಜಂಟರವರು ಪ್ರಭುಪ್ರೀತಿಪಾತ್ರರಿಗೆ ಈ ಕೆಳಗೆ ಕಾಣಿಸಿರುವಂತೆ ಒಂದು ಪತ್ರವನ್ನು ಬರೆದು, ಈ ವಿಷಯವು ಮಹಾಪ್ರಭುಗಳವರ ಗಮನಕ್ಕೆ ಬರುವಂತೆ ವ್ಯವಸ್ಥೆ ಮಾಡಿದರು.

"The Mutt at Balehonnur is an ancient one and His Holiness deems it proper that His Highness the Maharaja directs the adoption of a successor to the seat now reported to be vacant from a few years past, on the recommendation of the heads of the four Veerasaiva Mutt of equal status and Importance at Benares, Ujjani, Srisailam and Himavatkedara, and that it would not be so conducive to the moral and

spiritual advancement of the community to act in the matter on the Votes of the general public secured by the several aspirants to the vacant seat.

I am directed by His Holiness to request you to represent this aspect of the question to His Highness the Maharaja and obtain His Highness's favourable orders in the matter in keeping with the dignity and sanctity of this Institution."

" ಬಾಳೇಹೊನ್ನೂರಿನಮಠವು ಬಹುಪುರಾತನವಾದುದು. ಈಗ ಕೆಲವು ವರ್ಷಗಳಿಂದ ಸ್ವಾಮಿಗಳಿಲ್ಲದಿರುವ ಆ ಪೀಠಕ್ಕೆ ಉತ್ತರಾಧಿಕಾರಿಯನ್ನಾರಿಸುವುದರಲ್ಲಿ ಸಮಾನವಾದ ಗೌರವವನ್ನು ಪಡೆದಿರುವ ಕಾಶಿ, ಉಜ್ಜಯಿನಿ, ಶ್ರೀಶೈಲ, ಹಿಮವತ್ಕೇದಾರದಲ್ಲಿರುವ ವೀರಶೈವಮಠಾಧಿಕಾರಿಗಳು ಅನುಮೋದಿಸುವವರನ್ನೇ ಶ್ರೀಮನ್ಮಹಾರಾಜರವರು ನಿಯಮಿಸುವುದು ಸಾಧುವಾದುದೆಂದು ಜಗದ್ಗುರುಗಳವರು ಅಭಿಪ್ರಾಯಪಡುತ್ತಾರೆ. ಹಾಗಲ್ಲದೆ ಸಾಮಾನ್ಯಜನರಿಂದ ಹೆಚ್ಚು ಓಟುಗಳನ್ನು ಪಡೆದು ಪೀಠಾಧಿಕಾರವನ್ನು ಪಡೆಯಲು ಯತ್ನಿಸುವವರನ್ನು ನಿಯಮಿಸುವುದು ಸಮಾಜದ ನೈತಿಕಾಧ್ಯಾತ್ಮಿಕಾಭಿವೃದ್ಧಿಗೆ ಸಹಾಯಕಾರಿಯಾಗಲಾರದು. ಆದುದರಿಂದ ತಾವು ದಯವಿಟ್ಟು ಈ ಅಭಿಪ್ರಾಯವನ್ನು ಶ್ರೀಮನ್ಮಹಾರಾಜರವರಿಗೆ ವಿವರವಾಗಿ ತಿಳುಹಿಸಿ, ಪೀಠದ ಘನತೆ ಮತ್ತು ಪವಿತ್ರತೆಯನ್ನು ಕಾಪಾಡುವುದಕ್ಕಾಗಿ ತಕ್ಕ ಅಪ್ಪಣೆಯು ದೊರೆಯುವಂತೆ ಮಾಡಬೇಕೆಂಬ ಅಂಶವನ್ನು ತಮಗೆ ತಿಳುಹಿಸಲು ಜಗದ್ಗುರುಗಳವರು ಅಪ್ಪಣೆಕೊಡಿಸಿರುತ್ತಾರೆ."

ಈ ರೀತಿಯಾಗಿ ಶೃಂಗೇರೀಪೀಠದಿಂದ ಬಂದ ಸದಭಿಪ್ರಾಯವನ್ನು ಮಹಾಪ್ರಭುಗಳವರು ಪರಾಮರ್ಶಿಸಿ, ಶ್ರೀಮದ್ರಂಭಾಪುರೀಪೀಠದ ಘನವಾದ ಯೋಗ್ಯತೆಯನ್ನು ತಮ್ಮ ದಿವ್ಯಚಿತ್ತಕ್ಕೆ ತಂದುಕೊಂಡು, ಆ ಪೀಠದ ಜೀರ್ಣೋದ್ಧಾರದ ಕಡೆಗೆ ತಮ್ಮ ಅಮೃತಮಯಕೃಪಾಕಟಾಕ್ಷವನ್ನು ಚಲ್ಲಿದರು.

ನಮ್ಮ ಭರತಖಂಡದಲ್ಲಿ ಸನಾತನವೈದಿಕಧರ್ಮರಕ್ಷಣೆಗಾಗಿ ದರಭಂಗಾ ಮಹಾರಾಜರವರ ಮತ್ತು ಕಾಶ್ಮೀರಮಹಾರಾಜರವರ ಅಧ್ಯಕ್ಷತೆಯಲ್ಲಿ "ಭಾರತಧರ್ಮಮಹಾಮಂಡಲ" ಎಂಬ ಮಹಾಸಂಸ್ಥೆಯು ಸ್ಥಾಪಿಸಲ್ಪಟ್ಟಿರುವ ವಿಷಯವು ಜಗತ್ಪ್ರಸಿದ್ಧವಷ್ಟೆ! ಜಗದ್ವಿಖ್ಯಾತವಾದೀ ಮಹಾಸಂಸ್ಥೆಯಿಂದಲೂ ಕೂಡ ತಾ॥ ೧೭-೯-೧೯೨೪ ರಲ್ಲಿ--ಕಾಶೀ-ಕೇದಾರ-ಉಜ್ಜಯಿನೀ-ಶ್ರೀಶೈಲ ಪೀಠಾಧಿಪತಿಗಳು ಅನುಮೋದಿಸುವ ಪಟ್ಟವನ್ನೇ ಶ್ರೀರಂಭಾಪುರೀ ಪೀಠಕ್ಕೆ ಸ್ವಾಮಿಗಳನ್ನಾಗಿಮಾಡಬೇಕೆಂಬ ಅಭಿಪ್ರಾಯದಿಂದೊಡಗೂಡಿದ ಪತ್ರವು ಮಹಾಪ್ರಭುಗಳವರಿಗೆ ಬರುವಂತೆ ವ್ಯವಸ್ಥೆ ಮಾಡಿದರು. ಇದೇ ವಿಷಯವನ್ನು ಕುರಿತು ಸೊಂಡೂರುಮಹಾರಾಜರವರಿಂದಲೂ ಸಹ ಮಹಾಪ್ರಭುಗಳವರಿಗೆ ಪತ್ರವು ಬರುವಂತೆ ವ್ಯವಸ್ಥೆಯನ್ನು ಮಾಡಿದರು. ಇದೇ ರೀತಿಯಾಗಿ ಇನ್ನೂ ಅನೇಕವಿಧವಾದ ಅಸಾಧ್ಯಸಾಹಸಗಳನ್ನು ನಾನಾರೀತಿಯಿಂದ ಮಾಡಿ, ಶ್ರೀರಂಭಾಪುರೀ ಪೀಠದ ವಿಷಯವು ಮಹಾಪ್ರಭುಗಳವರ ಮನಸ್ಸನ್ನು ಶೀಘ್ರವಾಗಿ ಆಕರ್ಷಿಸುವಂತೆ ನಡೆಸಿದರು.

ಪಂಡಿತರು ತಮ್ಮ ದೇಶವಲ್ಲದ ಮೈಸೂರು ದೇಶದಲ್ಲಿ ಬಂದು, ಹಸಿವು ತೃಷಿಗಳ ಬಾಧೆಯನ್ನು ಗಮನಿಸದೆ, ತಮ್ಮ ದೇಹವನ್ನೇ ಶ್ರೀಜಗದ್ಗುರು ರೇಣುಕನಿಗೆ ಧಾರೆಯೆರೆದು ಕೆಲಸಮಾಡಿದ ವಿಷಯವು, ಜಗನ್ನಿಯಾಮಕನಾದ ಆ ಶ್ರೀರೇಣುಕನಿಗೆ ಮಾತ್ರ ವೇದ್ಯವಲ್ಲದೆ ಇನ್ನಾರಿಗೂ ವೇದ್ಯವಾಗದು. ಈ ರೀತಿಯಾಗಿ ಮೂರುವರ್ಷಗಳವರೆಗೆ ಕಷ್ಟಪಟ್ಟು ಕೆಲಸ ಮಾಡಿ, ಅಂತ್ಯದಲ್ಲಿ ಸಾಕ್ಷಾದ್ಧರ್ಮಾವತಾರಿಗಳೆಂದು ಜಗದ್ವಿಖ್ಯಾತರಾಗಿ ಜನಕಮಹರ್ಷಿಯಂತೆ ರಾಜ್ಯವನ್ನು ಪರಿಪಾಲಿಸುತ್ತಿರುವ, ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ್ ಮಹಾಪ್ರಭುಗಳವರನ್ನು ಪೂರ್ವಾಶ್ರಮದಲ್ಲಿದ್ದ ಶ್ರೀಶಿವಾನಂದರಾಜೇಂದ್ರ ಶಿವಾಚಾರ್ಯಮಹಾಸ್ವಾಮಿಗಳವರೊಡನೆ ತಾ॥ ೧೮-೧-೧೯೨೫ ನೆಯ ಇಸ್ವಿ ದಿವಸ, ಬೆಂಗಳೂರು ಅರಮನೆಯ ಅವರ ಪೂಜಾಗೃಹದಲ್ಲಿ ಸಂದರ್ಶಿಸಿ, ಶ್ರೀಪೀಠದ ವಿಷಯಗಳನ್ನೆಲ್ಲಾ ಆಮೂಲಾಗ್ರವಾಗಿ ಅರಿಕೆಮಾಡಿಕೊಳ್ಳಲು, ಮಹಾಪ್ರಭುಗಳು ಆ ಧರ್ಮಪೀಠದ ವೈಭವವನ್ನೂ, ಶ್ರೀಜಗದ್ಗುರು ರೇಣುಕನ ಲೀಲೆಗಳನ್ನೂ ಕೇಳಿ ಆನಂದತುಂದಿಲಹೃದಯರಾಗಿ, ತತ್ಕ್ಷಣವೇ ಪೂರ್ವ

ದಲ್ಲಾದ ಎಲ್ಲಾ ಆರ್ಡರುಗಳನ್ನೂ ರದ್ದುಮಾಡಿ, ಸರ್ವಸಮ್ಮತವಾದ ಒಂದು ಯೋಜನೆಯನ್ನು ಗವರ್ನಮೆಂಟಿನ ದ್ವಾರಾ ನಿರ್ಣಯಿಸಿ, ಅಧಿಕಾರಕಾರ್ಯ ವನ್ನು ಸಾಂಗಗೊಳಿಸುವಂತೆ ಮಾಡಿದರು. ವಟುಪರಿಕ್ಷಾಸಮಯದಲ್ಲಿ ಈ ಹಿಂದೆ ಶ್ರೀರಂಭಾಪುರೀಪೀಠವನ್ನಲಂಕರಿಸಿದ್ದ ಶಿವೈಕ್ಯರಾದ ಶ್ರೀಜಗದ್ಗುರು ಶಿವಾನಂದರಾಜೇಂದ್ರಶಿವಾಚಾರ್ಯಮಹಾಸ್ವಾಮಿಗಳವರೇ ಒಂದನೆಯವ ರಾಗಿ ಆರಿಸಿ ಬಂದರು. ಆಗ್ಗೆ ಪಂಡಿತರು ಗುರುಕುಲಚಕ್ರವರ್ತಿಯಾದ ಶ್ರೀರೇಣುಕನ ದಯೆಯಿಂದ ತಮಗುಂಟಾದ ಮಹಾವಿಜಯವನ್ನು ಜಗತ್ತಿ ಗೆಲ್ಲಾ ತಿಳುಹಿಸಿ, ತಾ|| ೨೨-೧೧-೧೯೨೫ ನೆಯ ಇಷ್ಟಿ ದಿವಸ ಶ್ರೀಜಗದ್ಗುರು ರಂಭಾಪುರೀಧರ್ಮಪೀಠಾಧಿಕಾರವನ್ನು ಅಸಾಧಾರಣವಾದ ವೈಭವದೊಡನೆ "ನ ಭೂತೋ ನ ಭವಿಷ್ಯತಿ" ಎಂಬಂತೆ ನೆರವೇರಿಸಿ, ಲೋಕವಿಖ್ಯಾತ ಕೀರ್ತಿಶಾಲಿಗಳಾದರು.

ಅಧಿಕಾರ ಸಮಯದಲ್ಲಿ ಮೈಸೂರು ಗವರ್ನಮೆಂಟಿನ ಪರವಾಗಿ ಮುಜರಾಯಿ ಕಮೀಷನರ್ ಮೆ|| ಸಿ. ಎಸ್. ಬಾಲಸುಂದರಂ ಅಯ್ಯರ್ ಇವರು ಆಗಮಿಸಿದ್ದರಲ್ಲದೆ, ಮೆ|| ಕಡೂರು ಡಿ|| ಡೆಪ್ಯುಟಿ ಕಮೀಷನರ್ ಸಾಹೇಬರವರು, ಮೆ|| ಡಿಸ್ಟ್ರಿಕ್ಟ್ ಪೋಲೀಸ್ ಸೂಪರಿಂಟೆಂಡೆಂಟ್ ಸಾಹೇಬ ರವರು, ಮೆ|| ಸಬ್‌ಡಿವಿಜನ್ ಆಫೀಸರವರು ಇವರೇ ಮೊದಲಾದ ಗವರ್ನ ಮೆಂಟ್ ಅಧಿಕಾರಿಗಳು ಆಗಮಿಸಿದ್ದರು. ಇದಲ್ಲದೆ ರಾಜಸಭಾಭೂಷಣ ದಿವಾನ್ ಬಹದ್ದೂರ್ ಸರ್. ಕೆ. ಪಿ. ಪುಟ್ಟಣ್ಣಶೆಟ್ಟರು, ಮೈಸೂರು ಹೈಕೋರ್ಟಿನ ರಿ|| ಚೀಫ್‌ಜಸ್ಟಿಸ್ ರಾಜಧರ್ಮ ಪ್ರವೀಣ ದಿವಾನ್ ಬಹದ್ದೂರ್ ಪಿ. ಮಹಾದೇವಯ್ಯನವರು, ಮೆ|| ದಿವಾನ್ ಬಹದ್ದೂರ್ ಶಾಂತವೀರಪ್ಪನವರು ಮೆಣಸಿನಕಾಯಿ ಧಾರವಾಡ, ಇವರೇ ಮೊದಲಾದ ಅನೇಕ ಜನ ಸುಪ್ರಸಿದ್ಧ ಪುರುಷರು ಆಗಮಿಸಿದ್ದರು. ಈ ಮಹೋತ್ಸವಕ್ಕೆ ಭರತಖಂಡದ ನಾನಾ ಭಾಗಗಳಿಂದ ಸುಮಾರು ಹತ್ತುಸಾವಿರದವರೆಗೆ ಕೇವಲ ಸುಶಿಕ್ಷಿತರಾದ ಜನರೇ ಆಗಮಿಸಿದ್ದರು. ಈ ಪಟ್ಟಾಧಿಕಾರ ಮಹೋತ್ಸವದ ವ್ಯವಸ್ಥೆಗಾಗಿ ದಯಾಳುಗಳಾದ ಮೈಸೂರು ಗವರ್ನಮೆಂಟಿನವರು ಸುಮಾರು ೧೦೦ ಜನ ಲೋಕಲ್ ಪೋಲೀಸರನ್ನೂ, ೨೫ ಜನ ರಿಝರ್ವ ಪೋಲೀಸ ರನ್ನೂ, ೩-೪ ಜನ ಸಬ್‌ಇನ್‌ಸ್ಪೆಕ್ಟರವರನ್ನೂ, ಕೆಲಜನ ಜಮಾದಾರರನ್ನೂ ಕಳುಹಿಸಿ, ಅಧಿಕಾರಕಾರ್ಯವನ್ನು ಬಹು ಶಾಂತರೀತಿಯಿಂದ ನೆರವೇರಿಸಿ

ದರು. ಈ ಪಟ್ಟಾಧಿಕಾರ ಸಮಯದಲ್ಲಿ ಶ್ರೀಶೃಂಗೇರಿಪೀಠದ ಶ್ರೀಗಳವರು ತಮ್ಮ ಪೀಠದಿಂದ ಈ ಮಹಾಸಮಾರಂಭಕ್ಕಾಗಿ ಬೇಕಾಗುವ ಮುಖ್ಯ ಮುಖ್ಯವಾದ ಸಕಲಸಾಮಗ್ರಿಗಳನ್ನು ೧೬ ಗಾಡಿಗಳಲ್ಲಿ ತುಂಬಿಸಿ ಕಳುಹಿಸಿ ಕೊಟ್ಟಿದ್ದರಲ್ಲದೆ, ಉಳಿದ ಎಲ್ಲ ವಿಷಯಗಳಲ್ಲಿಯೂ ನಾನಾ ವಿಧವಾಗಿ ಸಹಾಯ ಮಾಡಿದರು. ಶ್ರೀ ರಂಭಾಪುರೀಪೀಠಕ್ಕೆ ಈ ಮಹನೀಯರು ಮಾಡಿದ ಮಹೋಪಕಾರ ಚಿರಸ್ಮರಣೀಯವಾಗಿದೆ.

ಭಯಂಕರವಾದ ಕಾನನದ ಮಧ್ಯದಲ್ಲಿದ್ದು ಅತ್ಯಂತಶೈಥಿಲ್ಯಾವಸ್ಥೆಯಿಂದ ಕೂಡಿದ್ದ ಈ ಧರ್ಮಪೀಠವು ಪಟ್ಟಾಧಿಕಾರ ಸಮಯದಲ್ಲಿ ಪಂಡಿತರ ಕಾರ್ಯಕುಶಲತೆಯಿಂದ, ಇಂದ್ರನ ನಂದನವನದಲ್ಲಿ ವಿಹರಿಸುತ್ತಿರುವಂತೆ ವಿರಾಜಿಸುತ್ತಿತ್ತು. ಮಠವನ್ನು ಶೃಂಗರಿಸುವುದಕ್ಕಾಗಿಯೇ ಪಂಡಿತರು ಬಹು ದೂರದೂರ ದೇಶಗಳಿಂದ ಅನೇಕ ಜನ ಪ್ರಸಿದ್ಧ ಚಿತ್ರಕಲಾಕುಶಲರನ್ನು ಒಟಮಾಡಿಕೊಂಡು, ಮಠದ ಸೌಂದರ್ಯವನ್ನು ವರ್ಣನಾತೀತವಾದುದನ್ನಾಗಿ ಮಾಡಿದ್ದರು. ಅಧಿಕಾರ ಸಮಾರಂಭಕ್ಕಾಗಿ ಆಗಮಿಸಿದ ಜನಗಳ ವ್ಯವಸ್ಥೆಯಂತೂ ಅನ್ಯಾದೃಶವಾಗಿತ್ತು. ಒಟ್ಟಿಗೆ ಪಂಡಿತರು ಏರ್ಪಡಿಸಿದ ಪಟ್ಟಾಧಿಕಾರದ ವೈಭವವನ್ನು ವರ್ಣಿಸಲು ಈ ಲೇಖನಿಯು ಎಂದೂ ಸಮರ್ಥವಾಗಲಾರದು. ಈ ರೀತಿಯಾಗಿ ಪಂಡಿತರು ವಿಶೇಷ ಕಷ್ಟಪಟ್ಟು ಅನಾಯಕವಾಗಿದ್ದ ಧರ್ಮಪೀಠವನ್ನು ಸನಾಯಕವನ್ನಾಗಿಮಾಡಿ, ಈ ಪೀಠದ ಯಶೋಧ್ವಜವು ದಶದಿಕ್ಕುಗಳಲ್ಲಿ ಮೆರೆಯುವಂತೆ ಮಾಡಿದರು.

ಅಧಿಕಾರವಾದ ಒಂದು ತಿಂಗಳ ಮೇಲೆ (ತಾ|| ೨೧-೧೨-೧೯೩೫ನೆಯ ದಿವಸ) ಪಂಡಿತರು ಮಠದ ಪೂರ್ವಪದ್ಧತಿಗನುಸಾರವಾಗಿ, ಶ್ರೀಗಳವರಿಂದ ಲಿಖಿಸಲ್ಪಟ್ಟ ಆಶೀರ್ವಾದರೂಪ ಶ್ರೀ ಮುಖವನ್ನು ಶ್ರೀಮನ್ಮಹಾರಾಜರವರಿಗೆ ಮೈಸೂರು ಅರಮನೆಯಲ್ಲಿ ಒಪ್ಪಿಸಿದರು. ಆಗ್ಗೆ ಮಹಾಪ್ರಭುಗಳವರು ಅಸಾಧಾರಣ ವೈಭವದಿಂದ ನೆರವೇರಿದ ಪೀಠಾಧಿಕಾರದ ಸಮಗ್ರ ವಿಷಯಗಳನ್ನು ಪಂಡಿತರ ಮುಖದಿಂದ ಅರ್ಧಘಂಟೆಯವರೆಗೆ ಕೇಳಿ ಪರಮಾನಂದವನ್ನು ಹೊಂದಿದ್ದಲ್ಲದೆ, ಆ ಪ್ರಾಚೀನ ಪೀಠದ ಪರಮಪವಿತ್ರ ಚರಿತ್ರವನ್ನು ಕೇಳಿ, ಪೀಠದ ವಿಷಯದಲ್ಲಿ ಅಸಾಧಾರಣ ಭಕ್ತಿಯುಳ್ಳವರಾದರು. ಅಲ್ಲದೆ ಶ್ರೀಗಳವರು ಮೈಸೂರು ರಾಜ್ಯದಲ್ಲಿ ಸಂಚರಿಸುವುದಕ್ಕಾಗಿ ವಿಶೇಷವಾದ ರಾಜಬಿರುದುಗಳನ್ನು ದಯಪಾಲಿಸಿ, ಆ ಪೀಠದ ವೈಭವವು

ಸರ್ವತ್ರ ಬೆಳಗುವಂತೆ ಮಾಡಿದರು. ವೀರಶೈವರಿಗೆ ಪರಮಪೂಜ್ಯವಾದೀ ಗುರುಪೀಠವನ್ನು ಜೀರ್ಣೋದ್ಧಾರಮಾಡಿದ ಧರ್ಮಪ್ರಭುಗಳವರಿಗೆ ಭರತ ಖಂಡದಲ್ಲಿರುವ ಇಡೀ ವೀರಶೈವ ಸಮಾಜವೇ ಚಿರಋಣಿಯಾಗಿರುವುದೆಂಬ ವಿಷಯವನ್ನು ಸಾರಿ ಸಾರಿ ಹೇಳಬಹುದಾಗಿದೆ.

ಶ್ರೀಜಗದ್ಗುರು ರಂಭಾಪುರೀ ಪೀಠವನ್ನು ಜೀರ್ಣೋದ್ಧಾರಮಾಡಿ ದಿಗಂತ ವಿಶ್ರಾಂತಕೀರ್ತಿಶಾಲಿಗಳಾಗಿರುವ ಮಹಾಪ್ರಭುಗಳವರು, ಆ ಮಹಾ ಪೀಠದರ್ಶನಾಪೇಕ್ಷಿಗಳಾಗಿ ಪರಮಪವಿತ್ರವಾದ ಪ್ರಜೋತ್ಪತ್ತಿನಾಮಸಂವ ತ್ಸರದ ಕಾರ್ತಿಕ ಶು|| ಪಂಚಮೀ ಸೋಮವಾರ ಶುಭದಿವಸ (ತಾರೀಖು ೩೦–೧೧–೧೯೩೧) ಶ್ರೀಜಗದ್ಗುರು ರಂಭಾಪುರೀ ಧರ್ಮಪೀಠಕ್ಕಾಗಮಿಸಿ ದರ್ಶನ ಮಾಡಿಕೊಂಡು, ಅಮೂಲ್ಯಗಳಾದ ಖಿಲ್ಲತ್ತುಗಳನ್ನೂ, ವಿಶೇಷ ಕಾಣಿಕೆಯನ್ನೂ ಸಮರ್ಪಿಸಿ, ತಮ್ಮ ನೈಜವಾದ ಭಕ್ತಿಭಾವವನ್ನು ವ್ಯಕ್ತ ಗೊಳಿಸಿದರು. ಈ ಸಮಯದಲ್ಲಿ ಪಂಡಿತರು ಮೊದಲೇ ಪೀಠಕ್ಕಾಗಮಿಸಿ ಸಕಲ ವಿಧವಾದ ರಾಜವ್ಯವಸ್ಥೆಯನ್ನು ಬಹುತೃಪ್ತಿಕರವಾಗಿ ಏರ್ಪಡಿಸಿದ್ದರು. ಒಟ್ಟಿಗೆ ಪಂಡಿತರು ಶ್ರೀಜಗದ್ಗುರು ರಂಭಾಪುರೀ ಧರ್ಮಪೀಠದ ಕೀರ್ತಿ ಲತೆಯು ವಿಶ್ವವ್ಯಾಪ್ತಿಯಾಗುವಂತೆ ಮಾಡಿದರು.

ಶ್ರೀಜಗದ್ಗುರು ರಂಭಾಪುರೀ ಪೀಠದ ಶ್ರೀಗಳವರು ಈಗ್ಗೆ ೧೧೨ ವರ್ಷಗಳ ಪೂರ್ವದಲ್ಲಿ ಮೈಸೂರು ರಾಜಧಾನಿಗೆ ಆಗಮಿಸಿ ರಾಜಗೌರವ ವನ್ನು ಪಡೆದಿದ್ದರಲ್ಲದೆ, ಇತ್ತೀಚೆಗೆ ಯಾವ ಶ್ರೀಗಳವರೂ ರಾಜಧಾನಿಗೆ ಆಗಮಿಸಿರಲಿಲ್ಲ. ಈ ವಿಷಯವನ್ನು ಪಂಡಿತರು ಪರ್ಯಾಲೋಚಿಸಿ, ತಮ್ಮ ಕಾಲದಲ್ಲಾದರೂ ಈಗಿನ ಜಗದ್ಗುರುಗಳವರನ್ನು ರಾಜಧಾನಿಗೆ ಸಕಲ ರಾಜಮರ್ಯಾದೆಗಳೊಡನೆ ಬರಮಾಡಿಕೊಳ್ಳಬೇಕೆಂದು ಸಂಕಲ್ಪಿಸಿ, ಈಬಗ್ಗೆ ಬಹುಯುಕ್ತಿಪ್ರಯುಕ್ತಿಗಳಿಂದ ಕಾರ್ಯವನ್ನು ಮಾಡಿದರು. ಈ ಕಾರ್ಯದಲ್ಲಿ ಅನಂತಾನಂತವಿಘ್ನಗಳು ಸಂಭವಿಸಿದವು. ಆದರೂ ಪಂಡಿತರು ಅವುಗಳಿಗೆಲ್ಲಾ ಭಯಪಡದೆ, ಅವುಗಳನ್ನು ಯಾವಯಾವ ರೀತಿಯಿಂದ ದೂರಮಾಡ ಬೇಕೋ ಆ ಆ ರೀತಿಯಿಂದ ದೂರಮಾಡಿ, ತಾವು ಕೈಗೊಂಡ ಕಾರ್ಯವನ್ನು ಸರ್ವತೋಮುಖವಾಗಿ ಜಯಶಾಲಿಯನ್ನಾಗಿ ಮಾಡಿದರು. ಶ್ರೀಮನ್ಮಹಾಪ್ರಭುಗಳವರ ಕೃಪಾಕಟಾಕ್ಷಕ್ಕೆ ಸಂಪೂರ್ಣಪಾತ್ರರಾಗಿದ್ದ ಕೈ|| ರಾಜಕವಿಭೂಷಣ ಎಚ್. ಲಿಂಗರಾಜ ಅರಸರವರು ಪಂಡಿತರಲ್ಲಿ

ನಿರತಿಶಯವಾದ ಪ್ರೇಮವನ್ನೂ ವಿಶ್ವಾಸವನ್ನೂ ಇಟ್ಟುಕೊಂಡಿದ್ದರು. ಆದುದರಿಂದ, ಅವರು ಪಂಡಿತರ ಅಭಿಪ್ರಾಯದ ಮೇರೆಗೆ ಮಹಾಪ್ರಭುಗಳವರಲ್ಲಿ ಸಕಲ ವಿಷಯಗಳನ್ನೂ ಬಿನ್ನವಿಸಿಕೊಂಡು, ಸಕಲ ರಾಜಮರ್ಯಾದೆಗಳು ದೊರೆಯುವಂತೆ ಏರ್ಪಡಿಸಿದರು. ರಾಜಧಾನಿಯಲ್ಲಿರುವ ಪ್ರಮುಖ ಭಕ್ತಮಂಡಳಿಯವರು ಪಂಡಿತರ ಅಭಿಪ್ರಾಯದ ಮೇರೆಗೆ ಅಹೋರಾತ್ರಿಯೆನ್ನದೆ ಕೆಲಸಮಾಡಿ, ಶ್ರೀಜಗದ್ಗುರುಗಳವರ ಮಹೋತ್ಸವದ ಸಿದ್ಧತೆಯನ್ನು ಬಹುತೃಪ್ತಿಕರವಾಗಿ ಮಾಡಿದ್ದರು. ರಾಜಧಾನಿಯಲ್ಲಿ ರಾಜಮರ್ಯಾದೆಗಳೊಡನೆ ಅದ್ಭುತವಾಗಿ ನೆರವೇರುವ ಈ ಗುರುಮಹೋತ್ಸವವನ್ನು ನೋಡುವುದಕ್ಕಾಗಿ ಭರತಖಂಡದ ನಾನಾ ಭಾಗಗಳಿಂದ ಅಗಣಿತಜನ ಭಕ್ತಮಾಹೇಶ್ವರರು ಆಗಮಿಸಿದ್ದರು. ಶ್ರೀಜಗದ್ಗುರುಗಳವರು ತಾರೀಖು ೨೩-೯-೧೯೩೪ ನೆಯ ಇಸ್ವಿ ಭಾನುವಾರ ಪ್ರಾತಃಕಾಲ ೯ ಘಂಟೆಗೆ ರಾಜಧಾನಿಗೆ ಬಿಜಮಾಡಿದರು. ಶ್ರೀಗಳವರ ಮಹೋತ್ಸವಕ್ಕಾಗಿ ಅರಮನೆಯಿಂದ ೨ ಆನೆಗಳು, ೧೧ ಕುದುರೆಗಳು, ೧೩ ಜನ ಬಾರ್‌ಸಿಪಾಯಿಗಳು, ಅವರ ಮೇಲ್ಪಟ್ಟ ಅಧಿಕಾರಿಗಳು, ೧೮ ಜನ ಬ್ಯಾಂಡಿನವರು, ತಾಸಾಮಾರ್ಕು-ವಾಲಗದವರು ೧೨ ಜನ ಸಾದಾಕಟ್ಟಿಗೆಯವರು, ೧೩ ಜನ ಬೆಳ್ಳಿಕಟ್ಟಿಗೆಯವರು, ೧೨ ಜನ ಹಸರುಕಟ್ಟಿಗೆಯವರು, ಹಗಲುದೀವಟಿಗೆ, ಛತ್ರಿ, ಚಾಮರ, ಚೌರಿ, ಮ್ಯಾನಾ ಇತ್ಯಾದಿ ರಾಜಮರ್ಯಾದೆಗಳನ್ನು ದಯಪಾಲಿಸಿದ್ದರಲ್ಲದೆ, ೧೧ ತೋಪುಗಳ ಘನವಾದ ಮರ್ಯಾದೆಯನ್ನೂ ದಯಪಾಲಿಸಿದ್ದರು. ಈ ವಿಧವಾದ ರಾಜವೈಭವದಿಂದ ಹೊರಟ ಶ್ರೀಜಗದ್ಗುರುಗಳವರ ಉತ್ಸವದ ಶೋಭೆಯು ಅನ್ಯಾದೃಶವಾಗಿತ್ತು. ನವರಾತ್ರಮಹೋತ್ಸವಕ್ಕೆ ಜನಸ್ತೋಮವು ಸಮ್ಮಿಲಿತವಾಗುವಂತೆ ಈ ಮಹೋತ್ಸವಕ್ಕಾದರೂ ಅಪಾರವಾದ ಜನಸ್ತೋಮವು ಸಮ್ಮಿಲಿತವಾಗಿತ್ತು. ಅರಮನೆಯ ಸಮೀಪದಲ್ಲಿರುವ ದೊಡ್ಡಗಡಿಯಾರದಹತ್ತರ ಉತ್ಸವವು ಬರುತ್ತಲೇ, ಗೌರವಾರ್ಥವಾಗಿ ೧೧ ತೋಪುಗಳು ಹಾರಿಸಲ್ಪಟ್ಟವು. ಈ ರೀತಿಯಾಗಿ ಜಗದಾಚಾರ್ಯರ ಮಹೋತ್ಸವವು ರಾಜಧಾನಿಯಲ್ಲಿ ಅಸಾಧಾರಣವೈಭವದೊಡನೆ ನೆರವೇರಿ ನಿಯಮಿತಸ್ಥಲಕ್ಕೆ ಬಂದು ತಲುಪಿತು. ಆ ದಿವಸ ರಾಜಧಾನಿಯಲ್ಲಿ ಎತ್ತ ನೋಡಿದತ್ತ ಆನಂದವೇ ಆನಂದವಾಗಿತ್ತು. ಇಂತಹ ಅದ್ಭುತಮಹೋತ್ಸ

ವವು ರಾಜಧಾನಿಯಲ್ಲಿ ಇಂದಿನವರೆಗೆ ಯಾವ ಮತದ ಗುರುಗಳದೂ ಆಗಿಲ್ಲ ವೆಂದು ಸಕಲಮತೀಯರೂ ತಮ್ಮ ಆನಂದವನ್ನು ವ್ಯಕ್ತಪಡಿಸಿದರು.

ಶ್ರೀಮನ್ಮಹಾರಾಜರವರು ತಾ॥ ೪-೧೦-೧೯೩೪ ನೆಯ ಗುರುವಾರ ದಿವಸ ಶ್ರೀಗಳವರನ್ನು ಮೇಲ್ಕಂಡ ಸಕಲರಾಜಮರ್ಯಾದೆಗಳೊಡನೆ ಸುವರ್ಣರಜತಾಂದೋಲಿಕಾಮಹೋತ್ಸವಪೂರ್ವಕವಾಗಿ ಅರಮನೆಗೆ ಬಿಜಯಮಾಡಿಸಿಕೊಂಡರು. ಅಂದಿನ ವೈಭವವನ್ನು ವರ್ಣಿಸಲು ಆದಿಶೇಷನೂ ಸಹ ಸಮರ್ಥನಾಗಲಾರನು. ಅರಮನೆಯ ಮುಂಭಾಗಕ್ಕೆ ಶ್ರೀಗಳವರ ಪಲ್ಲಕ್ಕಿಯು ಬಂದಕೂಡಲೇ, ಅರಮನೆಯ ಸೈನ್ಯದಿಂದಕೂಡಿದ ಸೈನ್ಯಾಧಿಕಾರಿಗಳಿಂದ ಮಹಾಗೌರವಸೂಚಕವಾದ "ಗಾರ್ಡ್ ಆಫ್ ಆನರ್" ಎಂಬ ಘನಗೌರವವು ಸಮರ್ಪಿಸಲ್ಪಟ್ಟಿತು. ಈ ಮಹಾಗೌರವವು ವೈಸ್ರಾಯರೇ ಮೊದಲಾದವರಿಗೆ ಸಲ್ಲತಕ್ಕ ಗೌರವವಾಗಿರುವುದು. ಇಂತಹ ಅಸಾಧಾರಣಗೌರವವನ್ನು ಸ್ವೀಕರಿಸಿ, ಶ್ರೀಗಳವರು ಅರಮನೆಯನ್ನು ಪ್ರವೇಶಿಸಿ, ಅನುಷ್ಠಾನಾದಿಗಳನ್ನು ತೀರಿಸಿಕೊಂಡಮೇಲೆ, ರಾಜಬಂಧುಗಳ ಸ್ತೋಮದಲ್ಲಿ ವಂದಿಮಾಗಧರ ಮಂಗಲಸ್ತುತಿಯೊಡನೆ, ಸಾಕ್ಷಾದ್ಧರ್ಮಾವತಾರಿಗಳೂ ರಾಜರ್ಷಿ ಪುಂಗವರೂ ಆದ ಶ್ರೀಮನ್ಮಹಾರಾಜರವರು ಮತ್ತು ಶ್ರೀಮದ್ಯುವರಾಜರವರು ಶ್ರೀಗಳವರಲ್ಲಿಗೆ ದಯಮಾಡಿಸಿ, ರಾಜಖಿಲ್ಲತ್ತುಗಳನ್ನೂ ಕಾಣಿಕೆಯನ್ನೂ ಸನ್ನಿಧಿಯಲ್ಲಿ ಸಮರ್ಪಿಸಿ, ಶ್ರೀಗಳವರಿಂದ ತೀರ್ಥಪ್ರಸಾದಗಳನ್ನು ಸ್ವೀಕರಿಸಿದರು. ಬಳಿಕ ಶ್ರೀಗಳವರು ಉಭಯಪ್ರಭುಗಳವರಿಗೂ ತಮ್ಮ ಪೀಠದ ವತಿಯಿಂದ ಮಹಾರಾಜ ಯೋಗ್ಯವಾದ ಖಿಲ್ಲತ್ತುಗಳನ್ನು ಆಶೀರ್ವದಿಸಿದರು. ಅಂದು ಮಹಾಪ್ರಭುಗಳವರಿಗುಂಟಾಗಿದ್ದ ಆನಂದವು ಅವರ್ಣನೀಯವಾದುದೆಂದು ಬರೆದರೆ ಅತಿಶಯೋಕ್ತಿಯೆನಿಸಲಾರದು. ಭರತಖಂಡ ವಿರಾಜಮಾನವಾದ ವೀರಶೈವ ಸಾಮ್ರಾಜ್ಯವೇ ಅಂದು ಆನಂದ ಸಾಗರದಲ್ಲಿ ಲೋಲಾಡುತ್ತಿತ್ತು. ಈ ಆನಂದ ಸಂದೋಹಕ್ಕೆಲ್ಲಾ ನಮ್ಮ ಚರಿತ್ರೆ ನಾಯಕರ ಪ್ರಯತ್ನ ವಿಶೇಷವೇ ಕಾರಣವೆನ್ನುವುದು ಇಡೀ ಜಗತ್ತಿಗೆಲ್ಲಾ ತಿಳಿದ ವಿಷಯವಾಗಿದೆ. ಈ ರೀತಿಯಾಗಿ ಪಂಡಿತರು ಶ್ರೀಮದ್ರಂಭಾಪುರೀ ಪೀಠದ ವಿಷಯದಲ್ಲಿ ಘನವಾದ ಸೇವೆಯನ್ನು ಮಾಡಿ ಶ್ರೀರೇಣುಕನ ಕೃಪೆಗೆ ಪಾತ್ರರಾಗಿ ತಮ್ಮ ಜನ್ಮವನ್ನು ಸಫಲಗೊಳಿಸಿಕೊಂಡರು.

## ಶ್ರೀಕಾಶೀಪೀಠ

ಉತ್ತರ ಹಿಂದುಸ್ಥಾನದಲ್ಲಿರುವ ಪರಮಪವಿತ್ರವಾದ ಗಂಗಾನದಿಯ ತೀರದಲ್ಲಿ ವಾರಣಾಶೀ (ಕಾಶೀ) ಕ್ಷೇತ್ರವು ಸಾಕ್ಷಾದ್ಭೂಕೈಲಾಸವೆನಿಸಿ ಕೊಂಡು ಶಾಸ್ತ್ರಪುರಾಣ ಪ್ರಸಿದ್ಧವಾಗಿರುತ್ತದೆ; ಈ ಕ್ಷೇತ್ರದಲ್ಲಿ ನಮ್ಮ ಪಂಚಪೀಠಗಳಲ್ಲೊಂದಾದ ಶ್ರೀಜಗದ್ಗುರು ವಿಶ್ವಾರಾಧ್ಯರ ಜ್ಞಾನಪೀಠವುಳ್ಳ ಜಂಗಮವಾಡಿಮಠವು ವಿರಾಜಿಸುತ್ತಿರುವುದು. ಈ ಮಠದಲ್ಲಿ ಶ್ರೀಜಗದ್ಗುರು ಗಳ ಆಶ್ರಯದಿಂದ ವಿದ್ಯಾರ್ಥಿಗಳಿಗೆ ಅನ್ನದಾನ, ವಿದ್ಯಾದಾನಗಳು ಪೂರ್ವ ಪರಂಪರೆಯಿಂದ ಬಂದಂಥವುಗಳಾಗಿರುತ್ತವೆ. ಈ ಜಂಗಮವಾಡಿ ಮಠದ ಲ್ಲಿಯೇ ಶ್ರೀಕಾಶೀನಾಥಶಾಸ್ತ್ರಿಗಳು ಸಂಸ್ಕೃತವಿದ್ಯಾಸಂಪಾದನೆ ಮಾಡಿಕೊಂಡು ಪಾಂಡಿತ್ಯಪ್ರತಿಭಾಶಾಲಿಗಳಾಗಿ ಕ್ರಿ. ಶ. ೧೯೧೮ ರಲ್ಲಿದ್ದ ಶ್ರೀಜಗದ್ಗುರು ಶಿವಲಿಂಗಶಿವಾಚಾರ್ಯರು ಅಪ್ಪಣೆಯನ್ನಿತ್ತಂತೆ ಶ್ರೀಜಗದ್ಗುರು ಪಂಚಾ ಚಾರ್ಯರ ಮೊದಲನೇ ಸಮ್ಮೇಲನವನ್ನು ಒಳ್ಳೇ ಪ್ರಯತ್ನಪೂರ್ವಕ ನೆರವೇರಿ ಸಿದರು. ಶ್ರೀಜಗದ್ಗುರು ಶಿವಲಿಂಗಸ್ವಾಮಿಗಳ ತರುವಾಯ ಶ್ರೀಜಗದ್ಗುರು ಪಂಚಾಕ್ಷರಶಿವಾಚಾರ್ಯರೆಂಬುವರು ಪಟ್ಟಕ್ಕೆ ಬಂದರು. ಈ ಜಗದ್ಗುರುಗಳ ಕಾಲದಲ್ಲಿ ಮಠಕ್ಕೆ ಅನೇಕ ವಿಪನ್ನಾವಸ್ಥೆಗಳು ಬಂದೊದಗಿದ್ದವು. ಅವುಗಳ ನಿವಾರಣೆಯ ಬಗ್ಗೆ ಪಂಡಿತ ಕಾಶೀನಾಥಶಾಸ್ತ್ರಿಗಳು ಬಹು ಪರಿಶ್ರಮಪಟ್ಟು ಯುಕ್ತಾಯುಕ್ತಿಗಳಿಂದ ಅವುಗಳನ್ನು ಪರಿಹರಿಸಿದರು.

ಮೈಸೂರು ಕರ್ನಾಟಕ ರತ್ನಸಿಂಹಾಸನಾಧೀಶ್ವರರೂ ಧರ್ಮದಯಾಳು ಗಳೂ, ಲಿಂಗಪೂಜಾಲೋಲರೂ, ಆಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರು ಶ್ರೀಕಾಶೀ ಜಂಗಮವಾಡಿ ಮಠದಲ್ಲಿ ಸೂರ್ಯಚಂದ್ರರಿರುವವರೆಗೂ ತಮ್ಮ ಹೆಸರಿನಿಂದ ಮಾಹೇಶ್ವರ ವಟುಗಳಿಗೆ ಅನ್ನದಾನ ನಡೆಯುತ್ತಿರಬೇಕೆಂದು ಶ್ರೀಶಾಲಿವಾಹನಶಕ ೧೭೬೭ನೆಯ ಪರಾಭವನಾಮಸಂವತ್ಸರ ಆಶಾಢ ಬ|| ೨ ಶುಕ್ರವಾರ (ತಾ|| ೧-೭-೧೮೪೬ ನೆಯ ಇಸವಿ) ದಿವಸ ಒಂದು ತಾಮ್ರ ಪಟದಲ್ಲಿ ದಾನಶಾಸನವನ್ನು ಬರೆದುಕೊಟ್ಟಂದಿನಿಂದ ಆ ಮಹಾರಾಜರ ಸತ್ಯ ಸಂಕಲ್ಪದಂತೆ ಮೈಸೂರು ಸರ್ಕಾರದವರು ಅವಿಚ್ಛಿನ್ನವಾಗಿ ನಡೆಸಿಕೊಂಡು ಬಂದವರಾಗಿದ್ದರು. ಶ್ರೀಜಗದ್ಗುರು ಶಿವಲಿಂಗಸ್ವಾಮಿಗಳು ಗತಿಸಿದನಂತರ ಪಟ್ಟಕ್ಕೆ ಬಂದಿದ್ದ ಶ್ರೀಜಗದ್ಗುರು ಪಂಚಾಕ್ಷರಶಿವಾಚಾರ್ಯರೆಂಬುವ ಮಹಾ

ಸ್ವಾಮಿಗಳವರ ಕಾಲದಲ್ಲಿ ಅದು ಕುಂಠಿತವಾಗಹತ್ತಿದ್ದರಿಂದ ಶ್ರೀಜಗದ್ಗುರುಗಳು ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರಿಗೆ ಮೈಸೂರು ಮಾಸಾಶನವು ಸಕ್ರಮವಾಗಿ ನಡೆಯುವಂತೆ ವ್ಯವಸ್ಥೆ ಮಾಡಿರೆಂದು ಅಪ್ಪಣೆಯನ್ನಿತ್ತರು. ಆಗ ಪಂಡಿತರು ಬಹಳ ಖಿನ್ನಹೃದಯರಾಗಿ ಆ ಬಗ್ಗೆ ಒಳ್ಳೇ ಶ್ರದ್ಧೆವಹಿಸಿ ಮೈಸೂರು ಸರ್ಕಾರದಲ್ಲಿ ಎರಡು ವರ್ಷಗಳವರೆಗೂ ಪತ್ರವ್ಯವಹಾರ ನಡೆಸಿ ಯಥಾಪ್ರಕಾರವಾಗಿ ಮೈಸೂರುಸರ್ಕಾರದಿಂದ ಕಾಶೀಜಂಗಮವಾಡಿ ಮಠಕ್ಕೆ ಸಲ್ಲುವ ವರ್ಷಾಶನವನ್ನು ಸರಳವಾಗಿ ನಡೆಯುವಂತೆ ವ್ಯವಸ್ಥೆಗೊಳಿಸಿದರು.

ಈ ನಮ್ಮ ಕಥಾನಾಯಕರು ಈ ಕಾಶೀಪೀಠದ ಶಾಖಾಸೂತ್ರಾನುವರ್ತಿಗಳಾಗಿರುವುದರಿಂದಲೂ ಈಪೀಠದಲ್ಲಿದ್ದು ಶ್ರೀಜಗದ್ಗುರು ವಿಶ್ವಾರಾಧ್ಯರ ಪ್ರಸಾದ ಸೇವನೆಯಿಂದ ವಿದ್ಯಾ ಸಂಪಾದಿಸಿಕೊಂಡಿದ್ದರಿಂದಲೂ, ಈ ತಮ್ಮ ಗುರುಪೀಠಕ್ಕೆ ಸ್ವಂತ ಸೇವೆ ಸಲ್ಲಿಸಬೇಕೆಂಬುವ ಸಂಕಲ್ಪವೊಂದು ಮನಸ್ಸಿನಲ್ಲಿ ಆವಿರ್ಭವಿಸಿಕೊಂಡಿತ್ತು. ಆ ಸಂಕಲ್ಪದಂತೆ ಸದಾ ಜಂಗಮವಾಡಿ ಮಠದಲ್ಲಿ ಪರಿಶೋಭಿಸುತ್ತಿರುವ ಕೈಲಾಸ ಮಂಟಪ (ಜ್ಞಾನಪೀಠ)ವನ್ನು ನಾನಾವಿಧಚಿತ್ರಮಯವಾದ ಸಂಗಮರವರಿ ಕಲ್ಲುಗಳಿಂದ ಶೃಂಗರಿಸಿ ನೋಡುವವರ ಕಣ್ಣುಗಳಿಗೆ ಪ್ರತ್ಯಕ್ಷ ಕೈಲಾಸ ಮಂಟಪವೋ ಏನೋ ಎಂಬುವಂತೆ ಮಾಡಿಸಿದರು. ಈ ಬಗ್ಗೆ ತಮ್ಮ ಭಕ್ತಿಯ ಶಿಲಾಲಿಪಿಯನ್ನು ಸ್ಥಾಪಿಸಿ ತಮ್ಮ ಗುರುಪೀಠದ ಸೇವೆಯಿಂದ ಶ್ರೀವಿಶ್ವಾರಾಧ್ಯರ ಪೂರ್ಣಕೃಪೆಗೆ ಪಾತ್ರರಾಗುವುದಲ್ಲದೆ ಪೀಠದಲ್ಲಿ ಕೀರ್ತಿಶೇಷರಾಗಿ ಉಳಿದಿದ್ದಾರೆಂಬುದರಲ್ಲಿ ಯಾವ ಸಂಶಯವಿಲ್ಲ.

## ಶ್ರೀಮದುಜ್ಜಯಿನೀಪೀಠ

ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರು, ಶ್ರೀ ಕಾಶೀಕ್ಷೇತ್ರದಿಂದ ಪಂಡಿತಪ್ರಮುಖರಾಗಿ ನಮ್ಮ ಕರ್ನಾಟಕ ದೇಶಕ್ಕೆ ಬಂದ ಸ್ವಲ್ಪದಿವಸಗಳಲ್ಲಿಯೇ ಉಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರರೂ, ಪರಮತಪಸ್ವಿಗಳೂ ಮತ್ತು ಮಹಾಮಹಿಮಾಶಾಲಿಗಳೂ-ಆದ ಶ್ರೀ ೧೦೮ ಜಗದ್ಗುರು ಸಿದ್ಧಲಿಂಗ ಶಿವಯೋಗೀಂದ್ರ ಮಹಾಸ್ವಾಮಿಗಳ ದಿವ್ಯಸನ್ನಿಧಿಗೆ ಬಂದು ಮಹಾಪಾದ ದರುಶನವನ್ನು ಪಡೆದುಕೊಂಡಾಕ್ಷಣವೇ ಪಂಡಿತರ ಹೃದಯವು

ಪರಿವರ್ತನೆಗೊಂಡಿತು ಎಂದು ಆ ಸನ್ನಿವೇಶದ ರಹಸ್ಯವನ್ನು ಹೇಳುತ್ತಾ ಸ್ವತಃ ಶಾಸ್ತ್ರಿಗಳು ಹೀಗೆಂದರು.—ಇಗೋ ಈ ಮಹಾತಪಸ್ವಿಗಳಲ್ಲಿ ತೋರುವ ಪಂಚಶಿಖೆಗಳೂ, ಸ್ವಚ್ಛಂದವಾದ ಭಸ್ಮತ್ರಿಪುಂಡ್ರಧಾರಣವೂ, ರುದ್ರಾಕ್ಷ ಮಾಲೆಗಳೂ, ದಂಡಕಮಂಡಲುಗಳೂ ಮತ್ತು ಅಪ್ರತಿಮ ಸೂರ್ಯ ತೇಜಸ್ಸಿನಂತೆ ಹೊಳೆಯುವ ಅಖಂಡ ಬ್ರಹ್ಮತೇಜಸ್ಸೂ, ಮಹಾ ತಪಃಪ್ರಭಾವವೂ, ಅಮೃತಮಯ ಕೃಪಾಕಟಾಕ್ಷವೀಕ್ಷಣೆಯೂ ಇವೆಲ್ಲವೂ ನನ್ನ ಸರ್ವೇಂದ್ರಿಯಗಳನ್ನು ಬಂಧಿಸಿಬಿಟ್ಟವು. ನಾನಿನ್ನು ಯಾವ ವಿಧದಿಂದಲೂ ಕದಲದಂತಾದೆನು. ಆಗಲಿ ಇದು ನನ್ನ ಆತ್ಮೋದ್ಧಾರದ ಸನ್ನಿವೇಶವು. ಮಹಾತ್ಮರಿಂದ ಈಡೇರುವ ನನ್ನ ಮಹತ್ಕಾಂಕ್ಷೆಗಳ ಶುಭೋದಯವು, ಎಂದು ಹರ್ಷಗೊಂಡರು.

ಹೀಗೆ ಹರ್ಷಮುಖರಾಗಿ ನಿಂತಿದ್ದ ಪಂಡಿತರ ಕುಶಲವಾರ್ತೆಯನ್ನು ಕೇಳಿ ಮಹಾಸ್ವಾಮಿಗಳು ಹತ್ತಿರ ಕೂಡ್ರಿಸಿಕೊಂಡು ನೀವು ಸದ್ಯಃ ಬಂದಿರುವ ಉದ್ದೇಶವೇನೆಂದು ಕೇಳಿದರು. ಶ್ರೀ ಶಾಸ್ತ್ರಿಗಳು ಶ್ರೀ ಜಗದ್ಗುರುಗಳಲ್ಲಿ ಆಶಾಭಾವನೆಯಿಂದ ತಮ್ಮ ಮನೆಯ ಬಗ್ಗೆ ಅಥವಾ ಜೀವನದ ಬಗ್ಗೆ ಯಾವ ಸುಖಾಪೇಕ್ಷೆಯನ್ನೂ ಬೇಡದೆ ಕೇವಲ ಸನಾತನ ವೀರಶೈವೋದ್ಧರಣಕಾರ್ಯಗಳನ್ನೇ ಈಡೇರಿಸಲು ಪ್ರಾರ್ಥಿಸಿಕೊಂಡವರಾದರು. ಈ ಎಲ್ಲಾ ವಿಷಯಗಳನ್ನು ಕೇಳಿ ಮಹದಾನಂದಭರಿತರಾದ ಮಹಾಸ್ವಾಮಿಗಳು ಶಾಸ್ತ್ರಿಗಳ ಬೆನ್ನುತಟ್ಟಿ ಶಿರಸ್ಸಿನಮೇಲೆ ತಮ್ಮ ಅಭಯಹಸ್ತವನ್ನಿಟ್ಟು, ಪಂಡಿತರೇ! ಶಿವಪ್ರೀತಿಕರವಾದ ನಿಮ್ಮ ಮಹತ್ಕಾರ್ಯಗಳು ಸನ್ನಿಧಿಯಿಂದಲೂ ಸಮಾಜದಿಂದಲೂ ಸರ್ವತ್ರ ದಿಗ್ವಿಜಯಹೊಂದುವವೆಂದು ಅಂತಃಕರಣಪೂರ್ವಕವಾಗಿ ಆಶೀರ್ವದಿಸಿದರು.

ಆಗ ಪಂಡಿತ ಕಾಶೀನಾಥರು ಮಹಾತಪಸ್ವಿಗಳ ಮಂಗಲಾಶೀರ್ವಾದದಿಂದ ಧನ್ಯನಾದೆನು. ಮಹನೀಯರ ಅಮೃತಹಸ್ತ ಸೋಂಕಿದೊಡನೆ ನನ್ನ ಹೃದಯದಲ್ಲಿ ಹೊಸ ಚೈತನ್ಯವು ಸ್ಫುಟವಾಗಿ ರೂಪುಗೊಂಡಿತು. ಅಪಾರ ಧೈರ್ಯೋತ್ಸಾಹಗಳು ಹೊರಸೂಸಹತ್ತಿದವು. ಧರ್ಮವಾತ್ಸಲ್ಯವು ಅಚಲವಾಗಿ ತೋರಹತ್ತಿತು. ಧರ್ಮದೇಳಿಗೆಗಾಗಿ ಹೊಸ ಹೊಸ ವಿಚಾರಗಳು ತರತರಂಗವಾಗಿ ಹುಟ್ಟಲಾರಂಭಿಸಿದವು. ಅಲ್ಪಮತಿಯಾದ ನಾನೆಲ್ಲಿ ನನ್ನಲ್ಲಿ

ಹುಟ್ಟುವ ಮಹತ್ಕಾರ್ಯಗಳೆಲ್ಲಿ? ಏನಿದು! ವಿಚಾರಮಾಡಿ ನೋಡಿದ್ದಾದರೆ ನಾನಿಂದು ಹೊಸ ಜನ್ಮವೆತ್ತಿದಂತಾಯಿತು. ಮಹಾತ್ಮರ ಕೃಪಾಕಟಾಕ್ಷ ವೀಕ್ಷಣವೇ ನನ್ನನ್ನು ಈ ರೀತಿಯಾಗಿ ಮಾಡಿತು. ಇದು ನನ್ನ ಸತ್ಯ ಹೋರಾಟದ ಶುಭಚಿನ್ಹೆ. ಇಂದಿನಿಂದ ಶ್ರೀಜಗದ್ಗುರು ಪಂಚಾಚಾರ್ಯರ ಪ್ರಭೆಯು ದಶದಿಕ್ಕುಗಳಲ್ಲಿ ಆವರಿಸುವ ಕಾಲವು ಸನ್ನಿಹಿತವಾದಂತಾಯಿತು. ಎಂಥಾ ಅಘಟಿತಘಟನಾಕಾರ್ಯಗಳು ಬಂದವುಗಳಾದರೂ ಅವು ಎಂದೂ ಕುಂಠಿತವಾಗಲಾರವು. ಮಹಾಚಾರ್ಯರ ಸೇವೆಗಾಗಿ ನನ್ನ ಜೀವನವನ್ನೇ ಮೀಸಲಾಗಿಡುವೆನು. ಇದೇ ನನ್ನ ನಿಜವಾದ ಪ್ರತಿಜ್ಞೆಯೆಂದು ಹರ್ಷೋದ್ಗಾರ ತೆಗೆದರು.

ಹೀಗೆ ಸದಾ ಧರ್ಮಪ್ರೇಮದಲ್ಲಿ ಇರತಕ್ಕಂಥಾ ಪಂಡಿತರ ಮನಸ್ಸು ಶ್ರೀಜಗದ್ಗುರು ಸಿದ್ಧಲಿಂಗಮಹಾಸ್ವಾಮಿಗಳವರ ಪಾದಕಮಲದಲ್ಲಿ ಭ್ರಮರ ರೂಪವಾಗಿ ನೆಲೆಗೊಂಡಿತು. ಪೂಜ್ಯ ಮಹಾಸ್ವಾಮಿಗಳ ತಪಃಪ್ರಭಾವವೇ ಪಂಡಿತರ ಮನಸ್ಸನ್ನಾಕರ್ಷಿಸಿಕೊಂಡಿತೆನ್ನುವಲ್ಲಿ ಯಾವ ಸಂದೇಹವೂ ಇಲ್ಲ. ಹೀಗೆ ಸದ್ಗುರುವಿನಡಿದಾವರೆಯಲ್ಲಿ ಕೆಲವುದಿವಸಗಳವರೆಗಿದ್ದು ದೇಶಸಂಚಾರ ದಲ್ಲಿ ಧರ್ಮೋಪದೇಶಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಬೇಕೆಂದು ಆಲೋಚನೆಮಾಡಿಕೊಂಡವರಾಗಿ ಗುರುಸನ್ನಿಧಿಗೆ ಬಿನ್ನೈಸಿಕೊಳ್ಳಬೇಕೆಂಬು ವಷ್ಟರಲ್ಲಿಯೇ ಶ್ರೀ ಮಹಾಪೂಜ್ಯಪಾದಂಗಳವರು ಶಾಸ್ತ್ರಿಗಳ ಪಾಂಡಿತ್ಯ ವಾಗ್ವೈಖರಿಯ ಧರ್ಮವಾತ್ಸಲ್ಯವನ್ನು ನೋಡಿ ಮನಸೋತು ಅಪ್ಪಾ ಕಾಶೀನಾಥಾ! ನೀನು ನಮ್ಮ ಸಂಸ್ಥಾನದಲ್ಲಿ ಕೆಲವು ದಿವಸ ಆಸ್ಥಾನ ಪಂಡಿತ ನಾಗಿದ್ದು ದೇಶಸಂಚಾರದಲ್ಲಿ ವೀರಶೈವರ ಸುಧಾರಣೆಗಾಗಿ ಶಾಸ್ತ್ರ ಸಿದ್ಧಾಂತೋಪದೇಶಗಳನ್ನುಮಾಡುವ ಕಾರ್ಯಕ್ರಮಗಳನ್ನು ಜರುಗಿಸ ಬೇಕೆಂದು ಅಪ್ಪಣೆಯನ್ನಿತ್ತರು.

ಪಂಡಿತರು ಮಹಾಸನ್ನಿಧಿಯ ಅಪ್ಪಣೆಯಮೇರೆಗೆ ಸಂಸ್ಥಾನದಲ್ಲಿ ಕೆಲವು ವರ್ಷಗಳವರೆಗಿದ್ದು ಸನ್ನಿಧಿಯೊಡನೆ ಕರ್ಣಾಟಕ, ಮಹಾರಾಷ್ಟ್ರ ಗಳಲ್ಲಿ ಸಂಚರಿಸಿ ವೀರಶೈವ ಸಿದ್ಧಾಂತೋಪದೇಶವನ್ನೂ, ಶ್ರೀಜಗದ್ಗುರು ಪಂಚಾಚಾರ್ಯರ ಪೂರ್ವೇತಿಹಾಸಗಳನ್ನೂ ಪ್ರಚಂಡ ವೀರವಾಣಿಯಿಂದ ಘೋಷಿಸಿ ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ವೀರಶೈವ ಸಮಾಜವನ್ನು ಒಳ್ಳೇ ಜಾಗ್ರತಗೊಳಿಸಿದರು.

ಮಹಾರಾಷ್ಟ್ರದೇಶದಲ್ಲಿ ಬಾರ್ಸಿ ಪಟ್ಟಣವು ವಿಶೇಷ ವೀರಶೈವ ವಸತಿಯಿಂದ ತುಂಬಿಕೊಂಡುದಾಗಿತ್ತು. ಅಲ್ಲಿ ಗುರುಸ್ಥಲಮಠಗಳು ವಿಶೇಷವಾಗಿದ್ದು ಭಕ್ತಮಾಹೇಶ್ವರರೆಲ್ಲರೂ ಆಗರ್ಭಶ್ರೀಮಂತರಾಗಿದ್ದರು. ಆ ಬಾರ್ಸಿ ಪಟ್ಟಣದಲ್ಲಿ ಶ್ರೀ|| ಷ|| ಬ್ರ|| ಪರಾಂಡಕರ್ ಮಠದ ರಾಚಲಿಂಗಸ್ವಾಮಿಗಳೆಂಬವರು ನಮ್ಮ ಕಥಾನಾಯಕರ ಮೇಲೆ ಒಳ್ಳೇ ಪ್ರೀತಿಯುಳ್ಳವರಾಗಿದ್ದುದರಿಂದ ಪಂಡಿತರನ್ನು ತಮ್ಮ ಬಾರ್ಸೀ ಪಟ್ಟಣಕ್ಕೆ ಪತ್ರದ್ವಾರಾ ಕ್ರಿ. ಶ. ೧೯೩೬ ರಲ್ಲಿ ಕರೆಯಿಸಿಕೊಂಡರು. ಉಭಯರ ಕುಶಲವಾರ್ತೆಗಳಿಂದ ಪರಸ್ಪರ ಸ್ನೇಹಾರ್ದಭಾವನೆಗಳು ಒಳ್ಳೇ ವಿಕಾಸಗೊಂಡವು. ಆಗ ಪರಾಂಡಕರ್ ಸ್ವಾಮಿಗಳವರು ತಮ್ಮ ಮಠದಲ್ಲಿ ವೀರಶೈವ ಸಭೆಯನ್ನು ಸೇರಿಸಿ ಪಂಡಿತರಿಂದ ವ್ಯಾಖ್ಯಾನ ಮಾಡಿಸಿದರು; ನಿಜವಾದ ವೀರಶೈವ ಧರ್ಮತತ್ವಗಳನ್ನರಿಯದ ಜನರು ಪಂಡಿತರ ಮುಖದಿಂದ ಸವಿಸ್ತಾರವಾಗಿ ಕೇಳಿಕೊಂಡು ಇವರ ಮೇಲೆ ಒಳ್ಳೇ ವಿಶ್ವಾಸ ಉಳ್ಳವರಾದರು. ಪಂಡಿತರು ಮಹಾರಾಷ್ಟ್ರ ಭಾಷಾಭಿಜ್ಞರಾಗಿದ್ದರಿಂದ ಸದರಿ ಭಾಷೆಯಲ್ಲಿ ಮತ್ತೊಮ್ಮೆ ಸಭೆ ಸೇರಿಸಿ ಶ್ರೀಜಗದ್ಗುರು ಪಂಚಾಚಾರ್ಯರು ಪರಮ ವೀರಶೈವ ಮತವನ್ನು ಸ್ಥಾಪಿಸಿ ಭಾಷ್ಯಾದಿ ಗ್ರಂಥಗಳನ್ನು ಬರೆದು ಆಸೇತುಹಿಮಾಚಲದ ವರೆಗೂ ವೀರಶೈವ ಧರ್ಮವನ್ನು ಪ್ರಚಾರಗೊಳಿಸಿದ್ದಕ್ಕೆ ಈಗಿರುವ ಶ್ರೀಕಾಶಿ, ಕೇದಾರ, ಶ್ರೀಶೈಲ, ಉಜ್ಜಯಿನಿ, ಬಾಳೇಹೊನ್ನೂರ ಪೀಠಗಳೇ ಸಾಕ್ಷಿಯಾಗಿವೆಯೆಂದು ಸಾರಿದರು. ಹೀಗೆ ಪೀಠಾಚಾರ್ಯರ ಪ್ರಚಾರವನ್ನು ಚೆನ್ನಾಗಿಮಾಡಿ ಸಕಲರಲ್ಲಿ ಮಠಾಚಾರ್ಯರ ಬಗ್ಗೆ ಭಕ್ತಿ ವಿಶ್ವಾಸಗಳನ್ನು ಒಳ್ಳೇ ದೃಢವಾಗಿ ಬಿಂಬಿಸುವಂತೆ ಮಾಡಿದರು. ಆ ಪಟ್ಟಣದ ಪ್ರಮುಖರು ತಮ್ಮ ದೇಶದಲ್ಲಿ ಪೀಠಾಚಾರ್ಯರ ಸಂಚಾರವನ್ನು ಅವಶ್ಯವಾಗಿ ಮಾಡಿಸಬೇಕೆಂದು ಬಹು ಒತ್ತಾಯಪೂರ್ವಕ ಪ್ರಾರ್ಥಿಸಿಕೊಂಡರು. ಪಂಡಿತರು ಅವರ ಪ್ರಾರ್ಥನೆಯನ್ನಂಗೀಕರಿಸಿ ತಥಾಸ್ತು! ಎಂದು ಸಮಾಧಾನ ಪಡಿಸಿ ಪಂಚಪೀಠಗಳಲ್ಲಿ ಪರಮ ತಪಸ್ವಿಗಳೂ ಸಾಕ್ಷಾತ್ ಶಿವಸ್ವರೂಪಿಗಳೂ ಆಗಿ ಶೋಭಿಸುವ ಶ್ರೀಮದುಜ್ಜಯಿನೀ ಸದ್ಧರ್ಮ ಪೀಠಾಧೀಶ್ವರರಾದ ಶ್ರೀ ೧೦೮ ಜಗದ್ಗುರು ಸಿದ್ಧಲಿಂಗ ಶಿವಯೋಗೀಂದ್ರ ಮಹಾಸ್ವಾಮಿಗಳವರನ್ನು ಮಹಾರಾಷ್ಟ್ರ ಪ್ರಾಂತಕ್ಕೆ ದಯಮಾಡಿಸಿಕೊಳ್ಳುವ ಬಗ್ಗೆ ಪ್ರಯತ್ನ ನಡೆಸಿದರು.

ಬಾರ್ಸಿ ಪಟ್ಟಣದಲ್ಲಿ ಆಗರ್ಭಶ್ರೀಮಂತರಾಗಿದ್ದ ಮ|| ರಾ|| ಅಣ್ಣಾ ಸಾಹೇಬ ಕಥಲೆ ಈ ಪ್ರಮುಖ ವ್ಯಕ್ತಿಗಳು ಪಂಡಿತರ ಅಭಿಪ್ರಾಯದಂತೆ ಉಜ್ಜಯಿನೀ ಶ್ರೀಜಗದ್ಗುರುಗಳವರನ್ನು ತಮ್ಮ ಗ್ರಾಮಕ್ಕೆ ಒಳ್ಳೇ ವೈಭವ ದೊಡನೆ ಬಿಜಮಾಡಿಸಿಕೊಳ್ಳಲು ಸಿದ್ಧರಾಗಿ ಉಜ್ಜಯಿನೀ ಗ್ರಾಮಕ್ಕೆ ಬಂದು ಶ್ರೀಗುರುಸಾರ್ವಭೌಮರ ಪಾದದರ್ಶನ ಪಡೆದುಕೊಂಡು ಬಿನ್ನವತ್ತಳೆ ಯನ್ನರ್ಪಿಸಿದರು. ಮಹಾಸ್ವಾಮಿಗಳವರು ಸದ್ಭಕ್ತನ ಬಿನ್ನದೋಲೆಯನ್ನು ಸ್ವೀಕರಿಸಿ ಮಹಾರಾಷ್ಟ್ರೀಯ ಭಕ್ತಮಂಡಲಿಯ ಭಕ್ತಿಭಾವನೆಗೆ ಮೆಚ್ಚುಗೆ ಯುಳ್ಳವರಾಗಿ ಬಾರ್ಸಿ ಪಟ್ಟಣಕ್ಕೆ ದಯಮಾಡಿಸಲು ಆನಂದದಿಂದ ಅಭಯ ವಚನವನ್ನಿತ್ತರು. ಅನಂತರ ಅಣ್ಣಾಸಾಹೇಬರು ಮಾರನೇದಿನ ಗುರುಗಳ ಆಶೀರ್ವಾದಪಡೆದುಕೊಂಡು ಒಳ್ಳೇ ಉಲ್ಲಾಸದಿಂದ ಬಾರ್ಸಿಗೆ ಬಂದು ತಿಂಗಳು ಮೊದಲೇ ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರನ್ನು ಕರೆಸಿಕೊಂಡವರಾದರು. ಪಂಡಿತರ ಅಭಿಮತದಂತೆ ಪಟ್ಟಣವನ್ನು ನಾನಾವಿಧವಾಗಿ ಶೃಂಗರಿಸಿ ಜಗದ್ಗುರುಗಳನ್ನು ಕ್ರಿ. ಶ. ೧೯೩೭ ರಲ್ಲಿ ಬಿಜಯಮಾಡಿಸಿಕೊಂಡು ಸಕಲ ವಾದ್ಯ ವೈಭವಗಳಿಂದಲೂ, ರಜತತಿರ್ಯಗಾಂದೋಲಿಕಾ, ಪಂಚಕಲಶ, ನಂದಿಧ್ವಜ, ಹಗಲು ದೀವಟಿಗೆ, ಶ್ವೇತಛತ್ರ ಮೊದಲಾದ ೭೨ ಬಿರುದಾವಲಿ ಗಳಿಂದ ರಾಜಬೀದಿಗಳಲ್ಲಿ ಶ್ರೀ ೧೦೮ ಜಗದ್ಗುರು ಸಿದ್ಧಲಿಂಗಮಹಾಸ್ವಾಮಿ ಗಳ ಮಹೋತ್ಸವವನ್ನು ಲಕ್ಷಾಂತರ ಜನರೊಡನೆ ನೆರವೇರಿಸಿ ಕೀರ್ತಿಶಾಲಿ ಗಳಾದರು.

ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರು ಉಜ್ಜಯಿನೀ ಪೀಠವನ್ನು ಅತ್ಯಂತ ಪ್ರಚಾರಕ್ಕೆ ತರಬೇಕೆಂದು ಸಂಸ್ಥಾನ ಮಹಾಮಠದ ಮಹಾದ್ವಾರದ ಚಿತ್ರವನ್ನೂ ಮಧ್ಯದಲ್ಲಿ ಶೋಭಿಸುವ ಸದ್ಧರ್ಮಸಿಂಹಾಸನ ಮಂಟಪದ ಕಟ್ಟಡದ ಚಿತ್ರವನ್ನೂ, ಶ್ರೀಜಗದ್ಗುರು ಸಿದ್ಧಲಿಂಗಮಹಾಸ್ವಾಮಿಗಳ ಭಾವ ಚಿತ್ರವನ್ನೂ ಇಡೀ ಜಗತ್ತಿನಲ್ಲಿ ಎಲ್ಲಾ ಕಡೆಗೂ ಪ್ರಚಾರಗೊಳಿಸಿದ್ದಕ್ಕೆ ಪ್ರತಿ ಯೊಬ್ಬ ವೀರಶೈವರು ಈ ಎಲ್ಲಾ ಚಿತ್ರಗಳನ್ನು ಕಂಡು ಪುಣ್ಯಕ್ಷೇತ್ರ ದರ್ಶನ ವನ್ನೂ ಪರಮಪೂಜ್ಯರ ದರ್ಶನವನ್ನೂ ಮಾಡಿಕೊಂಡು ಧನ್ಯರಾದರು. ಪೂಜ್ಯ ಶ್ರೀಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳವರ ಭಾವಚಿತ್ರವನ್ನೂ ಮತ್ತು ವೀರಶೈವ ಸಿದ್ಧಾಂತವನ್ನೂ ಉತ್ತರ ಭಾರತ ಗೋರಖ ಪುರದಲ್ಲಿ ಹೊರಡುತ್ತಿದ್ದ ಕಲ್ಯಾಣವೆಂಬ ಹಿಂದೀಮಾಸ ಪತ್ರಿಕೆಯ ಸಂತಾಂಕದಲ್ಲಿ

ಪ್ರಕಟಗೊಳಿಸಿ ಇಡೀ ಹಿಂದುಸ್ಥಾನದಲ್ಲಿ ಪ್ರಸಿದ್ಧಪಡಿಸಿದರು. ಸದರಿ ಸಂಸ್ಥಾನಮಠದಲ್ಲಿರುವ ಗ್ರಂಥಾಲಯವನ್ನು ಮತ್ತು ಶಿಲಾಲೇಖನಗಳನ್ನು ಚನ್ನಾಗಿ ಪರಿಶೀಲಿಸಿ ಮಠದ ಪ್ರಾಚೀನ ಇತಿಹಾಸಗಳನ್ನು ಹೊರಪಡಿಸಿದರು. ಸಂಸ್ಥಾನಮಠದ ಕಟ್ಟಡವು ಪುರಾತನಕಾಲದ್ದಾಗಿದ್ದರಿಂದ ಈಗಿನ ಹೊಸ ಶಿಲಾಕಟ್ಟಡವನ್ನು ನಿರ್ಮಿಸಲಿಕ್ಕಾಗಿ ಶ್ರೀಜಗದ್ಗುರುಗಳಲ್ಲಿ ಅರಿಕೆಮಾಡಿ ಕೊಂಡು ಪೂಜ್ಯಪಾದರಿಂದ ಮಹಾಮಠದ ಘನತರವಾದ ಕಟ್ಟಡವನ್ನಾ ರಂಭಿಸಿದರು. ಶ್ರೀಮಹಾಸ್ವಾಮಿಗಳವರಿಗೂ ಶ್ರೀಶಾಸ್ತ್ರಿಗಳವರಿಗೂ ಯಾವ ವಿಷಯಕ್ಕೂ ಭಿನ್ನಭಾವನೆಗಳಿದ್ದಿಲ್ಲ. ನೋಡಲಿಕ್ಕೆ ಈ ಉಭಯ ಶರೀರಗಳು ಭಿನ್ನವಾಗಿದ್ದವಲ್ಲದೆ ಮನೋಭಾವವು ಏಕರೂಪವನ್ನುಧರಿಸಿ ಸಮರಸವಾಗಿ ದ್ದಿತು. ಸನ್ನಿಧಿಯವರು ಕಾಶೀನಾಥಶಾಸ್ತ್ರಿಗಳೆಂದರೆ ಗುರುವರ್ಗದ ಸಿಂಹ ವೆಂದು ಹರ್ಷೋದ್ಗಾರಗಳನ್ನು ತೆಗೆಯುತ್ತಿದ್ದರು. ಶ್ರೀಶಾಸ್ತ್ರಿಗಳವರಾದರೂ, ಶ್ರೀಜಗದ್ಗುರು ಸಿದ್ಧಲಿಂಗಮಹಾಸ್ವಾಮಿಗಳೆಂದರೆ ತಮ್ಮ ತಂದೆ, ತಾಯಿ, ಬಂಧು, ಬಳಗವೆಂದೂ ಸಾಕ್ಷಾತ್ಪರಶಿವಸ್ವರೂಪಿಯಾದ ಸದ್ಗುರುವೆಂದೂ ಭಾವಿಸಿದ್ದರು. ಉಜ್ಜಯಿನೀಮಠವೆಂದರೆ ಅದೊಂದು ಅವರಿಗೆ ತವರು ಮನೆಯಾಗಿತ್ತು. ಅಂತೆಯೇ ಈ ಪೀಠದ ಉನ್ನತಿಯ ಬಗ್ಗೆ ಸರ್ವವಿಧ ದಿಂದಲೂ, ಹಗಲಿರುಳು ಪ್ರಯತ್ನಪಡುತ್ತಲಿದ್ದರು.

ಹೀಗಿರುತ್ತಿರಲು ಒಮ್ಮೆ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳವರು ಚಿತ್ರದುರ್ಗ ಜಿಲ್ಲೆಯಲ್ಲಿ ಸಂಚರಿಸುತ್ತ ಮಾಡ ನಾಯಕನಹಳ್ಳಿಯೆಂಬ ಗ್ರಾಮಕ್ಕೆ ಆಗಮಿಸಿ ಅಲ್ಲಿ ಬಂದು ೪-೬ ದಿವಸ ಗಳವರೆಗೆ ಪೂಜಾನುಷ್ಠಾನಗಳಿಂದಲೂ, ಯೋಗಾಭ್ಯಾಸದಿಂದಲೂ ಶಿಷ್ಯರಿಗೆ ಸದಾಚಾರಗಳನ್ನು ಬೋಧಿಸುತ್ತಿದ್ದರು. ಹೀಗಿರುತ್ತಿರಲು ಆಗ ಶೀತಕಾಲ ವಾಗಿದ್ದುದರಿಂದಲೂ, ಬ್ರಾಹ್ಮೀಮುಹೂರ್ತದಲ್ಲಿ ಎದ್ದು ಯೋಗಾಭ್ಯಾಸ ಮಾಡುತ್ತಿರುವುದರಿಂದಲೂ, ದೇಹದಲ್ಲಿ ಸ್ವಲ್ಪ ಅಸ್ವಸ್ಥವಾಯಿತು. ಅಲ್ಲಿಂದ ತುರುವನೂರಿಗೆ ಆಗಮಿಸಿದರು. ಅಲ್ಲಿ ಒಂದು ದಿನ ಯೋಗಾಭ್ಯಾಸ ಮಾಡು ತ್ತಿದ್ದು ಆಗ ಅಶಕ್ತಿಯಲ್ಲಿದ್ದ ಅಬಲಶರೀರವು ದೃಢವಾಗಿ ನಿಲ್ಲದೆ ಥಟ್ಟನೇ ನೆಲಕ್ಕೆ ಬಿದ್ದು ಸ್ಮೃತಿತಪ್ಪಿ ಯೋಗನಿದ್ರೆಯಲ್ಲಿರುವರೋ ಎಂಬುವ ಹಾಗೆ ತೋರಲಾರಂಭಿಸಿದರು. ಈ ರೀತಿಯಾದುದನ್ನು ಕಂಡು ಮುಖ್ಯಸ್ಥ ಜನರು

ಬಹಳ ಭಯಗ್ರಸ್ಥರಾಗಿ ಹೌಹಾರಿ ಶ್ರೀರಂಭಾಪುರೀ ಜಗದ್ಗುರುಗಳವರಿಗೂ, ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರಿಗೂ, ತಂತಿಮೂಲಕ ಏತದ್ವಿಷಯ ವನ್ನು ತಿಳಿಸಿದರು.

ಈ ಸಮಾಚಾರವನ್ನು ಕೇಳಿದ ಕೂಡಲೇ ರಂಭಾಪುರೀ ಜಗದ್ಗುರುಗಳವರು ಮತ್ತು ಪಂ|| ಕಾಶೀನಾಥಶಾಸ್ತ್ರಿಗಳವರು ಆಗಮಿಸಿ ಜಗದ್ಗುರುಗಳ ಮೌನಮೂರ್ತಸ್ವರೂಪವನ್ನು ಕಂಡು ಬಹಳ ವ್ಯಾಕುಲಹೃದಯರಾದರು. ಪಂಡಿತರು ಕಾರಿನಲ್ಲಿ ಬರುವಾಗ್ಗೆ ಮೈಸೂರಿನಲ್ಲಿದ್ದಂಥಾ ಸುಪ್ರಸಿದ್ಧ ಡಾಕ್ಟರರನ್ನು ಕರೆತಂದಿದ್ದರು. ಕೂಡಿದವರು ಮಹಾಸ್ವಾಮಿಗಳ ಪ್ರಕೃತಿಯನ್ನು ಸದರಿ ಡಾಕ್ಟರರವರಿಂದ ಪರೀಕ್ಷಿಸಿದರು. ಡಾಕ್ಟರರಿಗೆ ಇಂಥ ರೋಗವೆಂಬುದನ್ನು ಕಂಡುಹಿಡಿಯಲು ಸಾಧ್ಯವಾಗಲಿಲ್ಲ. ಹೀಗಾಗಿ ಯಾರಿಂದಲೂ ಔಷಧೋಪಚಾರಗಳು ಸಹ ನಡೆಯದಂತಾದವು. ಆ ಮಹನೀಯರು ಯಾವ ಕಾಲಕ್ಕೂ ಔಷಧಿಗಳನ್ನು ಸ್ವೀಕರಿಸಿದವರಾಗಿದ್ದಿಲ್ಲ; ಅಂತೆಯೇ ಈ ಅವಸಾನ ಕಾಲಕ್ಕೂ ಅವರ ಸಂಕಲ್ಪವು ನೆರವೇರಿತು. ಆಗ ಪಂಡಿತರು ಒಳ್ಳೇ ವಿಚಾರಶೀಲರಾಗಿ ಇನ್ನು ಈ ಪೂಜ್ಯರು ಇಹಲೋಕವನ್ನು ಬಿಟ್ಟು ಕೇವಲ ಲಿಂಗಾನಂದದಲ್ಲಿ ತಲ್ಲೀನರಾಗುವದು ಖಂಡಿತವೆಂದು ಭಾವಿಸಿ ಶ್ರೀಮದುಜ್ಜಯಿನೀ ಮಠಕ್ಕೆ ದಯಮಾಡಿಸಿಕೊಂಡು ಹೋಗಲು ವ್ಯವಸ್ಥೆಮಾಡಿ ಕೇದಾರ ಪೀಠದ ಚರವರ್ಯರಾದ ಶ್ರೀಜಗದ್ಗುರು ಚಿದ್ಘನಲಿಂಗಮಹಾಸ್ವಾಮಿಗಳನ್ನು ಸನ್ನಿಧಿ ಜೊತೆಗೆ ಮೋಟಾರ್‌ಕಾರಿನಲ್ಲಿ ಪ್ರಯಾಣಮಾಡಿಸಿದರು. ಪೀಠವನ್ನು ತಲ್ಪಿದಕೂಡಲೇ ಯೋಗನಿದ್ರೆಯಲ್ಲಿದ್ದ ಶ್ರೀಸಿದ್ಧಲಿಂಗಮಹಾಸ್ವಾಮಿಗಳವರು ಹಾಲಿನಲ್ಲಿ ಹಾಲು, ನೀರಿನಲ್ಲಿ ನೀರು ಬೆರೆದಂತೆ ಆ ಪರಬ್ರಹ್ಮಲಿಂಗದಲ್ಲಿ ಲೀನರಾದರು (ಕ್ರಿ.ಶ. ೧೨-೧-೧೯೩೬). ಅಂದು ಯುವ ಸಂ|| ಪುಷ್ಯ ಬಹುಳ ೪ ಆದಿವಾರ ಸಂಧ್ಯಾಕಾಲವಾಗಿತ್ತು.

ಶ್ರೀ ಮಹಾಪೂಜ್ಯಪಾದರವರು ತಮ್ಮ ಶಿಷ್ಯಕೋಟಿಯನ್ನು ಬಿಟ್ಟು ಗತಿಸಿರುವ ಈ ಅಪಾರದುಃಖದಲ್ಲಿ ಪಂಡಿತರನ್ನು ಬಿಟ್ಟು ಪರಶಿವನಲ್ಲಿ ಸಮರಸ ಹೊಂದಿರುವುದನ್ನು ನೋಡಿದರೆ ಕರುವನ್ನು ಬಿಟ್ಟು ತಾಯಿ ಅಗಲಿದಂತಾಯಿತು. ಅದರಿಂದ ಪೌರ್ಣಿಮೆಯ ಚಂದ್ರನು ಕಳಚಿಬಿದ್ದರೆ ಹೇಗೆ ದಿಕ್ಕು ತೋಚದಂತಾಗುವುದೋ ಹಾಗೆ ಪಂಡಿತರಿಗೆ ದಿಗ್ಭ್ರಮೆಯುಂಟಾಯಿತು. ವ್ಯಸನವು ಮೇರೆದಪ್ಪಿತು. ಅವರ ಕಣ್ಣುಗಳಲ್ಲಿ ಅವಿಚ್ಛಿನ್ನವಾಗಿ ಹರಿಯುತ್ತಿದ್ದ

ಅಶ್ರುಧಾರೆಯು ಅಲ್ಲಿ ನೆರೆದಿದ್ದ ಅಸಂಖ್ಯಾತಜನರ ಹೃದಯವನ್ನು ತಲ್ಲಣ ಗೊಳಿಸಿತು. ಅಂದಿನ ಅವರಶೋಕದೃಶ್ಯವು ಕಲ್ಲುಹೃದಯವನ್ನೂ ಸಹ ಕರ ಗಿಸುವಂಥಾದ್ದಾಗಿತ್ತು. ಇಂತಹ ಸಂತಾಪಸಮಯದಲ್ಲಿದ್ದ ಪಂಡಿತರು ತಮ್ಮ ದುಃಖೋದ್ಗಾರವನ್ನು ಆದಷ್ಟು ಅಂತರಂಗದಲ್ಲಿಯೇ ಶಮನಮಾಡಿಕೊಂಡು ಕ್ರಿಯಾಸಮಾಧಿಕಾರ್ಯವನ್ನು ಶಾಸ್ತ್ರೋಕ್ತವಾಗಿ ನಡೆಸಿ ರಂಭಾಪುರೀ ಜಗ ದ್ಗುರುಗಳಿಂದ ಪೂರೈಸಿದರು. ಮಾರನೇ ದಿವಸ ಸದರಿ ಮಠದಲ್ಲಿಯೇ ಸಭೆ ಸೇರಿಸಿ ದುಃಖಪ್ರದರ್ಶನಮಾಡಿ ಮಹಿಮರ ಗುಣಗಾನಗಳನ್ನು ಪಂಡಿತರು ಕಣ್ಣೀರಿನಿಂದ ನೆರವೇರಿಸಿದರು. ನಂತರ ಪ್ರಾಂತಿಕ ವೀರಶೈವಸಭೆಯನ್ನು ೮ ದಿವಸದಲ್ಲಿ ಕರೆದರು. ಶ್ರೀ ಬಾಳೇಹೊನ್ನೂರು ವೀರಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಶಿವಾನಂದರಾಜೇಂದ್ರ ಮಹಾಸ್ವಾಮಿಗಳ ಮತ್ತು ಶ್ರೀಹಿಮವತ್ಕೇದಾರ ವೈರಾಗ್ಯಸಿಂಹಾಸನಾಧೀಶ್ವರ ಶ್ರೀ ೧೦೮ ಜಗದ್ಗುರು ಚರವರ್ಯ ಚಿದ್ಘನಲಿಂಗಶಿವಯೋಗಿಗಳ ದಿವ್ಯನೇತೃತ್ವದಲ್ಲಿ ಅನಾಥ ವಾದ ಸದ್ಧರ್ಮಪೀಠವನ್ನು ಪುನಃ ಶೀಘ್ರದಲ್ಲಿಯೇ ಸನಾಥಪೀಠವನ್ನಾಗಿ ಮಾಡಲು ಯೋಗ್ಯವಟುಚುನಾವಣೆಯ ಕಾರ್ಯವನ್ನು ಪ್ರಾರಂಭಿಸಿದರು. ಆಗ್ಗೆ ಎಷ್ಟು ತೊಂದರೆಗಳು ಬಂದೊದಗಿದರೂ ಪಂಡಿತರು ಅವುಗಳನ್ನೆಲ್ಲ ತಮ್ಮ ಕುಶಲಾಗ್ರಬುದ್ಧಿಯಿಂದ ದೂರಮಾಡಿ ಸಕಲ ಜನರ ಸಮ್ಮತಿಯಂತೆ ಆನೇಸಿದ್ಧಾಪುರ ಮಠಾಧ್ಯಕ್ಷರಾಗಿದ್ದ ಶ್ರೀ॥ ಷ॥ ಬ್ರ॥ ತ್ರಿಲೋಚನಶಿವಾಚಾರ್ಯ ರೆಂಬುವ ಸಲಕ್ಷಣಸಂಪನ್ನರನ್ನು ಉತ್ತರಾಧಿಕಾರಕ್ಕೆ ನಿರ್ಧರಿಸಿದರು. ಪಂಡಿತರುಮುಂದಿನ ಪಟ್ಟಾಭಿಷೇಕಮಹಾಕಾರ್ಯದ ಸಮಸ್ತಸೂತ್ರಗಳನ್ನೆಲ್ಲ ತಾವೇ ನಿರ್ವಹಿಸಿಕೊಂಡು ಕೇವಲ ೮ ದಿವಸಗಳಲ್ಲಿಯೇ ಸಕಲ ಸಾಮಗ್ರಿ ಗಳನ್ನು ಸಿದ್ಧಪಡಿಸಿ, ಮಠವನ್ನು ಸುಣ್ಣಬಣ್ಣಗಳಿಂದಲಂಕರಿಸಿ ಶಾಸ್ತ್ರೋಕ್ತ ವಾಗಿ ಯುವನಾಮಸಂವತ್ಸರದ ಮಾಘ ಶು॥ ೧೦ (ತಾ॥ ೨-೨-೧೯೩೬)ನೇ ಗುರುವಾರ ದಿವಸ ಪ್ರಾತಃಕಾಲ ೮ ಘಂಟೆಗೆ ಶುಭಮುಹೂರ್ತದಲ್ಲಿ ಆನೆಸಿದ್ಧಾ ಪುರದ ಶ್ರೀಗಳಿಗೆ ರಂಭಾಪುರೀ ಜಗದ್ಗುರು ಶಿವಾನಂದರಾಜೇಂದ್ರಶಿವಾಚಾರ್ಯ ರಿಂದಲೂ, ಶ್ರೀಮದೇಕೋರಾಮವೈರಾಗ್ಯಚರಪೀಠಾಧೀಶ್ವರ ಜಗದ್ಗುರು ಚಿದ್ಘನಲಿಂಗಶಿವಯೋಗೀಂದ್ರರಿಂದಲೂ, ಒಳ್ಳೇ ವಿಜೃಂಭಣೆಯಿಂದ ಪಟ್ಟಾ ಧಿಕಾರಮಹೋತ್ಸವವನ್ನು ನೆರವೇರಿಸಿದವರಾದರು. ಸದರೀ ಸದ್ಧರ್ಮ ಪೀಠಕ್ಕೆ ನೂತನಾಧಿಕಾರಿಗಳಾಗಿ ಬಂದ ಶ್ರೀಗಳಿಗೆ ಶ್ರೀ ೧೦೮ ಜಗದ್ಗುರು

ಸಿದ್ಧೇಶ್ವರಶಿವಾಚಾರ್ಯಮಹಾಸ್ವಾಮಿಗಳೆಂಬ ಪ್ರಸಿದ್ಧನಾಮವು ಸ್ವೀಕೃತವಾಯಿತು. ಆಗ ಪಂಡಿತರು ಪೀಠೋದ್ಧಾರದ ಬಗ್ಗೆ ಅನೇಕ ಮಹದ್ವಿಷಯಗಳನ್ನು ತೋರಿಸಿಕೊಟ್ಟು ಮೈಸೂರಿಗೆ ಪ್ರಯಾಣಮಾಡಿದರು. ಒಟ್ಟಿನಲ್ಲಿ ನಮ್ಮ ಕಥಾನಾಯಕರು ಉಜ್ಜಯಿನೀಪೀಠದ ಬಗ್ಗೆ ಅವಿಶ್ರಾಂತವಾಗಿ ದುಡಿದು ತಮ್ಮ ನೈಜವಾದ ಭಕ್ತಿಯನ್ನು ಸಲ್ಲಿಸಿ ಶ್ರೀದಾರುಕಾಚಾರ್ಯರ ಕೃಪೆಗೆ ಪಾತ್ರರಾಗಿರುತ್ತಾರೆಂದು ಹೇಳುವಲ್ಲಿ ಯಾವ ಸಂದೇಹವಿಲ್ಲ.

## ಶ್ರೀಶೈಲಪೀಠ

ಪೂರ್ವಘಟ್ಟದ ಎತ್ತರವಾದ ಪರ್ವತಶ್ರೇಣಿಯಲ್ಲಿ ವಿರಾಜಿಸುತ್ತಿರುವ ಶ್ರೀಶೈಲಕ್ಷೇತ್ರವು ವೀರಶೈವಮತಸ್ಥಾಪಕರಾದ ಶ್ರೀಜಗದ್ಗುರು ಪಂಚಾಚಾರ್ಯರಲ್ಲೊಬ್ಬರಾದ ಪಂಡಿತಾರಾಧ್ಯರ ಪೀಠವನ್ನೊಳಗೊಂಡು ಸೂರ್ಯಸಿಂಹಾಸನಮಠವೆಂದು ಪ್ರಖ್ಯಾತಿಗೊಂಡಿರುತ್ತದೆ. ಇಲ್ಲಿಯೇ ದ್ವಾದಶಜ್ಯೋತಿರ್ಲಿಂಗಗಳಲ್ಲಿ ಒಂದಾದ ಶ್ರೀಮಲ್ಲಿಕಾರ್ಜುನ ಮಹಾಲಿಂಗವೂ, ಪರಿಶೋಭಿಸುತ್ತಿದ್ದು ಪ್ರತಿವರ್ಷ ಮಾಘ ಬಹುಳ ೧೪ (ಶಿವರಾತ್ರಿ) ದಿವಸ ಶ್ರೀಜಗದ್ಗುರು ಪಂಡಿತಾರಾಧ್ಯರ ಜಯಂತಿಮಹೋತ್ಸವದೊಡನೆ ಜ್ಯೋತಿರ್ಲಿಂಗದ ಉತ್ಸವವೂ ಸಹ ವಿಶೇಷ ವೈಭವದಿಂದ ನೆರವೇರುವುದು. ಈ ಶ್ರೀಶೈಲದೇವಸ್ಥಾನ ಹಾಗು ಸೂರ್ಯಸಿಂಹಾಸನಮಠಗಳು ಪ್ರಾಚೀನ ಕಾಲದಿಂದ ಬಂದವುಗಳಾಗಿದ್ದು ಪಂಚಸಿಂಹಾಸನಗಳ ಪರಂಪರಾಗತ ಪದ್ಧತಿಯಂತೆ ಇಲ್ಲಿಯೂ ಜಗದ್ಗುರು ಪಂಡಿತಾರಾಧ್ಯರ ಪರಂಪರೆಯು ಬಂದಿರುತ್ತದೆ. ಪಂಡಿತರ ಕಾಲದಲ್ಲಿ ಅವರಂತೆ ಈ ಪೀಠಾರೋಹಣಮಾಡಿದ್ದ ಶ್ರೀಜಗದ್ಗುರು ನಾಗಲೋಟಿಭಿಕ್ಷಾವರ್ತಿ ಮಹಾಸ್ವಾಮಿಗಳು ತಮ್ಮ ಶ್ರೀಶೈಲಪೀಠಕ್ಕೆ ಸೇರಿರುವ ಗುಂತಕಲ್ಲ ಮಠದಲ್ಲಿ ವಾಸವಾಗಿದ್ದರು. ಬಹುಕಾಲದಿಂದಲೂ ಪೀಠದ ಆಡಳಿತವು ಬಹಳ ಬಡತನದಲ್ಲಿ ಬಂದದ್ದಾಗಿತ್ತು. ಆದುದರಿಂದ ವೃದ್ಧಾವಸ್ಥೆಯಲ್ಲಿದ್ದ ಶ್ರೀಭಿಕ್ಷಾವರ್ತಿಮಹಾಸ್ವಾಮಿಗಳು ಪೀಠದ ಏಳಿಗೆಗಾಗಿ ತಮ್ಮ ಉತ್ತರಾಧಿಕಾರಕ್ಕೆ ಒಳ್ಳೆ ವ್ಯಕ್ತಿಯನ್ನು ಶೋಧಿಸಿ ಕೊಡುವಂತೆ ಉಜ್ಜಯಿನೀ ಜಗದ್ಗುರು ಶ್ರೀಸಿದ್ಧಲಿಂಗಶಿವಯೋಗಿಗಳಿಗೂ ಕಾಶೀನಾಥಶಾಸ್ತ್ರಿಗಳಿಗೂ ಮೇಲಿಂದ ಮೇಲೆ ತಿಳಿಸುತ್ತಿದ್ದರು. ಹೀಗೆ

ಪಂಡಿತರಲ್ಲಿ ವಿಶ್ವಾಸವಾಗಿದ್ದ ಶ್ರೀಭಿಕ್ಷಾವರ್ತಿಮಹಾಸ್ವಾಮಿಗಳವರು ಅವರ ಆದೇಶದಂತೆ ೧೯೧೧ರಲ್ಲಿ ಕಾಶೀ ಜಂಗಮವಾಡಿಮಠದೊಳಗೆ ನೆರವೇರಿದ ಪಂಚಾಚಾರ್ಯರ ಸಮ್ಮೇಲನಕ್ಕೆ ಆಗಮಿಸಿ ಲಕ್ಷಾಂತರ ಭಕ್ತಸಮೂಹಕ್ಕೆ ದರ್ಶನ ಕೊಟ್ಟು ಪುನಃ ಗುಂತಕಲ್ಲಿಗೆ ದಯಮಾಡಿಸಿದರು. ಪುನಃ ಬೀರೂರಿನಲ್ಲಿ ನಡೆದ ಅ॥ ಭಾ॥ ವೀರಶೈವ ಮಹಾಸಭೆಗೆ ದಯಮಾಡಿಸಿ ಪಂಡಿತರ ಉದ್ದೇಶಗಳನ್ನು ಸಫಲಗೊಳಿಸಿದರು. ಹೀಗೆ ಜಗದ್ಗುರುಗಳು ಪಂಡಿತರಲ್ಲಿ ಹೆಚ್ಚಾಗಿ ವಿಶ್ವಾಸವಿಟ್ಟುದರಿಂದಲೇ ಈ ಪೀಠದ ಉತ್ತರೋತ್ತರ ಅಭಿವೃದ್ಧಿಯ ಸಲುವಾಗಿ ಕಾಶೀನಾಥರು ಹಗಲಿರುಳು ಆಲೋಚಿಸುತ್ತಿದ್ದರು.

ಇಷ್ಟರಲ್ಲಿ ಇದೇ ಶ್ರೀಶೈಲಪೀಠದ ಶಾಖಾನುವರ್ತಿಗಳಾದ ಧಾರವಾಡ ಜಿಲ್ಲಾ ಮುದೇನೂರು ಮಠದ ಶ್ರೀ ವಾಗೀಶಶಿವಾಚಾರ್ಯರು ವಿದ್ಯಾವಂತರೂ ಗುರುವಂಶಸಂಜಾತರೂ ಸುರೂಪಸುಲಕ್ಷಣಾನ್ವಿತರೂ ಇರುವರೆಂಬ ವಾರ್ತೆಯು ಉಜ್ಜಯಿನೀ ಜಗದ್ಗುರುಗಳಿಗೂ ಪಂಡಿತರಿಗೂ ಗೊತ್ತಾಯಿತು. ಆಗ ಪಂಡಿತರು ಮೈಸೂರಿನಲ್ಲಿ ವಾಸವಾಗಿದ್ದರು. ಅವರನ್ನು ಅಲ್ಲಿಗೆ ಕರೆಯಿಸಿಕೊಂಡು ಪರೀಕ್ಷಿಸಲಾಗಿ ಶ್ರೀಶೈಲಪೀಠಕ್ಕೆ ಯೋಗ್ಯರಾಗುತ್ತಾರೆಂಬುದು ಗೊತ್ತಾಯಿತು. ಕೂಡಲೆ ಮಹಾಸನ್ನಿಧಿಗೆ ಈ ವಿಷಯವನ್ನು ತಿಳಿಸಲು ಅವರು ಶ್ರೀ ವಾಗೀಶರನ್ನು ಕಳಿಸಿಕೊಡುವಂತೆ ಆಜ್ಞಾಪಿಸಿದರು. ಆ ಪ್ರಕಾರ ಶ್ರೀವಾಗೀಶರು ಶ್ರೀಶಾಸ್ತ್ರಿಗಳವರ ಅನುಮತಿಯಂತೆ ಮೊದಲು ಉಜ್ಜಯಿನಿಗೂ ಅಲ್ಲಿಂದ ಗುಂತಕಲ್ಲಿಗೂ ಹೋದರು. ಆಗ ಉಜ್ಜಯಿನೀ ಜಗದ್ಗುರುಗಳು ಗುಂತಕಲ್ಲಿಗೆ ಹೋಗಿ ಭಿಕ್ಷಾವರ್ತಿ ಮಹಾಸ್ವಾಮಿಗಳವರೊಡನೆ ಆಲೋಚಿಸಿದಾಗ ಅವರು ವಾಗೀಶರನ್ನು ನೋಡಿ ಆನಂದಪಟ್ಟು ಆಗಬಹುದು; ಆದರೆ ಇನ್ನೂ ಕೆಲಕಾಲ ಕಾಶಿಗೆ ಹೋಗಿ ಹೆಚ್ಚಿನ ವಿದ್ಯಾಭ್ಯಾಸ ಮಾಡಲೆಂದು ಅಪ್ಪಣೆ ಕೊಡಿಸಿದರು. ಆಗ ಉಜ್ಜಯಿನಿ ಜಗದ್ಗುರುಗಳು ಶ್ರೀವಾಗೀಶರನ್ನು ಸಂಗಡ ಕರೆದುಕೊಂಡು ಕಾಶೀನಾಥಶಾಸ್ತ್ರಿಗಳವರ ಸಾಹಸದ ಪರಿಣಾಮವಾಗಿ ಮಹಾರಾಷ್ಟ್ರ ಪ್ರಾಂತದಲ್ಲಿ ಸರ್ಕೀಟಿಗೆ ಹೊರಟರು. ಸನ್ನಿಧಿಯ ಸವಾರಿಯು ಬಾರ್ಶಿಗೆ ಮುಟ್ಟುವುದರೊಳಗಾಗಿ ಪಂಡಿತರು ಅಲ್ಲಿಗೆ ಹೋಗಿ ವ್ಯವಸ್ಥೆ ಮಾಡಿ ಆ ನಾಡಿನಲ್ಲಿ ಭಾಷಣ ಮಾಡಲಿಕ್ಕೆ ಶ್ರೀವಾಗೀಶರಿಗೆ ಉತ್ತೇಜನಕೊಟ್ಟರು. ಪಂಡಿತರ ಬಲದಿಂದಲೂ

ಉಜ್ಜಯಿನೀ ಜಗದ್ಗುರುಗಳವರ ಆಶೀರ್ವಾದದಿಂದಲೂ ನಾಗಲೋಟಿ ಭಿಕ್ಷಾವರ್ತಿ ಮಹಾಸ್ವಾಮಿಗಳ ಕೃಪಾಕಟಾಕ್ಷದಿಂದಲೂ ಅಲ್ಲಿಯ ಜನತೆಯ ಭಕ್ತಿವಿಶ್ವಾಸಗಳನ್ನು ಗಳಿಸಿದ ವಾಗೀಶರು ಅಲ್ಲಿಂದ ಹಾಗೇ ಕಾಶಿಗೆಹೋಗಿ ಹೆಚ್ಚಿನ ವಿದ್ಯೆಗಳನ್ನು ಸಂಪಾದಿಸಿ ಮರಳಿ ದೇಶಕ್ಕೆ ಬಂದರು. ಎಂದಿನಂತೆ ಶ್ರೀಶೈಲಸೂರ್ಯಸಿಂಹಾಸನದ ಪಟ್ಟಾಧಿಕಾರವು ಇವರನ್ನು ಕಾಯ್ದು ಕೊಂಡಿತ್ತು.

ಅದೇ ಸಮಯಕ್ಕೆ ನಾಗಲೋಟಿ ಭಿಕ್ಷಾವರ್ತಿಸ್ವಾಮಿಗಳಿಗೆ ವಿಶೇಷ ಕಾಯಿಲೆಯಾಗಿದ್ದುದರಿಂದ ಆದಷ್ಟು ಜಾಗ್ರತೆ ಪಟ್ಟಾಧಿಕಾರ ಮಹೋತ್ಸವವನ್ನು ಮುಗಿಸಿಬಿಡಬೇಕೆಂಬ ಮಹಾಸನ್ನಿಧಿಯ ಅಪೇಕ್ಷೆ ಯಂತೆ ಗುಂತಕಲ್ಲ ಹಾಗು ಸಕಲ ವೀರಶೈವಮಹಾಜನಗಳ ಕೋರಿಕೆಯನ್ನು ಈಡೇರಿಸಲು ಕಂಕಣಬದ್ಧರಾಗಿದ್ದ ಪಂಡಿತರು ಉಜ್ಜಯಿನಿ ಹಾಗು ರಂಭಾಪುರೀ ಜಗದ್ಗುರುಗಳವರನ್ನು ಗುಂತಕಲ್ಲಿಗೆ ಆಗಮಿಸುವಂತೆ ಬಿನ್ನೈಸಿ ಕೊಂಡರು. ತಾ|| ೭-೭-೧೯೪೦ ನೇ ಇಸವಿ ದಿವಸ ಉಭಯ ಜಗದ್ಗುರು ಗಳವರ ಅಧ್ಯಕ್ಷತೆಯಲ್ಲಿ ಶ್ರೀ ವಾಗೀಶರಿಗೆ ಶ್ರೀಶೈಲಜಗದ್ಗುರು ಸೂರ್ಯ ಸಿಂಹಾಸನಾರೋಹಣಸಮಾರಂಭವು ಅದ್ಭುತವಾಗಿ ನೆರವೇರಿತು. ಈ ಸಮಯದಲ್ಲಿ ನೂತನ ಸನ್ನಿಧಿಯವರಿಗೆ ಶ್ರೀವಾಗೀಶಪಂಡಿತಾರಾಧ್ಯ ಶಿವಾಚಾರ್ಯರೆಂಬ ಪ್ರಸಿದ್ಧನಾಮವು ಪ್ರಾಪ್ತವಾಯಿತು. ಆ ಕಾಲದಲ್ಲಿ ಪಂಡಿತರಿಗೆ ದಮ್ಮಿನ ಬಾಧೆಯಿದ್ದುದರಿಂದ ಗುಂತಕಲ್ಲಿಗೆ ಆಗಮಿಸಲಿಕ್ಕಾಗ ಲಿಲ್ಲ. ಮುಂದೆ ಸ್ವಲ್ಪದಿನಗಳಲ್ಲಿ ನಾಗಲೋಟಿ ಭಿಕ್ಷಾವರ್ತಿಮಹಾಸ್ವಾಮಿಗಳು ಲಿಂಗೈಕ್ಯರಾದುದರಿಂದ ಶ್ರೀ ಜಗದ್ಗುರು ವಾಗೀಶಪಂಡಿತಾರಾಧ್ಯಶಿವಾಚಾರ್ಯ ರವರೇ ಪೀಠದ ಅಭಿವೃದ್ಧಿಗಾಗಿ ಹೋರಾಡಹತ್ತಿದರು. ಆಗ ಪೀಠಕ್ಕೆ ನಾನಾ ಮೂಲಕ ವ್ಯಾಜ್ಯಗಳು ಪ್ರಾಪ್ತಿಯಾದವು. ಪಂಡಿತರು ಅನೇಕರೀತಿಯಲ್ಲಿ ನೂತನ ಮಹಾಸ್ವಾಮಿಗಳಿಗೆ ಸಹಾಯಸೌಕರ್ಯಗಳನ್ನೊದಗಿಸಿಕೊಟ್ಟು ಪೀಠವನ್ನು ಉನ್ನತಸ್ಥಿತಿಗೆ ತಂದು ಶ್ರೀಶೈಲಜಗದ್ಗುರು ಪಂಡಿತಾರಾಧ್ಯರ ಪೂರ್ಣಾನುಗ್ರಹಕ್ಕೆ ಪಾತ್ರರಾದರು.

# ೫ ನೇ ಪಟ್ಟಚರಾಧಿಕಾರಿಗಳ ಸಮ್ಮೇಲನ

## ಶ್ರೀಕ್ಷೇತ್ರ ಉಜ್ಜಯಿನಿ

ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ ೧೦೮ ಜಗದ್ಗುರು ಚರಾಧೀಶ ಶ್ರೀಸಿದ್ಧಲಿಂಗಮಹಾಶಿವಯೋಗಿಗಳು ತಮ್ಮ ನಿತ್ಯತಪೋನುಷ್ಠಾನಗಳನ್ನು ಸಾಂಗವಾಗಿ ನೆರವೇರಿಸುತ್ತಾ ಧರ್ಮಕಾರ್ಯಗಳನ್ನು ಎಡೆಬಿಡದೆ ನಡೆಯಿಸುತ್ತಿದ್ದರು. ಆಗ್ಗೆ ಪಟ್ಟಚರಾಧಿಕಾರಿಗಳು ಬಹಳ ಅವಿದ್ಯಾವಂತರಾಗಿದ್ದು ಅಶಾಸ್ತ್ರೀಯ ವರ್ತನೆಯುಳ್ಳವರಾಗಿದ್ದರು. ಅದು ನಮ್ಮ ಜಗದ್ಗುರುವರ್ಯರಿಗೆ ಎಷ್ಟೂ ಸರಿಬರಲಿಲ್ಲ. ಆ ಬಗ್ಗೆ ಪಟ್ಟಚರಾಧಿಕಾರಿಗಳ ಸಮ್ಮೇಳನವನ್ನು ನೆರವೇರಿಸಿ ಸಕಲ ಗುರುವರ್ಗವನ್ನು ಜಾಗೃತಗೊಳಿಸಬೇಕೆಂದು ಕಾರ್ಯೋನ್ಮುಖರಾದರು. ಇದಕ್ಕಾಗಿ ಶ್ರೀ ಕಾಶೀನಾಥಶಾಸ್ತ್ರಿಗಳನ್ನು ಬರಮಾಡಿಕೊಂಡು ಈ ಸಭಾಕಾರ್ಯದಲ್ಲಿ ಕಾರ್ಯದರ್ಶಿಯನ್ನಾಗಿ ನೇಮಿಸಿದರು. ಶಾಸ್ತ್ರಿಗಳು ಕಾರ್ಯದರ್ಶಿಗಳಾಗಿ ಸಮ್ಮೇಳನದ ಕಾರ್ಯಕ್ಕೆ ಒಂದು ಸ್ವಾಗತ ಸಮಿತಿಯನ್ನು ರಚಿಸಿ ಬಾರ್ಸಿ ಪರಾಂಡಕರ್ ಶ್ರೀ॥ ಷ॥ ಬ್ರ॥ ರಾಚಲಿಂಗಸ್ವಾಮಿಗಳನ್ನು ಸಭೆಯ ಅಧ್ಯಕ್ಷರನ್ನಾಗಿ ಮಾಡಿದರು. ಸಭೆಯ ಕಾರ್ಯಕಲಾಪಗಳನ್ನು ಯಶಸ್ವಿಯಾಗಿ ನಡೆಯಿಸಲು ಕೇದಾರಪೀಠದ ಶ್ರೀ ೧೦೮ ಜಗದ್ಗುರು ನೀಲಕಂಠಶಿವಾಚಾರ್ಯರನ್ನು ಮತ್ತು ಅದೇ ಪೀಠದ ಚರಾಧಿಕಾರಿಗಳಾದ ಶ್ರೀ ೧೦೮ ಜಗದ್ಗುರು ಚಿದ್ಘನಲಿಂಗ ಶಿವಾಚಾರ್ಯರನ್ನು ಆಗಮಿಸಿಕೊಂಡರು. ಈ ಉಭಯ ಜಗದ್ಗುರುಗಳೂ, ಶ್ರೀ ಜಗದ್ಗುರು ಸಿದ್ಧಲಿಂಗಮಹಾಸ್ವಾಮಿಗಳೂ ಪೀಠಗಳಲ್ಲಿ ವಿರಾಜಮಾನರಾಗಿದ್ದರು. ಸಭೆಗೆ ಸುಮಾರು ಹತ್ತುಸಾವಿರದ ವರೆಗೆ ವೀರಶೈವರು ಸೇರಿದ್ದರು. ಇಂಥ ಪ್ರಚಂಡ ಸಭೆಯಲ್ಲಿ ಕಾಶೀನಾಥಶಾಸ್ತ್ರಿಗಳ ಭಾಷಣ ಪ್ರಾರಂಭವಾಯಿತು. ಮೊದಲು ಗುರುವರ್ಗದ ಶ್ರೇಷ್ಠತ್ವವನ್ನೂ, ಅವರಿಂದಾಗುವ ಸಮಾಜೋದ್ಧಾರಕಾರ್ಯವನ್ನೂ ಅನಂತಮುಖವಾಗಿ ವಿವರಿಸಿ ಅನಂತರ ವಿರಕ್ತರ ವಿಚಾರವನ್ನು ಬಹಿರಂಗಪಡಿಸಿದ್ದೇನೆಂದರೆ—

ಈಗ್ಗೆ ಸುಮಾರು ಎರಡುನೂರು ವರ್ಷಗಳ ಪೂರ್ವದಲ್ಲಿದ್ದ ಕೆಲ ವಿರಕ್ತರು ಶಿವಧ್ಯಾನಪರರಾಗಿ ಮತ್ತು ಶಿವಸಿದ್ಧಾಂತ ರೂಪವಾದ ಷಟಸ್ಥಲ ಶಾಸ್ತ್ರದಲ್ಲಿ ಒಳ್ಳೇ ಪರಿಣತೆಯುಳ್ಳವರಾಗಿ ಭಿಕ್ಷಾನ್ ಸೇವನೆಯಿಂದಲೂ,

ಏಕಾಂತವಾಸದಿಂದಲೂ ತಪಸ್ವಿಗಳಾಗಿ ಕೀರ್ತಿಶೇಷರಾಗಿದ್ದಾರೆ. ಅವರು ಈಗಿನ ಕೆಲ ವಿರಕ್ತರಂತೆ ಸ್ವಾರ್ಥಪರರಾಗಿದ್ದಿಲ್ಲ. ನಾನೆಂಬುವ ಅಹಂಕಾರ ಗಳಿಗೆ ಅಧೀನರಾಗಿ ತಮ್ಮ ಸಾತ್ವಿಕ ಶಕ್ತಿಯನ್ನು ಕಳೆದುಕೊಳ್ಳಲಿಲ್ಲ. ವೀರಶೈವಧರ್ಮ ಸಂಸ್ಥಾಪಕರಾದ ಶ್ರೀ ಜಗದಾಚಾರ್ಯರ ವಿಷಯದಲ್ಲಿ ಭಕ್ತಿಭಾವನೆಯುಳ್ಳವರಾಗಿ ವರ್ತಿಸಹತ್ತಿದ್ದರೆಂಬುದಕ್ಕೆ ಇಲ್ಲಿ ಒಂದೆರಡು ಉದಾಹರಣೆಗಳನ್ನು ನೋಡಿರಿ.

ಶ್ರೀಮರಿತೋಂಟದಾರ್ಯರು ಸಂಸ್ಕೃತದಲ್ಲಿ ದಿವ್ಯಪಂಡಿತರಾಗಿದ್ದು ಶ್ರೀಜಗದ್ಗುರು ರೇಣುಕಾಚಾರ್ಯರ ವಿಷಯದಲ್ಲಿ ಅಸಾಧಾರಣ ಭಕ್ತಿ ಯುಳ್ಳವರಾಗಿದ್ದುದರಿಂದಲೇ ಶ್ರೀಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿರುವ ಷಟಸ್ಥಲ ಸಿದ್ಧಾಂತಶಿಖಾಮಣಿ ಗ್ರಂಥಕ್ಕೆ ಸಂಸ್ಕೃತದಲ್ಲಿ ಒಳ್ಳೇ ವ್ಯಾಖ್ಯಾನವನ್ನು ಬರೆದು ಸುಪ್ರಸಿದ್ಧರಾಗಿರುವ ವಿಷಯವು ಸಕಲ ವಿದ್ವಜ್ಜನರಿಗೆ ಗೊತ್ತಿದ್ದ ಮಾತಾಗಿದೆ. ಮತ್ತು ಎಡೆಯೂರು ತೋಂಟದ ಸಿದ್ಧೇಶ್ವರರೆಂಬ ವಿರಕ್ತಮೂರ್ತಿಗಳು ತಮ್ಮ ವಚನಗ್ರಂಥದಲ್ಲಿ—

"ಆದಿಯಲ್ಲಿ ಶಿವತತ್ವದಲ್ಲಿ ಶ್ರೀ ರೇಣುಕನುದಯವಾಗದಿದ್ದರೆ ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿಯೆಂತೋ ? ಶಿವನಲ್ಲಿಯೇ ಹುಟ್ಟಿ ಶಿವನಲ್ಲಿಯೇ ಲಯವಾದ ರೇವಣಸಿದ್ಧೇಶ್ವರನು ಅನಾದಿ ಮುಕ್ತನಲ್ಲ ಅವಾಂತರಮುಕ್ತನೆಂಬ ಅಜ್ಞಾನಿಗಳಿಗೆ ಏನೆಂಬೆ ;"

ಎಂದು ಜಗದ್ಗುರು ರೇವಣಸಿದ್ಧರನ್ನು ತಮ್ಮ ನೈಜವಾದ ಭಕ್ತಿಭಾವನೆ ಯಿಂದ ಹೊಗಳಿದವರಾಗಿದ್ದಾರೆ. ಮತ್ತು ಆಗ್ಗೆ ಕೆಲವಿರಕ್ತರು ತಮ್ಮ ಭಕ್ತಿ ಪುರಸ್ಸರವಾಗಿ ಪಂಚಗುರುಪೀಠಗಳಿಗೆ ವರ್ಷಂಪ್ರತಿ ಕಾಣಿಕೆಯನ್ನು ಕಳುಹಿ ಸುತ್ತಿದ್ದರಲ್ಲದೆ ತಮ್ಮ ದಾಸೋಹ ಕಾರ್ಯಕ್ಕೆ ಭಿಕ್ಷಾಟನೆ ಮಾಡಲು ಸಂಚರಿಸಲಿಕ್ಕಾಗಿ ಕರ್ಣಾಟಕದಲ್ಲಿರುವ ಬಾಳೇಹೊನ್ನೂರು, ಉಜ್ಜಯಿನೀ ಪೀಠಗಳಲ್ಲಿ ವಿಜ್ಞಾಪನೆಯನ್ನು ಲೇಖೀಮೂಲಕ ಮಾಡಿಕೊಂಡು ಆಯಾಯ ಗುರುಸ್ಥಾನಗಳಿಂದ ಆಜ್ಞಾಪತ್ರಗಳನ್ನು ಸ್ವೀಕರಿಸುತ್ತ ಸಂಚಾರಮಾಡು ತ್ತಿದ್ದಂತೆ ? ಅನೇಕ ಆಧಾರಗಳಿರುತ್ತವೆ.

ವೀರಶೈವಮತಬಾಂಧವರೇ ! ನಿಮ್ಮ ಜೀವನವನ್ನು ವ್ಯರ್ಥಮಾಡಿ ಕೊಳ್ಳಬೇಡಿರಿ. ಈ ಜನ್ಮನಿರರ್ಥಕವಾಗಿಹೋದರೆ ಮುಂದೆ ಇದೇ ಮಾನವ

ಜನ್ಮ ಅಥವಾ ಇದೇ ವೀರಶೈವಧರ್ಮ ಸಿಗುತ್ತದೆಂದು ಯಾರೂ ನಂಬು ವಂತಿಲ್ಲ. ಪತಿವ್ರತಾಸ್ತ್ರೀಯಳಿಗೆ ಪತಿದೇವನ ಹೊರತು ಗತಿಯಿಲ್ಲೆಂಬುದು ಹೇಗೆ ಪ್ರಸಿದ್ಧವಾಗಿದೆಯೋ ಹಾಗೆ ಗುರುವರ್ಗದ ಅಧಿಕಾರಿಗಳಿಲ್ಲದೆ ಮೋಕ್ಷ ದೊರೆಯದು. "ನಗುರೋರಧಿಕಂ" ಎಂಬಂತೆ ಗುರುವಿಗಿಂತ ಅಧಿಕವಾದ ವಸ್ತುವು ಜಗತ್ತಿನಲ್ಲಿ ಇಲ್ಲವೆಂಬುದನ್ನು ಚನ್ನಾಗಿ ತಿಳಿಯಿರಿ. ಎಂದು ಧರ್ಮದ ಸಾರವನ್ನೂ ಶ್ರೀಜಗದ್ಗುರು ಪಂಚಾಚಾರ್ಯರೇ ಮೋಕ್ಷಕ್ಕೆ ಮೂಲಕಾರಣೀ ಭೂತರೆಂಬುದನ್ನೂ ಘಂಟಾಘೋಷವಾಗಿ ಸಾರುತ್ತ ಎಂಟುನೂರು ವರ್ಷ ಗಳಿಂದ ವಿರಕ್ತರ ವಿಚಾರದಲ್ಲಿದ್ದ ಜನತೆಯ ಪ್ರಬಲವಾದ ಮೂಢತನವನ್ನು ಹೋಗಲಾಡಿಸಿದರು. ಪಂಚಾಚಾರ್ಯರ ಭಕ್ತಿರಸವನ್ನು ಸಕಲರ ಹೃದಯ ಮಂದಿರದಲ್ಲಿ ತುಂಬಿ ನವಚೈತನ್ಯವನ್ನುಂಟುಮಾಡಿದರು. ಮತ್ತು ವೀರಶೈವ ರೆಲ್ಲರೂ ತಮ್ಮ ತಮ್ಮ ಪರಂಪರಾಗತ ಗುರುಸ್ಥಲದ ಪಟ್ಟಚರಾಧಿಕಾರಿಗಳಿಂದ ಶಿವದೀಕ್ಷಾಸಂಸ್ಕಾರವನ್ನು ಹೊಂದಿ ಪುನೀತರಾಗಿ ಮೋಕ್ಷಪಥಕ್ಕೆ ಅರ್ಹರಾಗಿ ರೆಂದು ಜಾಗ್ರತೆಗೊಳಿಸಿದರು. ಹೀಗೆ ಪಂಡಿತರು ತಮ್ಮ ದಿವ್ಯಜ್ಞಾನಭೂಮಿಕೆ ಯಲ್ಲಿ ತರತರಂಗವಾಗಿ ಉದ್ಭವಿಸುವ ಶಾಸ್ತ್ರಬದ್ಧವಾದ ಧಾರ್ಮಿಕತತ್ವ ಗಳನ್ನೂ ಅವಶ್ಯಕವಾದ ಮತೋದ್ಧಾರಕ ವಿಷಯಗಳನ್ನೂ ಸಮ್ಮೇಳನದಲ್ಲಿ ಬೋಧಿಸಿ ಸಭಿಕರನ್ನು ಆನಂದತುಂದಿಲರನ್ನಾಗಿ ಮಾಡಿದರು.

ಶ್ರೀ ಕಾಶೀನಾಥಶಾಸ್ತ್ರಿಗಳ ಕರ್ತವ್ಯದಕ್ಷತೆಯಲ್ಲಿ ಸಮ್ಮೇಲನದ ಸಕಲ ಕಾರ್ಯಗಳು ಒಳ್ಳೇ ವೈಭವದಿಂದ ಜರುಗಿದ ನಂತರ ಕೆಳಕಂಡ ಯೋಗ್ಯ ತರಾವುಗಳು ಸರ್ವಾನುಮತದಿಂದ ಪಾಸಾದವು.—

## ಪಾಸಾದ ಠರಾವುಗಳು

೧. ಭರತಖಂಡದಲ್ಲಿರತಕ್ಕ ಸಮಸ್ತ ಗುರುವರ್ಗದವರು ಐಕ್ಯದಿಂದಿರ ತಕ್ಕದ್ದು.

೨. ಗುರುವರ್ಗದವರು ದೀಕ್ಷಾ ವಿವಾಹಾದಿ ಷೋಡಶಕರ್ಮಗಳನ್ನು ಶಾಸ್ತ್ರೋಕ್ತಪ್ರಕಾರವಾಗಿ ನಡೆಯಿಸಿ ಶಿಷ್ಯರನ್ನುದ್ಧರಿಸತಕ್ಕದ್ದು.

೩. ಅಲ್ಲಲ್ಲಿ ಸಂಸ್ಕೃತ ವೈದಿಕ ಪಾಠಶಾಲೆಗಳನ್ನೇರ್ಪಡಿಸಿ ಗುರು ವರ್ಗದ ಬಾಲಕರನ್ನು ವೈದಿಕ ವಿದ್ಯಾಸಂಪನ್ನರನ್ನಾಗಿ ಮಾಡತಕ್ಕದ್ದು.

೪. ಗುರುವರ್ಗದ ಹಾಗು ಶಿಷ್ಯವರ್ಗದ ಉದ್ಧಾರಕ್ಕಾಗಿ ವರ್ತಮಾನ ಪತ್ರಿಕೆಯು ಬೇಕಾಗಿರುವುದರಿಂದ ಮುಂದಿನ ಪ್ರಭವಸಂವತ್ಸರದಲ್ಲಿ "ಪಂಚಾಚಾರ್ಯಪ್ರಭಾ" ಎಂಬ ಹೆಸರಿನಲ್ಲಿ ವಾರಪತ್ರಿಕೆಯನ್ನು ಹೊರಡಿಸ ಲಿಕ್ಕಾಗಿ ನಿರ್ಧರಿಸಿದ್ದಲ್ಲದೆ, ಪತ್ರಿಕೆ ಹಾಗು ಪ್ರಿಂಟಿಂಗ್ ಪ್ರೆಸ್ಸುಗಳಿಗೆ ಸರ್ವರೂ ಸಹಾಯಮಾಡಬೇಕೆಂದೂ, ಈ ಪತ್ರಿಕೆಯು ಕನ್ನಡ ಮತ್ತು ಮಹಾರಾಷ್ಟ್ರ ಭಾಷೆಗಳಲ್ಲಿ ಹೊರಡಬೇಕೆಂದೂ, ಈ ಸಮ್ಮೇಳನವು ನಿಶ್ಚೈಸಿರುತ್ತದೆ.

೫. ಈ ಪತ್ರಿಕೆಗೆ ಉಜ್ಜಯಿನೀ ಶ್ರೀಜಗದ್ಗುರುಗಳೂ, ಹಿಮವತ್ಕೇದಾರದ ಶ್ರೀಜಗದ್ಗುರುಗಳವರೂ ಹಾಗೂ ಶ್ರೀರಂಭಾಪುರೀ ಜಗದ್ಗುರುಗಳವರೂ, ಐದೈದು ಸಾವಿರ ರೂಪಾಯಿಗಳನ್ನು ಆಶೀರ್ವಾದರೂಪವಾಗಿ ದಯಪಾಲಿಸಿರುವುದರಿಂದ ಈ ಸಮ್ಮೇಳನವು ಆ ಪೂಜ್ಯಪಾದರನ್ನು ವಂದಿಸುತ್ತದೆ.

೬. ಪಟ್ಟ-ಚರಾಧಿಕಾರಗಳನ್ನು ವಹಿಸತಕ್ಕವರು ಪೀಠಾಚಾರ್ಯರ ಅನುಮತಿಯನ್ನು ಪಡೆಯಬೇಕೆಂದೂ, ಜಗದ್ಗುರುಗಳಿಗೆ ತಿಳುಹಿಸದೆ ಮಾಡಿದ್ದಾದರೆ ಅದಕ್ಕೆ ಯಾರೂ ಗಮನಕೊಡಕೂಡದೆಂದೂ, ಅಧಿಕಾರಿಗಳಾಗುವವರು ಚನ್ನಾಗಿ ಧರ್ಮಶಾಸ್ತ್ರವನ್ನು ಅರಿತವರಾಗಬೇಕೆಂದೂ, ಚಿಕ್ಕ ವಯಸ್ಸಿನಲ್ಲಿ ಪಟ್ಟವನ್ನು ಕಟ್ಟಬಾರದೆಂದೂ, ವಿರೋಧದಿಂದ ಒಂದು ಮಠಕ್ಕೆ ಇಬ್ಬರು ಅಧಿಕಾರಿಗಳನ್ನು ಮಾಡಕೂಡದೆಂದೂ, ಈ ಸಮ್ಮೇಳನವು ನಿರ್ಧರಿಸುತ್ತದೆ.

೭. ವೀರಶೈವ ಮಠೋದ್ಧಾರಕ್ಕಾಗಿ ಶ್ರೀಜಗದ್ಗುರು ಪಂಚಾಚಾರ್ಯ ಸಮ್ಮೇಳನವು ಅವಶ್ಯವಾಗಿರುವುದರಿಂದ ಇದರ ಕಡೆ ಸಮಸ್ತ ಭಕ್ತಮಾಹೇಶ್ವರರು ಲಕ್ಷಿಸಬೇಕು.

೮. ಒಬ್ಬರ ಶಿಷ್ಯರ ಮನೆಗಳನ್ನು ಮತ್ತೊಬ್ಬರು ಹರಣಮಾಡುವಂಥಾ ಗುರುಸ್ಥಲದ ಮಠಾಧಿಕಾರಿಗಳ ಬಗ್ಗೆ ಪಂಚಪೀಠಾಧೀಶ್ವರರು ಯೋಗ್ಯ ನಿಬಂಧನೆಗಳನ್ನು ಮಾಡ್ಬೇಕೆಂದು ಈ ಸಮ್ಮೆಲನವು ಪ್ರಾರ್ಥಿಸುತ್ತದೆ.

೯. ಪರಳಿ ಪ್ರಕರಣ ಸಂಬಂಧವಾಗಿ ನಿಜಾಂ ಸರಕಾರವು ಇದುವರೆಗೆ ಬಹಿರಂಗವಾಗಿ ಯಾವ ಹುಕುಂ ಮಾಡದೇ ಇರುವುದರಿಂದ ಶೀಘ್ರವಾಗಿ ಸದರಿ ಸರ್ಕಾರವನ್ನು ಅಧ್ಯಕ್ಷರು ಕೇಳಿಕೊಳ್ಳುವಂತೆ ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಅಧ್ಯಕ್ಷ—ರಾಚಲಿಂಗಸ್ವಾಮಿ ಪರಾಂಡಕರ್ ಮಠ, ಬಾರ್ಶಿ.

# "ಪಂಚಾಚಾರ್ಯಪ್ರಭಾ" ಉದಯ

## (ವಾರಪತ್ರಿಕೆ)

ಕಾಲಮಾನಕ್ಕನುಸಾರವಾಗಿ ಧಾರ್ಮಿಕ, ನೈತಿಕ, ಸಾಮಾಜಿಕ ವಿಷಯಗಳನ್ನು ಶಾಸ್ತ್ರವಿಧಿಯಂತೆ ಪ್ರಚಾರಮಾಡಲು ಪತ್ರಿಕೆಯೇ ಅಗತ್ಯವೆಂಬ ಉಜ್ಜಯಿನಿ ಪಟ್ಟ-ಚರಾಧಿಕಾರಿಗಳ ೫ ನೇ ಸಮ್ಮೇಲನದ ನಿರ್ಣಯಕ್ಕನುಸರಿಸಿ ಪಂಡಿತ ಕಾಶೀನಾಥಶಾಸ್ತ್ರಿಗಳು ಹಗಲು ರಾತ್ರಿಗಳೆನ್ನದೆ ಹಳ್ಳಿಹಳ್ಳಿಗೂ ಸಂಚರಿಸಿ ಸದ್ಬೋಧೆಯಿಂದ ಜನರಲ್ಲಿ ಧರ್ಮದ ನವಚೈತನ್ಯವನ್ನುಂಟುಮಾಡುತ್ತ ಧನಸಂಚಯಮಾಡತೊಡಗಿದರು. ಉಜ್ಜಯಿನೀ ಜಗದ್ಗುರು ಶ್ರೀ ಸಿದ್ಧಲಿಂಗ ಶಿವಯೋಗಿಗಳ ತಪೋಭೂಮಿಯಾದ ಬಳ್ಳಾರಿ ಜಿಲ್ಲೆಯಲ್ಲಿಯೇ ಹೆಚ್ಚಾಗಿ ಸಹಾಯದೊರೆತಿದ್ದುದು ಪಂಡಿತರ ನಿಸ್ವಾರ್ಥ ಸೇವೆಯ ಫಲವೆಂದು ಹೇಳಬಹುದು. ಈ ರೀತಿಯಲ್ಲಿ ಜನಗಳಿಂದ ಉದಾರವಾಗಿ ದೊರೆತ ನಿಧಿಯನ್ನು ಪ್ರಿಂಟಿಂಗಿನ ಕೆಲವು ಯಂತ್ರಗಳಿಗಾಗಿ ಉಪಯೋಗಿಸಿ ಸರ್ವಸಿದ್ಧತೆಯೊಡನೆ ಮೈಸೂರು ರಾಜಧಾನಿಯಲ್ಲಿ ತಾ|| ೧೬-೫-೧೯೨೭ ನೇ ಇಸ್ವಿ ಶುಭದಿವಸ ಪಂಡಿತರು ಮುದ್ರಣಾಲಯವನ್ನು ಸ್ಥಾಪಿಸಿ ಅದಕ್ಕೆ ಐದು ಪೀಠಾಚಾರ್ಯರ ಆಶೀರ್ವಾದವು ಸದಾ ಇರಲೆಂಬ ಉದ್ದೇಶದಿಂದಲೋ ಅಥವಾ ಮುದ್ರಣಾಲಯದ ಹೆಸರಿನಲ್ಲಿ ಪಂಚಾಚಾರ್ಯರ ನಾಮವು ಜಗತ್ತಿನಲ್ಲಿ ಶೋಭಿಸಲೆಂದೋ "ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್" ಎಂಬ ನಾಮಕರಣ ಮಾಡಿದರು. ಮತ್ತು ಅದೇ ಪ್ರೆಸ್ಸಿನಲ್ಲಿ "ಪಂಚಾಚಾರ್ಯಪ್ರಭಾ" ಎಂಬ ವಾರಪತ್ರಿಕೆಯನ್ನೂ ಹೊರಡಿಸಹತ್ತಿದರು.

ಪಂಚಾಚಾರ್ಯರ ತೇಜಸ್ಸ್ವರೂಪವೂ ಷಣ್ಮುಖನ ವಿದ್ಯಾಪ್ರತಿಭೆಯೂ ಮೂರ್ತಿಯಾಗಿದ್ದ ಪಂಡಿತರ ಸಾಹಸದ ಫಲವಾಗಿ ಪತ್ರಿಕೆಯೂ ಮುದ್ರಣಾಲಯವೂ ತುಸು ದಿನಗಳಲ್ಲಿ ಪ್ರಸಿದ್ಧಿಗೊಂಡು ನಾನಾತರದ ಕೆಲಸ ಕಾರ್ಯಗಳು ಚತುರತೆಯಿಂದ ನಡೆಯಹತ್ತಿದವು. ಪ್ರತಿ ಸೋಮವಾರ ಹೊರಡುತ್ತಿರುವ ಈ ಪತ್ರಿಕೆಯಲ್ಲಿ ಜಗತ್ತಿನ ಎಲ್ಲ ವೀರಶೈವಪಂಡಿತರ ಲೇಖನಗಳೂ, ಧಾರ್ಮಿಕ ವಿಷಯಗಳೂ ಪ್ರಕಟವಾಗುತ್ತ ಸಮಾಜದಲ್ಲಿ ಒಂದು ವಿಧವಾದ ಧರ್ಮದ ಬೆಳಕು ಹೊರಸೂಸಹತ್ತಿತು. ಈವರೆಗೆ ಅಲ್ಲಲ್ಲಿ ವ್ಯಾಪಕವಾಗಿದ್ದ

ಅಧರ್ಮವಿಚಾರಗಳು ಮೆಲ್ಲಗೆ ಪಲಾಯನಮಾಡಹತ್ತಿದವು. ಅನಧಿಕಾರದಿಂದ ವೀರಶೈವ ಧರ್ಮಸಾಮ್ರಾಜ್ಯದಲ್ಲಿ ತಮ್ಮ ಹೆಸರನ್ನು ಬೀರಿರುವ ವಿರಕ್ತ ವರ್ಗದವರ ಆಡಂಬರವನ್ನು ತಡೆದುಹಾಕಲು ಜನಿಸಿದ ಪಂಡಿತರ ಚಳವಳಿಗೆ ಅನುಕೂಲವಾಗುವಂತೆ ನಾನಾ ನಾಡಿನ ವಿದ್ವಾಂಸರಿಂದಲೂ ಸಮಾಜ ಬಾಂಧವರಿಂದಲೂ ಬಂದ ಲೇಖನಗಳನ್ನು ಪ್ರಸಿದ್ಧಪಡಿಸಿದ್ದರ ಮೂಲಕ ಗುರುವರ್ಗ ಹಾಗು ವಿರಕ್ತವರ್ಗಗಳ ನಿಜಸ್ಥಿತಿಯು ಜಗತ್ತಿಗೆ ತಿಳಿದು ಪಂಚಾಚಾರ್ಯರ ಗುರುತ್ವವು ಎಂದಿನಂತೆ ಸ್ಥಿರಗೊಂಡಿತು. ಆಯಾಯ ಮಿತಿಗಳಲ್ಲಿ ನಡೆಯಬೇಕಾದ ಪಂಚಾಚಾರ್ಯರ ಜಯಂತಿ ಮಹೋತ್ಸವ ಗಳು ಪತ್ರಿಕೆಯದ್ವಾರಾ ದೇಶದೇಶವನ್ನೆಲ್ಲಾ ಆವರಿಸಿ ಎಲ್ಲೆಲ್ಲಿಯೂ ವೈಭವದ ಜಯಂತಿ ಆಚರಣೆಗೆ ಕಾರಣವಾಯಿತು.

ಪಂಚಪೀಠಾಧೀಶ್ವರರ ಹಾಗು ಪಟ್ಟಚರಾಧಿಕಾರಿಗಳ ಸಂಚಾರವನ್ನೂ ಅಲ್ಲಲ್ಲಿ ನಡೆಯುತ್ತಿರುವ ಅವರ ವಿಶೇಷ ಪೂಜೋತ್ಸವಗಳನ್ನೂ ದೇಶದಲ್ಲಿ ಪ್ರಚಾರಗೊಳಿಸಿ ಗುರುವರ್ಗದ ವಿಷಯವಾಗಿ ಸಮಾಜದಲ್ಲಿ ಭಕ್ತಿ ವಿಶ್ವಾಸ ಗಳು ನೆಲೆಸುವಂತೆ ಮಾಡಿತು. ಶಿವದೀಕ್ಷೆ-ಮಾಹೇಶ್ವರದೀಕ್ಷಾದಿ ಕಾರ್ಯ ವಿವರಣೆಗಳಿಂದ ಗುರು-ಶಿಷ್ಯರ ಮನಸ್ಸನ್ನು ಸೆಳೆದು ಎಲ್ಲರೂ ಅನುಕರಿಸು ವಂತೆ ಪ್ರೇರೇಪಿಸಿತು. ದೀಕ್ಷಾ-ವಿವಾಹಾದಿ ಕಾರ್ಯಗಳಿಗಾಗಿ ಸಲ್ಲಿಸು ತ್ತಿರುವ ಸ್ವೀಕಾರಗಳನ್ನು ಕಾರ್ಯಭಾಗಿಗಳ ಹೆಸರಿನಲ್ಲಿ ಪ್ರಕಟಿಸಿ ಅವರಿಗೂ ತತ್ಸಂಬಂಧಿಗಳಿಗೂ ಸಂತೋಷ ಹಾಗು ಸಾರ್ಥಕವಾಗುವಂತೆ ಶ್ರೀಜಗದ್ಗುರು ಪಂಚಾಚಾರ್ಯರ ಪರವಾಗಿ ಶುಭಾಶಯಗಳನ್ನು ಕೋರುತ್ತಲಿದ್ದು ಸಮಾಜಕ್ಕೆ ಉಪಯುಕ್ತವಾದ ಲಿಂಗೋದ್ಭವ ಮೂರ್ತಿಗಳನ್ನೂ ಲಾಕೆಟ್ಟುಗಳನ್ನೂ ಪುಸ್ತಕ-ಫೋಟೋಗಳನ್ನೂ ಪ್ರಸಿದ್ಧಪಡಿಸುವುದರ ಮೂಲಕ ಜಗತ್ತಿನಲ್ಲಿ ಆಚಾರ್ಯರ ಭಕ್ತಿಯನ್ನೂ, ಧರ್ಮ ನಿಬಂಧನೆಗಳನ್ನೂ, ಶಾಸ್ತ್ರೋಕ್ತ ವಿಧಾನಗಳನ್ನೂ ಬಳಕೆಯಲ್ಲಿ ತರಹತ್ತಿತು. ವೀರಶೈವಸ್ತ್ರೀಯರಿಗೆ ಶಾಸ್ತ್ರವಿಧಿ ಪ್ರಕಾರ ಸೂತಕ ವಿಚಾರಗಳನ್ನು ಪ್ರಕಟಿಸುವುದರ ಜೊತೆಗೆ ಅನಂತ ನೀತಿ ಗಳನ್ನೂ ಪ್ರಚಾರಪಡಿಸಿ ಸ್ತ್ರೀಸಮಾಜವನ್ನೆಲ್ಲಾ ಸುಧಾರಣೆಗೆ ತಂದಿತು. ಹೀಗೆ ನಾನಾಮುಖವಾಗಿ ಸಮಾಜವನ್ನೂ ಗುರುವರ್ಗವನ್ನೂ ಎಚ್ಚರ ಗೊಳಿಸಿದ ಕೀರ್ತಿ ಪಂಚಾಚಾರ್ಯಪ್ರಭಾಪತ್ರಿಕೆಯ ಮೂಲಕ ಪಂಡಿತರಿಗೇ ಸಲ್ಲಬೇಕಾಗಿದೆ.

# ಶ್ರೀಕಾಶೀನಾಥಗ್ರಂಥಮಾಲೆ

ಪಂಡಿತರು ಕೇವಲ ಧರ್ಮಜಿಜ್ಞಾಸಿಗಳಾಗಿದ್ದುದರಿಂದಲೂ ಶ್ರೀಜಗದ್ಗುರು ಪಂಚಾಚಾರ್ಯರ ಚಳವಳಿಯನ್ನು ಸರ್ವತೋಮುಖವಾಗಿ ನಡೆಸಬೇಕೆಂಬುದೊಂದು ಪರಮಧ್ಯೇಯವಾಗಿದ್ದುದರಿಂದಲೂ ಅನೇಕ ವೇದಾಗಮಗಳನ್ನೂ, ಮಹಾಚಾರ್ಯರು ಬೋಧಿಸಿರುವ ಮತಸಿದ್ಧಾಂತಗ್ರಂಥ ಸಂಶೋಧಿಸುವ ಮಹಾಕಾರ್ಯವನ್ನೂ ಒಳ್ಳೇ ಆಸಕ್ತಿಯಿಂದ ನಡೆಸಿದರು. ಹೀಗೆ ಧರ್ಮಗ್ರಂಥಾವಲೋಕನಗಳ ಸನ್ನಿವೇಶದಲ್ಲಿ ಅನಂತವಿಷಯಗಳು ಗೋಚರವಾದ ಮೂಲಕ ನಿಜವಾದ ವೀರಶೈವವೈಶಿಷ್ಟ್ಯವನ್ನು ಕಂಡು ಹಿಡಿಯಲು ಅನುಕೂಲವಾಯಿತು. ಮತ್ತು ಅದಕ್ಕೆ ತಕ್ಕ ಮುದ್ರಣಾಲಯವು ಕೈಯೊಳಗಿದ್ದುದರಿಂದ ಪ್ರಾಮುಖ್ಯವಾದ ಸಿದ್ಧಾಂತಗ್ರಂಥಗಳನ್ನು ಪ್ರಚಾರಕ್ಕೆ ತರಬೇಕೆಂಬ ಸದುದ್ದೇಶ ಉಳ್ಳವರಾಗಿ ಕ್ರಿ.ಶ. ೧೯೩೫ ರಲ್ಲಿ “ ಶ್ರೀಕಾಶೀನಾಥ ಗ್ರಂಥಮಾಲಾ” ಎಂಬ ಹೆಸರಿನಿಂದ ಗ್ರಂಥಮಾಲೆಯೊಂದನ್ನು ಏರ್ಪಡಿಸಿದರು. ಈ ಗ್ರಂಥಮಾಲೆಯಲ್ಲಿ ಬೇರೆ ಪಂಡಿತರು ವೀರಶೈವಸಿದ್ಧಾಂತ ಮತಾನುಸಾರವಾಗಿ ಪ್ರತಿಕಕ್ಷಿಗಳ ಮತಖಂಡನವನ್ನು ಮಾಡಿ ನಿಜತತ್ವವನ್ನು ಸಾರಿದ ಗ್ರಂಥಗಳೂ ಕೆಲವಿರುತ್ತವೆ. ಪ್ರಾಚೀನ ಪಂಡಿತರು ರಚಿಸಿರುವ ಸಂಸ್ಕೃತಗ್ರಂಥಗಳನ್ನು ಸಂಶೋಧಿಸಿ ಅವುಗಳಿಗೆ ಸವಿಸ್ತಾರವಾದ ಕನ್ನಡ ವ್ಯಾಖ್ಯಾನಗಳನ್ನು ಬರೆದು, ಬರೆಯಿಸಿ ಪ್ರಸಿದ್ಧಗೊಳಿಸಿರುತ್ತಾರೆ. ಹೀಗೆ ೫೭ ಗ್ರಂಥಗಳು ಅವರ ಗ್ರಂಥಮಾಲೆಯಲ್ಲಿ ಮುದ್ರಣವಾಗಿ ಪ್ರಕಾಶಕ್ಕೆ ಬಂದವುಗಳಾಗಿವೆ. ಈ ಗ್ರಂಥಮಾಲೆಯಲ್ಲಿ ಅತಿದೊಡ್ಡಗ್ರಂಥವೆಂದರೆ “ ಶಿವಾದ್ವೈತಮಂಜರಿ ” ಎಂಬುವ ಮಹಾಗ್ರಂಥವು. ಇದು ಕಾಶ್ಮೀರದೇಶದ ಶ್ರೀಸ್ವಪ್ರಭಾನಂದಶಿವಾಚಾರ್ಯರಿಂದ ರಚಿಸಲ್ಪಟ್ಟದ್ದಾಗಿದೆ. ಈ ಗ್ರಂಥದಲ್ಲಿ ಕೇವಲಾದ್ವೈತಖಂಡನ, ಶಕ್ತಿವಿಶಿಷ್ಟಾದ್ವೈತಮಂಡನವೇ ಪ್ರಾಶಸ್ತ್ಯ ವಿಷಯವಾಗಿದೆ. ಈ ಗ್ರಂಥಕ್ಕೆ ದೇವಶಿಖಾಮಣಿ ರಾಮಾನುಜಾಚಾರ್ ಪಂಡಿತರಿಂದ ಕನ್ನಡ ವ್ಯಾಖ್ಯಾನವನ್ನು ಬರೆಸಿರುತ್ತಾರೆ. ಮೈಸೂರ ಶ್ರೀಮನ್ಮಹಾರಾಜ ಕೃಷ್ಣರಾಜ ಒಡೆಯರ್ ಬಹದ್ದೂರ್ ಮಹಾಪ್ರಭುಗಳವರು ಇದಕ್ಕೆ ಸದಭಿಪ್ರಾಯವನ್ನು ಬರೆದಿರುವರು. ಈ ಗ್ರಂಥದ ಮುದ್ರಣಕಾರ್ಯವನ್ನು ಬಹು ಸಂಶೋಧನಾತ್ಮಕದೃಷ್ಟಿಯಿಂದಲೂ ವಿಶೇಷ

ದ್ರವ್ಯವ್ರಯದಿಂದಲೂ ಸಿದ್ಧಗೊಳಿಸಿರುವರು. ಈ ಗ್ರಂಥದಲ್ಲಿ ೧೩ಳಳ ಪುಟ ಗಳಿರುತ್ತವೆ. ಉತ್ತಮಕಾಗದ ಸುಂದರವಾದ ಮುದ್ರಣ ಬೈಂಡಿಂಗುಗಳಿಂದ ಮನೋಹರವಾದ ಈ ಉದ್ಗ್ರಂಥವನ್ನು ಎಷ್ಟು ವರ್ಣಿಸಿದರೂ ಅಲ್ಪವೇ? ಇನ್ನು ಪಂಡಿತರು ತಾವೇ ಸ್ವತಃ "ಸಿದ್ಧಾಂತಶಿಖಾಮಣಿ" ಎಂಬುವ ಸಂಸ್ಕೃತಗ್ರಂಥಕ್ಕೆ ಭಾವಪ್ರಕಾಶವೆಂಬ ಕನ್ನಡವ್ಯಾಖ್ಯಾನವನ್ನು ಬರೆದು ನಿಸ್ಸಂದಿಗ್ಧವಿಚಾರವನ್ನೂ ಶ್ರೀ ಜಗದ್ಗುರು ರೇಣುಕಾಚಾರ್ಯರ ಷಟಸ್ಥ ಲೋಪದೇಶದ ರಹಸ್ಯವನ್ನೂ ಚನ್ನಾಗಿ ತೋರ್ಪಡಿಸಿದ್ದಾರೆ. ಈ ಗ್ರಂಥವಾ ದರೂ ಉತ್ತಮ ಕಾಗದ ಸುಂದರ ಮುದ್ರಣಗಳಿಂದ ಒಳ್ಳೇ ರಮ್ಯವಾಗಿದೆ ಯೆಂದು ವಾಚಕರಿಗೆ ಬೇರೆ ಹೇಳಬೇಕಾಗಿಲ್ಲ. ಮತ್ತು ಗುರುವರ್ಗದವರ ವೈದಿಕವೃತ್ತಿಗೆ ಅನುಕೂಲವಾಗುವದಕ್ಕಾಗಿ ವೈದಿಕಶಿವಪೂಜಾವಿಧಿ, ದೀಕ್ಷಾ ವಿಧಿ, ವಿವಾಹವಿಧಿ, ಲಿಂಗಧಾರಣವಿಧಿ, ವೀರಶೈವಪ್ರಾಯಶ್ಚಿತ್ತವಿಧಿ, ವೀರ ಶೈವಾಂತ್ಯೇಷ್ಟಿವಿಧಿ ಇವೇ ಮೊದಲಾದ ವೈದಿಕಗ್ರಂಥಗಳನ್ನು ಶಿವಾಗಮೋಕ್ತ ವಾಗಿ ಪ್ರಕಾಶಪಡಿಸಿ ವೀರಶೈವವೈದಿಕವಾಙ್ಮಯಕ್ಕೆ ಹೆಚ್ಚಿನ ಸೇವೆಯನ್ನು ಸಲ್ಲಿಸಿದ್ದಾರೆ. ಈ ಹಿಂದೆ ನಮ್ಮಲ್ಲಿ ಸಂಸ್ಕೃತದ ಪ್ರಚಾರವಿಲ್ಲದ್ದರಿಂದ ವೈದಿಕ ವಿದ್ಯೆಯಲ್ಲಿ ಬಹಳ ಹಿಂದುಳಿದಿದ್ದ ಗುರುವರ್ಗದವರನ್ನು ಗ್ರಂಥ ಬೋಧಾ ಶಕ್ತಿಯಿಂದ ಜಾಗೃತಗೊಳಿಸಿ ವೈದಿಕ ವಿದ್ಯಾಸಂಪನ್ನರಾಗುವಂತೆ ಪ್ರಯತ್ನ ಪಟ್ಟವರಾದರು. ಹೀಗೆ ಸಕಲ ವೀರಶೈವಸಮಾಜದವರ ದಶವಿಧ ಕರ್ಮಗಳು ಶಾಸ್ತ್ರೋಕ್ತವಾಗಿ ನಡೆಯುವಂತೆ ಗ್ರಂಥಗಳ ಅನುಕೂಲತೆಯನ್ನು ಮಾಡಿ ಕೊಟ್ಟ ಉಪಕಾರವು ಚಿರಸ್ಮರಣೀಯವಾದುದಾಗಿದೆ. ಈ ನಮ್ಮ ಪಂಡಿ ತರು ಬರೆದಿರುವ ವೈದಿಕ ಗ್ರಂಥಗಳು ಪಾಠಶಾಲಾ ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾಗಿರುತ್ತವೆ.

ಬಸವ ಪಂಥಿಗಳ ವಕ್ರಮಾರ್ಗವನ್ನು ಅಳಿದು ಸನ್ಮಾರ್ಗ ತೋರಿಸಲಿ ಕ್ಕಾಗಿ ಬಸವಾದಿ ನಿಜತತ್ವದರ್ಪಣ, ಬಸಧ್ವಾಂತದಿವಾಕರ, ಸನ್ಯಾಸಾಶ್ರಮ ವಿಮರ್ಶ, ಪಂಚವಿಂಶತಿ ಪ್ರಶ್ನಪ್ರಕಾಶ, ಸನ್ಯಾಸಾಶ್ರಮವಿಮರ್ಶ ತತ್ವಸ್ಥಿರೀ ಕರಣ, ಶಿಖಾಸೂತ್ರಸಿದ್ಧಾಂತದರ್ಪಣ, ಶ್ರೀಪತಿಪಂಡಿತಾರಾಧ್ಯರ ಕಾಲ ನಿರ್ಣಯ, ಈ ಗ್ರಂಥಗಳನ್ನು ಶಾಸ್ತ್ರಾಧಾರಪೂರ್ವಕ ಬರೆದು ಬಸವಧ್ವಾಂತಿ ಗಳಿಗೆ ನಿಜವಾದ ಜ್ಞಾನಪ್ರಕಾಶವನ್ನುಂಟುಮಾಡಿಕೊಟ್ಟಿರುವ ಕೆಲಪಂಡಿತರು

ಈ ತಮ್ಮ ಸಿದ್ಧಾಂತ ಗ್ರಂಥಗಳನ್ನು ಕಾಶೀನಾಥ ಗ್ರಂಥಮಾಲೆಗೆ ಅರ್ಪಿಸಿದ್ದನ್ನು ನೋಡಿ ಅವರ ಪರಿಶ್ರಮದ ಫಲವು ಸಕಲರಿಗೂ ಸದ್ಬುದ್ಧಿಯನ್ನುಂಟುಮಾಡಲೆಂದು ಹಾರೈಸುತ್ತೇನೆ.

ಮತ್ತು ಇದೇ ಗ್ರಂಥಮಾಲೆಗೆ ಸೇರಿದ ಶ್ರೀಜಗದ್ಗುರು ಪಂಚಾಚಾರ್ಯ ಸ್ತೋತ್ರರತ್ನಾಕರ, ಶ್ರೀಜಗದ್ಗುರು ಪಂಚಾಚಾರ್ಯರ ನಾಮಾವಳಿ, ಶ್ರೀ ಜಗದ್ಗುರು ರೇಣುಕಾಚಾರ್ಯಕೀರ್ತನ, ಶ್ರೀಜಗದ್ಗುರು ರೇಣುಕಾಚಾರ್ಯ ಶತಕ, ಶ್ರೀಜಗದ್ಗುರು ರೇಣುಕವಿಜಯ, ಶ್ರೀಜಗದ್ಗುರು ರೇಣುಕ ವಿಜಯ ಪುರಾಣ, ಶ್ರೀಜಗದ್ಗುರು ರುದ್ರಮುನಿಶಿವಾಚಾರ್ಯಶತಕ, ಈ ಕನ್ನಡಗ್ರಂಥ ಗಳನ್ನು ಬರೆದು ಬರೆಯಿಸಿ ಪ್ರಸಿದ್ಧಪಡಿಸಿದ್ದಾರೆ. ಹೀಗೆ ಮಹಾಚಾರ್ಯರ ಪವಿತ್ರಚರಿತ್ರೆಗಳು ಮತ್ತು ಸ್ತೋತ್ರಗಳು ಸಕಲ ವೀರಶೈವರ ಮುಖಗಳಲ್ಲಿ ಬಹು ಮನೋಹರವಾಗಿ ಹೊರಸೂಸುತ್ತಿರುವುದನ್ನು ಸಕಲರೂ ಮನಗಂಡ ವಿಷಯವಾಗಿದೆ.

ಪೂರ್ವಕಾಲದಲ್ಲಿ ನಮ್ಮ ವೀರಶೈವ ಆಚಾರ್ಯರೂ, ಪಂಡಿತರೂ ರಚಿಸಿರುವ ಉತ್ತಮ ಗ್ರಂಥಗಳನ್ನು ಶ್ರೀಕಾಶೀನಾಥಪಂಡಿತರು ಸಂಶೋಧಿಸಿ ಅವುಗಳ ಪುನರುದ್ಧಾರಮಾಡಿದುದನ್ನು ನಿಮ್ಮ ನೆನಪಿಗೆ ತಂದುಕೊಡುತ್ತೇನೆ. ಶೈವೋಪನಿಷತ್ಸಂಗ್ರಹ, ಶಿವಾದ್ವೈತ ಪರಿಭಾಷಾ, ಸಿದ್ಧಾಂತಸಾರಾವಳಿ, ವಿವೇಕಮುಕ್ತಾವಳಿ, ವಿಚಾರ ಸಾರಾವಳಿ, ಶಿವಾಗಮಸಂಗ್ರಹ, ಲಿಂಗಧಾರಣ ಚಂದ್ರಿಕಾ, ಮಹಾನಾರಾಯಣೋಪನಿಷತ್ತು, ನಂದಿಕೇಶ್ವರಕಾರಿಕಾ, ಶಿದ್ಧಾಂತಶಿಖಾಮಣಿ, ಶಿವಾದ್ವೈತಮಂಜರಿ, ಇನಿಷ್ಟು ಗ್ರಂಥಗಳನ್ನು ಬಹು ಪರಿಶ್ರಮಪಟ್ಟು ಸಂಶೋಧಿಸಿ ಮತ್ತು ವಿಶೇಷ ಧನವ್ಯಯಮಾಡಿ ಮುದ್ರಣ ಗೊಳಿಸಿ ಕರ್ನಾಟಕದಲ್ಲಿ ಪ್ರಚಾರಕ್ಕೆ ತಂದು ವೀರಶೈವ ಸನಾತನ ಪ್ರಾಚೀನ ಕವಿಗಳ ಸೇವೆಯನ್ನು ತುಂಬಾ ಆಸಕ್ತಿಯಿಂದ ಮಾಡಿದವರಾಗಿರುತ್ತಾರೆ. ಈ ಉದ್ಗ್ರಂಥಗಳಲ್ಲಿ ಬೋಧಕವಾಗಿರುವ ವೀರಶೈವ ಸಿದ್ಧಾಂತ ವಿಷಯವು ಸಕಲ ಪಂಡಿತರಿಗೂ ಸರ್ವಮಾನ್ಯ ವಿಷಯವಾಗಿದೆ.

"ವೀರಶೈವರತ್ನ" ಈ ಗ್ರಂಥವು ಪಂಡಿತ ಕಾಶೀನಾಥಶಾಸ್ತ್ರಿಗಳವರು ರಚಿಸಿರುವ ಉದ್ಗ್ರಂಥ ಹಾಗೂ ಪ್ರಿಯಗ್ರಂಥವಾಗಿದೆ. ಈ ಗ್ರಂಥದಲ್ಲಿ ಶ್ರೀಜಗದ್ಗುರು ಪಂಚಪೀಠಗಳ ಪ್ರಾಚೀನೇತಿಹಾಸವನ್ನೂ ಹಾಗು ಪಂಡಿತರು

ಪೀಠಗಳಿಗೆ ಸಲ್ಲಿಸಿದ ಸೇವೆಯನ್ನೂ ತೋರಿಸಿದೆ. ಮತ್ತು ಮೈಸೂರು ನಗರದಲ್ಲಿ ನೆರವೇರಿದ ದಾರುಕಾಚಾರ್ಯರ ಜಯಂತಿಯ ಕಾಲಗಳಲ್ಲಿ ಶಾಸ್ತ್ರಿಗಳು ಮಾಡಿದ ಭಾಷಣಗಳ ವಿಷಯ ಸಂಗ್ರಹವು ಚನ್ನಾಗಿ ಪ್ರತಿಬಿಂಬಿತವಾಗಿದೆ. ವೀರಶೈವ ಪ್ರಾಚೀನ ಯುಗ ಯುಗಾಂತರ ಇತಿಹಾಸವನ್ನೂ, ವಿದೇಶಗಳಲ್ಲಿ ಸಹ ನೆಲಸಿದ್ದ ಶಿವಭಕ್ತಿ ಪ್ರಭಾವವನ್ನೂ ವೇದಾಗಮಗಳ ಆಧಾರ ಪೂರ್ವಕ ಆಚಾರ್ಯರ ತತ್ವಸಮರ್ಥನೆಯನ್ನೂ ಮತ್ತು ವೀರಶೈವ ಶಕ್ತಿವಿಶಿಷ್ಟಾ ದ್ವೈತಸಿದ್ಧಾಂತವನ್ನೂ ಶಿವಯೋಗ ಮಾರ್ಗವನ್ನೂ ಶಾಸ್ತ್ರೀಯ ಗ್ರಂಥಾ ಧಾರಪೂರ್ವಕವಾಗಿ ಅನೇಕ ವಿದ್ವಾಂಸರ ಸದಭಿಪ್ರಾಯದ ಉದಾಹರಣೆಗಳ ಮೇರೆಗೆ ಸಂಗ್ರಹಿಸಿ ಬೋಧಿಸಿದ ವಿಷಯವು ಬಹುಸ್ತುತ್ಯಾರ್ಹವಾದು ದಾಗಿದೆ. ವೀರಶೈವರ ಮುಖ್ಯ ವಿಚಾರಗಳಿರುವ ಈ ಗ್ರಂಥಕ್ಕೆ ವೀರಶೈವ ರತ್ನವೆಂಬ ಹೆಸರು ಸಲ್ಲತಕ್ಕದ್ದಾಗಿದೆ.

"ಶ್ರೀಕರಭಾಷ್ಯ" ಈ ಗ್ರಂಥವು ಶ್ರೀಪತಿಪಂಡಿತರಿಂದ ರಚಿಸಲ್ಪಟ್ಟಿದೆ. ಈ ಭಾಷ್ಯೆಯಲ್ಲಿ ಶಕ್ತಿವಿಶಿಷ್ಟಾದ್ವೈತಪ್ರತಿಪಾದನೆಯು ಬಹು ಸೊಗಸಾಗಿ ತೋರುತ್ತಿದೆ. ಈ ಗ್ರಂಥದ ಚತುಃಸೂತ್ರಕ್ಕೆ ಮಾತ್ರ ನಮ್ಮ ಪಂಡಿತರು ಒಳ್ಳೇ ವ್ಯಾಖ್ಯಾನವನ್ನು ಬರೆದು ಪ್ರಕಾಶಗೊಳಿಸಿದ್ದಾರೆ. ಈ ಗ್ರಂಥವು ಸಂಪೂರ್ಣವಾಗಿ ಇವರ ಹಸ್ತದಲ್ಲೇ ಕನ್ನಡ ವ್ಯಾಖ್ಯಾನದಿಂದ ಪ್ರಕಾಶ ವಾಗಬೇಕಾಗಿತ್ತು. ಪರಂತು ದೈವಲೀಲೆಯನ್ನು ಹೇಳಲು ಸಾಧ್ಯವಿಲ್ಲ. ಶಾಸ್ತ್ರಿಗಳ ಕೊನೆಯ ಪ್ರಯತ್ನದ ಉದ್ಗ್ರಂಥ ಇದಾಗಿರುತ್ತದೆ.

"ವೀರಶೈವಮಹಾತ್ಮರು" ಈ ಗ್ರಂಥವು ಚಿಕ್ಕದಾಗಿದ್ದರೂ ಅಸದೃಶರಾದ ಮಹಾತ್ಮರ ತತ್ವಜೀವನದ ಬೆಳಕನ್ನು ಹೊರಚಲ್ಲಿದೆ. ವೀರಶೈವ ಧರ್ಮಕ್ಕಾಗಿ ದುಡಿದು ಮುಂದಿನವರಿಗೆ ಮಾರ್ಗ ತೋರಿಸಿದಂಥವರ ಚರಿತ್ರೆ ಗಳು ಇದರಲ್ಲಿ ಸ್ಮರಣಾರ್ಹಗಳಾಗಿವೆ. ಅಂಥವುಗಳನ್ನು ಕೈಗನ್ನಡಿಯಾಗಿ ತೋರಿಸಿಕೊಟ್ಟಿರುವ ನಮ್ಮ ಪಂಡಿತ ಕಾಶೀನಾಥಶಾಸ್ತ್ರಿಗಳ ಪ್ರಯತ್ನವು ಸ್ತುತ್ಯವಾದುದು.

ಪಂಡಿತರಲ್ಲಿ ಭಾಷಣಮಾಡುವ ಶೈಲಿ, ವಿಮರ್ಶ ಲೇಖನ ಬರೆಯುವ ಸಿಸ್ತು, ಕವಿತೆಗಳನ್ನು ಬರೆಯುವ ಜಾಣ್ಮೆ, ಪ್ರೌಢಸಂಸ್ಕೃತದ ಧಾರ್ಮಿಕ ಗ್ರಂಥಗಳಿಗೆ ವ್ಯಾಖ್ಯಾನ ಬರೆಯುವ ವೈಶಿಷ್ಟ್ಯ, ಇವೆಲ್ಲ ಕಲೆಗಳು ನೈಜವಾಗಿ

ಬಂದವುಗಳಾಗಿದ್ದವು. ಹೀಗೆ ಬರಬೇಕಾದರೆ "ನಾನೃಷಿಃ ಕೃರುತೇಕಾವ್ಯಂ" ಎಂಬುಕ್ತಿಯಂತೆ ಇವರಲ್ಲಿ ಋಷಿ ಅಂಶ ಅಥವಾ ದೇವಾಂಶವು ಸ್ವತಃ ಸಿದ್ಧವಾಗಿತ್ತೆಂದು ಘಂಟಾಘೋಷವಾಗಿ ಹೇಳಬಲ್ಲೆವು. ಅಖಿಲಭಾರತ ವೀರಶೈವ ಸಾಮ್ರಾಜ್ಯದಲ್ಲಿ ಈ ಧೀರೋದಾತ್ತ ಪಂಡಿತರು ಆಗಿಹೋದಂತೆ ಹಿಂದೆ ಯಾವ ವ್ಯಕ್ತಿಯೂ ಆಗಿಹೋಗಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಯಾವ ಪಂಡಿತನೇ ಆಗಲಿ ತನ್ನ ವಿದ್ವತ್ ಶಕ್ತಿಯನ್ನೂ, ಸಮಾಜೋನ್ನತಿಯನ್ನೂ ವಿಕಾಸಗೊಳಿಸಿ ತನ್ನ ಜೀವನವನ್ನು ಸಾರ್ಥಕ ಮಾಡಿಕೊಳ್ಳಲೇಬೇಕು. ಅಂದರೆ ಧರ್ಮದಲ್ಲಿ ಅವನ ಕೀರ್ತಿವಲ್ಲರಿಯು ಹಬ್ಬದೆ ಇರಲಾರದು. ಆ ಪ್ರಕಾರ ಈ ನಮ್ಮ ಕಥಾನಾಯಕರ ಜೀವನ ಚರಿತ್ರೆಯು ಜಗತ್ತಿನಲ್ಲಿ ದಿಗ್ದರ್ಶನವಾಗದೆ ಇರಲಾರದೆಂದೇ ನನ್ನ ನಂಬಿಕೆಯಾಗಿದೆ.

ಶ್ರೀರೇಣುಕವಿಜಯ ಈ ಗ್ರಂಥವನ್ನು ಮೊದಲು ಸಂಸ್ಕೃತದಲ್ಲಿ ಸಿದ್ಧನಾಥ ಕವಿಯು ಬರೆದಿದ್ದಾನೆ. ಬೊಮ್ಮರಸಕವಿಯು ಕನ್ನಡ ಷಟ್ಪದಿಯಲ್ಲಿ ಬರೆದಿದ್ದಾನೆ. ವೀರಭದ್ರಶಿವಾಚಾರ್ಯ ಕವಿಯುಕೂಡ ಕನ್ನಡ ಷಟ್ಪದಿಯಲ್ಲಿ ಬರೆದಿದ್ದಾನೆ. ಆದರು ಇವೆಲ್ಲ ಪ್ರತಿಗಳು ಹಳೇತರಗಳಾಗಿ ಕೊಂಡುಕೊಳ್ಳುವವರಿಗೆ ಸಿಗದಂತಾಗಿ ಹೋಗಿದ್ದವು. ಆ ಪ್ರಯುಕ್ತ ಈಗಿನ ನವೀನ ಕವಿಗಳಿಂದ ಪುನಃ ಬರೆಸುವುದು ವಿಹಿತವೆಂದು ತಿಳಿದು ಆಸ್ಥಾನ ಮಹಾವಿದ್ವಾನ್ ಪಂಡಿತ ಸಿರ್ಸಿ ಗುರುಶಾಂತಶಾಸ್ತ್ರಿಗಳವರಿಂದ ಗದ್ಯರೂಪದಲ್ಲಿ ಬರೆಯಿಸಿ ಪೂಜ್ಯ ಮಹಿಮಾಚಾರ್ಯರ ಪವಾಡಗಳನ್ನು ಸರ್ವತ್ರ ಪ್ರಕಾಶಪಡಿಸಿದವರಾಗಿದ್ದಾರೆ. ಈ ಗ್ರಂಥವು ಓದಲು, ನೋಡಲು, ಸ್ವಾರಸ್ಯ ತಿಳಿಯಲು, ಬಹು ಮನೋರಂಜನೆಯುಳ್ಳದ್ದಾಗಿದೆ.

ಶ್ರೀರೇಣುಕವಿಜಯಪುರಾಣ ಈ ಗ್ರಂಥವು ಭಾಮಿನೀ ಷಟ್ಪದಿಯ ರೂಪದಲ್ಲಿದ್ದು ನಂಜನಗೂಡು ಶ್ರೀಕಂಠಶಾಸ್ತ್ರಿಗಳವರಿಂದ ರಚಿಸಲ್ಪಟ್ಟಿರುತ್ತದೆ. ಇದು ಸಾಧಾರಣ ಪಂಡಿತರೂ ಕೂಡ ಹಳ್ಳಿಪಟ್ಟಣಗಳಲ್ಲಿ ಬೋಧಿಸುವಂತೆ ಅನುಕೂಲವಾಗಿರುತ್ತದೆ. ವಾಚಕರ ಭಕ್ತಿಯ ಹೆಚ್ಚಳಕ್ಕೆ ಅನುಕೂಲವಾಗುವಂತೆ, ಅಲ್ಲಲ್ಲಿ ಶ್ರೀಜಗದ್ಗುರು ರೇಣುಕಾಚಾರ್ಯರ ಲೀಲೆಗಳಿಂದ ಕೂಡಿರುವ ಮನೋಹರವಾದ ಫೋಟೋಗಳು ಪುರಾಣಗ್ರಂಥಕ್ಕೆ ಹೆಚ್ಚಿನ ಕಳೆಕೊಟ್ಟಿರುತ್ತವೆ.

ನಮ್ಮ ಪಂಡಿತರು ಕಾಶಿವಾಸಿಗಳಿದ್ದಾಗ ಒದಗಿರುವ ದುರ್ವಾದ ದೂರೀಕರಣವೆಂಬ ಗ್ರಂಥವೇ ಮೊದಲನೆಯದಾಗಿದೆ. ಅದರ ತರುವಾಯ ಕಾಶೀಪೀಠದ ಪ್ರಾಚೀನತ್ವ, ಎಂಬ ಪುಸ್ತಕ್ತಿಗೆ ಹೊರಬಿದ್ದಿದೆ. ಇವುಗಳ ನಿರ್ಮಾಣದಿಂದಲೇ ಪಂಡಿತರು ಗ್ರಂಥಕರ್ತರೆಂಬುದು ಸಮಾಜಕ್ಕೆ ಒಡೆದು ಕಾಣಿಸಿದಂತೆ ಮುಂದೆ ಲೋಕಪ್ರಸಿದ್ಧ ಲೇಖಕರಾದರು

ಶಾಸ್ತ್ರಿಗಳವರು ಸಂಸ್ಕೃತದಲ್ಲಿ ಕವಿಗಳಾಗಿದ್ದರಿಂದ ಶ್ರೀಜಗದ್ಗುರು ಪಂಚಾಚಾರ್ಯರ ಮೇಲೆ ಅನೇಕ ಸ್ತೋತ್ರಗಳನ್ನು ಬರೆದು ಚಿಕ್ಕ ಚಿಕ್ಕ ಭಜನಾವಳಿಗಳನ್ನು ಪ್ರಕಟನೆಗೊಳಿಸಿದರು. ವೈದಿಕ ಮಂತ್ರಗಳನ್ನು ಸಂಗ್ರಹಿಸಿ ಸಂಕ್ಷಿಪ್ತ ಶಿವಪೂಜಾವಿಧಿಯನ್ನು ಪ್ರಸಿದ್ಧಪಡಿಸಿ ಶಿವಭಕ್ತರಿಗೆ ಉಪಕಾರ ಮಾಡಿದರು. ಅನೇಕ ಕವಿಗಳಿಂದ ಪಂಚಾಚಾರ್ಯರ ಸ್ತೋತ್ರ, ಮಂಗಳಾರುತಿ, ಪಂಚಕ, ದಂಡಕ ಮೊದಲಾದವುಗಳನ್ನು ಬರೆಯಿಸಿ ಸ್ತೋತ್ರರತ್ನಾಕರವೆಂಬ ಗ್ರಂಥವನ್ನು ಕೂಡ ಪ್ರಕಟಣೆಗೊಳಿಸಿದವರಾದರು. ಅನೇಕ ವಿದ್ವಜ್ಜನರು ಬರೆದ ಶಾಸ್ತ್ರೀಯ ಗ್ರಂಥಗಳನ್ನು ಅವರು ನಮ್ಮ ಶಾಸ್ತ್ರಿಗಳ ಕಾಶೀನಾಥ ಗ್ರಂಥಮಾಲೆಗೆ ಅರ್ಪಿಸಿದ್ದವುಗಳನ್ನೆಲ್ಲ ಮುದ್ರಣಗೊಳಿಸಿ ಪ್ರಕಾಶಪಡಿಸಿದರು.

ಪ್ರಭಾಪತ್ರಿಕೆಯಲ್ಲಿ ನಿರಂತರ ಶಾಸ್ತ್ರಸಮ್ಮತ ಲೇಖನಗಳನ್ನು ಬರೆದು ಅಜ್ಞಜನರ ಅನಾಚಾರಗಳನ್ನು ಅಸದ್ವರ್ತನೆಗಳನ್ನು ತಿದ್ದಿ ಆ ಯಾವ ಶ್ರೀಪಂಚಾಚಾರ್ಯರಲ್ಲಿ ಭಕ್ತಿಭಾವನೆ ಹುಟ್ಟಿ ಬೆಳೆಯುವಂತೆ ಮಾಡಿದರು. ಈ ಪ್ರಭಾಪತ್ರಿಕೆಯು ಇಲ್ಲಿಗೆ ೩೩ ವರ್ಷಗಳಾಗುತ್ತ ಬಂದರೂ ಅವರ ಸಂಕಲ್ಪಕ್ಕೆ ಚ್ಯುತಿಬರದಂತೆ ಪ್ರಕಟವಾಗುತ್ತಿದೆ. ಸದ್ಯಃ ಶಾಸ್ತ್ರಿಗಳ ಸಹೋದರರಾದ ವೇ|| ಮಹಾದೇವಯ್ಯನವರೇ ಅದರ ಸಂಪಾದಕರಾಗಿ ಕಾರ್ಯ ನಡೆಸುತ್ತಿದ್ದಾರೆ. ಈ ಪತ್ರಿಕೆಯು ಶ್ರೀಯುತರ ನಂತರ ಇವರ ವಂಶಪರಂಪರವಾಗಿ ಇನ್ನೂ ಅನಂತಸಂಪಾದಕರಿಂದ ಉಳಿದು ಚಿರಕಾಲ ಬಾಳಲೆಂದು ಹಾರೈಸುತ್ತೇನೆ.

# ಧರ್ಮಸಂದೇಶ

## ದೇವರಿದ್ದಾನೆ

ಈ ಪ್ರಪಂಚದಲ್ಲಿರುವ ಪ್ರತಿಯೊಬ್ಬರೂ ಯಾವ ಕೆಲಸವನ್ನು ಮಾಡ ಬೇಕಾದರೂ ದೇವರೊಬ್ಬನು ಇದ್ದಾನೆ. ಆತನು ನಾವು ಮಾಡುವ ಕಾರ್ಯಗಳ ಬಲಾಬಲಗಳನ್ನು ನೋಡಿ ಫಲಗಳನ್ನು ಕೊಡುತ್ತಾನೆಂಬ ದೃಢವಾದ ನಂಬಿಕೆಯನ್ನಿಟ್ಟುಕೊಂಡೇ ಕೆಲಸ ಮಾಡಬೇಕು. ಸರ್ವಸಾಕ್ಷಿಯಾದ ದೇವರನ್ನೇ ಮರೆತು ಕೆಲಸ ಮಾಡುವವನಿಗೆ ಯಾವ ಕೆಲಸಗಳೂ ಕೈಗೂಡು ವುದಿಲ್ಲ. ದೇವರು ನಮ್ಮನ್ನು ಸೃಷ್ಟಿಮಾಡಿ, ಸಕಲವಾದ ಐಹಿಕ ಸೌಖ್ಯ ವನ್ನು ಹೊಂದಿ ಪುನಃ ತನ್ನಲ್ಲಿಯೇ ಕ್ಷೇಮ ನಿತ್ಯ ಸುಖಪಡೆಯಲೆಂಬ ಸಂಕಲ್ಪ ದಿಂದ ನಮಗೆ ಬುದ್ಧಿ ಜ್ಞಾನೇಂದ್ರಿಯಾದಿ ಸಕಲ ಸಾಮಗ್ರಿಯನ್ನು ದಯ ಪಾಲಿಸಿದ ಮೇಲೆ, ಅಂಥ ದೇವರನ್ನೇ ಮರೆತು ದೇವರ ಸಂಕಲ್ಪಕ್ಕೆ ವಿರುದ್ಧ ವಾಗಿ ನಡೆಯುವುದು ಮಾನವನ ಕರ್ತವ್ಯವಲ್ಲವೆಂಬುವುದನ್ನು ಜ್ಞಾನಿ ಗಳೆಲ್ಲರೂ ತಿಳಿದೇ ಇರುತ್ತಾರೆ. ಇಂಥ ದೇವರು ನಮ್ಮ ಕಣ್ಣಿಗೆ ಗೋಚರನಲ್ಲ ದಿದ್ದರೂ ಆ ದೇವರನ್ನು ನಿಶ್ಚಯಿಸುವುದಕ್ಕಾಗಿ ಸರ್ವಜ್ಞರಾದ ನಮ್ಮ ಋಷಿಗಳು ನಾಲ್ಕು ಪ್ರಮಾಣಗಳನ್ನು ಹೇಳಿರುತ್ತಾರೆ. ಅವುಗಳೇ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದಪ್ರಮಾಣಗಳೆಂದು ಹೇಳಿಸಿಕೊಳ್ಳಲ್ಪಡುತ್ತವೆ. ಅವುಗಳಲ್ಲಿ ಚಕ್ಷುರಾದೀಂದ್ರಿಯ ಸಹಾಯದಿಂದ ಉಂಟಾಗುವ ಜ್ಞಾನವೇ ಪ್ರತ್ಯಕ್ಷಪ್ರಮಾಣವು. ಕಣ್ಣಿಗೆ ಕಾಣಿಸದ ವಸ್ತುವನ್ನು ಮತ್ತೊಂದರಿಂದ ಊಹಿಸಿ ತಿಳಿಯುವುದೇ ಅನುಮಾನ ಪ್ರಮಾಣವು. ಯಾವುದಾದರೊಂದು ಹೋಲಿಕೆಯಿಂದ ವಸ್ತುಜ್ಞಾನವನ್ನು ಪಡೆಯುವುದೇ ಉಪಮಾನ ಪ್ರಮಾ ಣವು. ಆಪ್ತವಾಕ್ಯವೇ ಶಬ್ದಪ್ರಮಾಣವು. ಈ ನಾಲ್ಕು ಪ್ರಮಾಣಗಳ ಸಹಾ ಯದಿಂದಲೇ ದೇವರಿದ್ದಾನೆಂಬುದನ್ನು ನಾವು ನಿಶ್ಚಯಿಸಿಕೊಳ್ಳಬೇಕಾಗಿದೆ. ಯಥಾರ್ಥವಾದ ಜ್ಞಾನವನ್ನುಂಟುಮಾಡಿಕೊಡುವುದಕ್ಕೆ ಸಾಧನವಾದುದ ರಿಂದಲೇ ಇವಕ್ಕೆ ಪ್ರಮಾಣವೆಂಬ ಹೆಸರು ಬಂದಿರುತ್ತದೆ.

ಲೋಕದಲ್ಲಿ ಅನಂತರಾಜರೂ ಧನಿಕರೂ ಇದ್ದಾರೆ. ಇಂಥವರಿಗೆ ಧನಕನ ಕಾದಿಸಾಮಗ್ರಿಗಳು ಬೇಕಾದಷ್ಟು ಇದ್ದರೂ ಇವರ ಮನೋರಥದಂತೆ ನಡೆ

ಯದಿದ್ದುದನ್ನು ನಾವು ಕಣ್ಣಿನಿಂದ ನೋಡುತ್ತಲಿದ್ದೇವೆ. ಯಾವುದೊಂದು ಸಹಾಯ ಸಂಪತ್ತನ್ನು ಪಡೆಯದೆ ಇದ್ದ ದರಿದ್ರನು ಆಕಸ್ಮಿಕವಾಗಿ ತನ್ನ ಬಯಕೆಗಳನ್ನೆಲ್ಲಾ ಪಡೆದುದನ್ನೂ ನಾವು ಕಾಣುತ್ತಲಿದ್ದೇವೆ. ಇದರಿಂದ ದೇವರಿದ್ದಾನೆಂಬುದು ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧವಾಗುತ್ತದೆ. ಕೋಟೆ ಕಂದಕ ಗೋಪುರ ಪ್ರಾಸಾದ ಮೊದಲಾದವುಗಳನ್ನು ನೋಡಿ ಇವು ಯಾವನೋ ಒಬ್ಬ ಉತ್ತಮ ಶಿಲ್ಪಿಯಿಂದ ರಚಿಸಲ್ಪಟ್ಟಿರಬಹುದೆಂದು ಊಹಿಸಿ ನಿಶ್ಚಯಿಸುವಂತೆ ಅದ್ಭುತವಾದ ಈ ಚರಾಚರಾತ್ಮಕವಾದ ಪ್ರಪಂಚ ವನ್ನು ನೋಡಿ ಈ ಪ್ರಪಂಚವನ್ನು ಸೃಷ್ಟಿಸಿದ ಕರ್ತನೊಬ್ಬನಿದ್ದಾನೆಂದು ತಿಳಿಯುವುದೇ ಅನುಮಾನ ಪ್ರಮಾಣವೆನಿಸುತ್ತದೆ. ಇನ್ನು ಸೃಷ್ಟಿಕರ್ತನಾದ ದೇವರು ಆಕಾಶಾದಿಗಳಂತೆ ವ್ಯಾಪ್ತನೂ ಪದ್ಮಪತ್ರದಂತೆ ನಿರ್ಲಿಪ್ತನೂ ಎಂದು ಅನೇಕ ಪದಾರ್ಥಗಳೊಡನೆ ಹೋಲಿಸಿ ದೇವರ ಸ್ವರೂಪವನ್ನು ತಿಳಿಯು ವುದೇ ಉಪಮಾನ ಪ್ರಮಾಣವೆನಿಸುವುದು. ದೇವರು ತಾನು ಸೃಷ್ಟಿಸಿದ ಪ್ರಪಂಚಕ್ಕೆ ಹಿತಾಹಿತ ಬೋಧೆಗಳನ್ನು ಮಾಡಿ ತನ್ನ ಸ್ವರೂಪವನ್ನು ವಿವರಿಸಿರುವ ವೇದವೇ ಶಬ್ದಪ್ರಮಾಣವು. ಈ ನಾಲ್ಕು ವೇದಪ್ರಮಾಣಗಳ ಸಹಾಯದಿಂದ ದೇವರುಂಟು, ಪರಲೋಕವುಂಟು, ಪುಣ್ಯಪಾಪಗಳುಂಟು ಎಂಬುದಾಗಿ ನಿಶ್ಚಯಿಸಿ, ಪ್ರತಿಯೊಬ್ಬ ಮಾನವನು ದೇವರ ಆಜ್ಞೆಗೆ ವಿರೋಧ ವಿಲ್ಲದಂತೆ ಈ ಪ್ರಪಂಚವೆಂಬ ರಂಗಸ್ಥಲದಲ್ಲಿ ನಿಯಮದಿಂದಲೂ ವ್ಯವಹರಿಸ ಬೇಕಲ್ಲದೆ ಪ್ರಪಂಚ ನಾಟಕಕರ್ತನೂ ಸೂತ್ರಧಾರಿಯೂ ಆದ ದೇವರನ್ನೇ ಮರೆತು ಸ್ವೇಚ್ಛೆಯಾಗಿ ವ್ಯವಹರಿಸಬಾರದು. ಅಂಥ ಸ್ವೇಚ್ಛಾವಿಹಾರಿಗಳನ್ನು ನೋಡಿ ದೇವರು ಕೋಪಿಸಿಕೊಳ್ಳುವನಲ್ಲದೆ ಪ್ರೀತಿಪಡುವುದಿಲ್ಲ. ಬೇರು ಹೇಗೆ ಕೆಳಗೆ ಇಳಿಯುತ್ತ ಹೋಗುವುದೋ ಹಾಗೆ ಮರವು ಗಟ್ಟಿಗೊಳ್ಳು ವಂತೆ, ದೇವರುಂಟೆಂಬ ನಂಬಿಕೆಯು ಹೇಗೆ ಹೇಗೆ ದೃಢಪಡುತ್ತ ಹೋಗು ವುದೋ ಹಾಗೆ ಹಾಗೆ ಮನುಷ್ಯನು ಶಮದಮಾದಿಗುಣಗಳಿಗಾಕರನಾಗುತ್ತ ಬರುವನು. ಹಿಂದಿನ ಮಹರ್ಷಿಗಳು ಅಂಥ ದೇವರ ಸ್ವರೂಪವನ್ನು ಪಂಡಿತ ಪಾಮರರೆಲ್ಲರಿಗೂ ತಿಳಿಯಪಡಿಸುವುದಕ್ಕಾಗಿಯೇ ಕಾಶೀ ರಾಮೇಶ್ವರಾದಿ ಪವಿತ್ರಕ್ಷೇತ್ರಗಳಲ್ಲಿ ದೇವರ ವಿಗ್ರಹಗಳನ್ನು ಸ್ಥಾಪಿಸಿರುತ್ತಾರೆ. ಈ ವಿಗ್ರಹ ಗಳನ್ನು ನೋಡಿದವರಿಗೆ ದೇವರ ಗುಣಗಳೂ ದೇವರ ರೂಪವೂ ಪ್ರತಿ ಯೊಬ್ಬರ ಸ್ಮರಣಕ್ಕೆ ಬರಲೆಂಬುದೇ ಅವರಮುಖ್ಯ ಉದ್ದೇಶವು.

ಸಾಮಾನ್ಯವಾಗಿ ದೇವರಿದ್ದಾನೆಂದು ತಿಳಿದುಕೊಂಡಿದ್ದರೂ ಆ ದೇವರ ಸ್ವರೂಪ ಸಾಕ್ಷಾತ್ಕಾರವು ಸ್ಥೂಲೋಪಾಸನೆಯಿಲ್ಲದೆ ಬೇರೆ ಮಾರ್ಗದಿಂದ ಯಾರಿಗೂ ಆಗುವುದಿಲ್ಲ. ಹಿಂದೆ ಯಾವ ಋಷಿಗಳೂ ವಿಗ್ರಹಾರಾಧನೆಯಿಲ್ಲದೆ ದೇವರ ಸಾಕ್ಷಾತ್ಕಾರವನ್ನು ಪಡೆದಿರುವುದಿಲ್ಲ. ಆ ಋಷಿಗಳು ತಮ್ಮ ಹೃದಯಾಕಾಶದಲ್ಲಿರುವ ಭಗವಂತನ ಸ್ಮರಣೆಯನ್ನೇ ಸ್ಥಿರಪಡಿಸಿಕೊಳ್ಳುವುದಕ್ಕಾಗಿ ಸುಮುಹೂರ್ತದಲ್ಲಿ ವಿಧ್ಯುಕ್ತವಾದ ಎಷ್ಟೋ ವಿಗ್ರಹಗಳನ್ನು ಸಹ ತಮ್ಮ ಹಸ್ತದಿಂದಲೇ ಸ್ಥಾಪಿಸಿ ಷೋಡಶೋಪಚಾರಗಳಿಂದ ಪೂಜಿಸಿ ಜನಗಳಿಗೆ ದೇವರನ್ನು ಸ್ಮರಿಸುವ ಮಾರ್ಗವನ್ನು ತೋರಿಸಿರುತ್ತಾರೆ. ವೇದಶಾಸ್ತ್ರಪುರಾಣಗಳಂತೂ ದೇವರ ಸ್ವರೂಪದಲ್ಲಿ ದೇವತಾ ವಿಗ್ರಹವನ್ನು ಆರಾಧಿಸದವರಿಗೆ ಭಗವಂತನ ಸಾಕ್ಷಾತ್ಕಾರವೆಂದಿಗೂ ಆಗಲಾರದೆಂದು ಹೇಳುತ್ತಲೇ ಇವೆ. ದೇವರ ಸ್ವರೂಪವು ಗೋವಿನ ಶರೀರದಲ್ಲಿ ಹಾಲು ವ್ಯಾಪಿಸಿಕೊಂಡಿರುವಂತೆ ಎಲ್ಲೆಲ್ಲಿಯೂ ವ್ಯಾಪಿಸಿದ್ದರೂ ಅದರಿಂದ ತನಗೇನೂ ಪ್ರಯೋಜನವಾಗಲಾರದು. ಕೆಚ್ಚಲಿನ ದ್ವಾರಾ ಹಾಲು ಪ್ರತ್ಯಕ್ಷವಾಗುವಂತೆ ವಿಗ್ರಹಾರಾಧನ ದ್ವಾರಾ ದೇವರು ಪ್ರತ್ಯಕ್ಷವಾಗಬೇಕಾಗಿದೆ. ಲೋಕದಲ್ಲಿ ಯಾವ ಕಾರ್ಯವನ್ನಾದರೂ ಸ್ಥೂಲ ಶರೀರದಲ್ಲಿ ಮಾಡದೆ ಕೇವಲ ಮನಸ್ಸಿನಲ್ಲಿ ಸ್ಮರಿಸುತ್ತಿದ್ದರೆ ಆ ಕಾರ್ಯವು ಕೈಗೂಡುವುದಿಲ್ಲ. ದೇವರು ಸಾಮಾನ್ಯವಾಗಿ ಎಲ್ಲಾ ಕಡೆಯಲ್ಲಿದ್ದರೂ ಮಂತ್ರ ಪೂತವಾದ ವಿಗ್ರಹದಲ್ಲಿ ವಿಶೇಷಾಕಾರನಾಗಿರುವನೆಂಬುದೇ ವೇದಾವಲಂಬಿಗಳ ನಂಬಿಕೆಯಾಗಿದೆ. ಇದರಿಂದ ಅಮೂರ್ತನಾದ ದೇವರನ್ನು ನಾವು ತಿಳಿಯಬೇಕಾದರೆ ಮೂರ್ತವಾದ ವಿಗ್ರಹಾರಾಧನೆಯನ್ನು ಮಾಡಲೇಬೇಕೆಂಬುದು ಸಿದ್ಧವಾಗುತ್ತದೆ. ಇಂಥ ವಿಗ್ರಹಾರಾಧನೆಯನ್ನು ತಿರಸ್ಕರಿಸುವ ಕೆಲ ನಾಗರಿಕರು ಈಗ ಅಲ್ಲಲ್ಲಿ ಕಾಣಿಸಿಕೊಳ್ಳುತ್ತಲಿದ್ದಾರೆ. ದೇವರು ರೂಪ ಶೂನ್ಯನಾದಮೇಲೆ ಜಡವಾದ ಕಲ್ಲುಮಣ್ಣಿನಲ್ಲಿ ಮಾಡಿದ ವಿಗ್ರಹವನ್ನೇಕೆ ಪೂಜೆ ಮಾಡಬೇಕೆಂಬುದೇ ಇವರ ಉದ್ಗಾರವಾಗಿದೆ.

ಹೀಗೆ ಹೇಳುವ ಈಗಿನ ನವನಾಗರಿಕರು ತಾವು ನಂಬಿರುವ ಪುರುಷರ ಪ್ರತಿಕೃತಿಗಳನ್ನೂ ಪುಸ್ತಕಗಳನ್ನೂ ಇಟ್ಟು ಪೂಜಿಸುತ್ತಿರುವುದನ್ನು ನೋಡಿದರೆ ಇದೂ ವಿಗ್ರಹಾರಾಧನೆಗೆ ಸೇರುವುದಿಲ್ಲವೇ? ಬಾಯಿಯಲ್ಲಿ ವಿಗ್ರಹಾರಾಧನೆ ಮಾಡಬಾರದೆಂದು ಹೇಳುತ್ತ ತಾವು

ಯಾವಾಗಲೂ ವಿಗ್ರಹಾರಾಧನೆಯನ್ನೇ ಮಾಡುತ್ತಿರುವುದು ಉತ್ತಮ ಲಕ್ಷಣವೇ ? ಲೋಕದಲ್ಲಿ ಪ್ರಸಿದ್ಧ ಪುರುಷರ ಫೋಟೋಗಳಲ್ಲಿ ಆ ಪ್ರಸಿದ್ಧ ಪುರುಷರ ಹಸ್ತಪಾದಾದಿ ನಿಜಸ್ವರೂಪವು ಒಂದೂ ಇಲ್ಲದಿದ್ದರೂ ಆ ಭಾವ ಚಿತ್ರವು ಆ ಪುರುಷರ ಸ್ಮಾರಕವಾಗುವಂತೆ, ದೇವವಿಗ್ರಹಗಳು ದೇವರ ಸ್ಮಾರಕವನ್ನುಂಟುಮಾಡುವುದರಿಂದ ವಿಗ್ರಹದಲ್ಲಿ ದೇವತಾಶಕ್ತಿಯಿದೆ ಎಂದು ಎಲ್ಲರ ಅನುಭವಕ್ಕೂ ಬಂದೇ ಬರುತ್ತದೆ. ಲೋಕದಲ್ಲಿ ತಮ್ಮ ತಂದೆತಾಯಿಗಳ ಫೋಟೋಗಳನ್ನು ನೋಡಿ ಪೂಜ್ಯಬುದ್ಧಿಯಿಂದ ಪೂಜಿಸುವಂತೆ ಈಶ್ವರನ ವಿಗ್ರಹದಲ್ಲಿ ಇದು ಕಲ್ಲು, ಇದು ಮಣ್ಣು ಎಂಬ ದುಷ್ಟಭಾವನೆ ತಾಳದೆ ಈಶ್ವರ ಬುದ್ಧಿಯಿಂದ ಅರ್ಚಿಸುತ್ತಲೂ, ಧ್ಯಾನಿಸುತ್ತಲೂ, ಸ್ಮರಿಸುತ್ತಲೂ ಬಂದರೆ ಆ ವಿಗ್ರಹಾರಾಧನದ್ವಾರಾ ಪರಮೇಶ್ವರನು ಸಾಕ್ಷಾತ್ಕಾರವನ್ನೀಯುವನೆಂದು ತಿಳಿಯುವುದೇ ಸನಾತನ ಧರ್ಮಾನುಯಾಯಿಗಳ ಕರ್ತವ್ಯವಾಗಿರುತ್ತದೆ.

ವಿಚಾರದೃಷ್ಟಿಯಿಂದ ನೋಡಿದರೆ ಈ ಜಗತ್ತನ್ನು ಸೃಷ್ಟಿಸಿದ ಈಶ್ವರನು ಎಲ್ಲರನ್ನು ಅನುಗ್ರಹಿಸುತ್ತಲೂ ಪುತ್ರನಿರ್ವಿಶೇಷದಿಂದ ಕಾಣುತ್ತಲೂ ಇರುವನು. ಪ್ರಪಂಚದಲ್ಲಿರುವ ಎಲ್ಲ ಮಾನವರೂ ಈಶ್ವರನ ಮಕ್ಕಳೇ ಹೌದು. ಆದರೆ ತಂದೆಯು ಹಂಚಿದ ದ್ರವ್ಯವನ್ನು ವಿವೇಕಿಯಾದ ಪುತ್ರನು ಕಾಪಾಡಿಕೊಳ್ಳುತ್ತಾನೆ. ಅವಿವೇಕಿಯು ದುರ್ಮಾರ್ಗದಲ್ಲಿ ಪ್ರವೇಶಿಸಿ ಇದ್ದ ಆಸ್ತಿಯನ್ನೆಲ್ಲಾ ಹಾಳುಮಾಡಿಕೊಂಡು ದರಿದ್ರನಾಗುತ್ತಾನೆ. ಇದರಂತೆ ದುಷ್ಕರ್ಮಗಳನ್ನು ಮಾಡಬಾರದೆಂದು ಈಶ್ವರನು ಆಜ್ಞೆಮಾಡಿದ್ದರೂ ಅವನ ಆಜ್ಞೆಯನ್ನು ಮೀರಿ ದುಷ್ಕರ್ಮವನ್ನು ಮಾಡಿದ್ದರಿಂದ ಈಶ್ವರನು ಕೊಟ್ಟ ದೈವೀಸಂಪತ್ತನ್ನೆಲ್ಲಾ ಹಾಳುಮಾಡಿ ನರಕಹೇತುವಾದ ಅಸುರೀಸಂಪತ್ತನ್ನು ಪಡೆದುಕೊಂಡರೆ ಅದಕ್ಕೆ ತಾನು ಭಾಗಿಯಲ್ಲದೆ ಈಶ್ವರನನ್ನು ಪಕ್ಷಪಾತಿಯೆಂದು ಹೇಳಲಾಗುವುದಿಲ್ಲವು. ತಂದೆಯು ತನ್ನ ಆಸ್ತಿಯನ್ನೆಲ್ಲ ಮಕ್ಕಳಿಗೆ ಸಮನಾಗಿ ಹಂಚಿಕೊಟ್ಟಿದ್ದರೂ ಕೆಲವರು ಕಳೆದುಕೊಂಡು ದುಃಖವನ್ನನುಭವಿಸುತ್ತಿದ್ದರೆ ತಂದೆಯು ತಪ್ಪಿತಸ್ಥನೆಂದು ಹೇಳುವುದಕ್ಕಾಗುವುದಿಲ್ಲವು. ಆದ್ದರಿಂದ "ವ್ಯಾಧೀನಾಂಭೇಷಜಂಯದ್ವತ್ ಪ್ರತಿಪಕ್ಷಂಸ್ವಭಾವತಃ । ಶಿವಸ್ಸಂಸಾರದೋಷಾಣಾಂ ಪ್ರತಿಪಕ್ಷಸ್ಸ್ವಭಾವತಃ" ಔಷಧವು

ರೋಗಗಳಿಗೆಲ್ಲಾ ಹೇಗೆ ವಿರೋಧಿಯಾಗಿರುವುದೋ ಹಾಗೆ ಈಶ್ವರನು ಸಂಸಾರದೋಷಗಳಿಗೆ ವಿರೋಧಿಯಾಗಿರುವುದರಿಂದ ಅನಿಷ್ಟವೂ ದುಃಖ ಮಯವೂ ಆದ ಸಂಸಾರವನ್ನು ಈಶ್ವರನು ಯಾರಿಗೂ ಕೊಡುವವನಲ್ಲ. ಆದರೂ ನಾವಾಗಿಯೇ ನಮ್ಮ ಆತ್ಮರನ್ನು ಅಧೋಗತಿಗೀಡುಮಾಡಿಕೊಂಡಿದ್ದೇವೆ. ಈಶ್ವರನೇನೋ ಎಲ್ಲರನ್ನು ನೋಡುವಂತೆ ನಮ್ಮನ್ನು ಕರುಣಾ ಕಟಾಕ್ಷದಿಂದ ನೋಡುತ್ತಲಿದ್ದರೂ ಆ ಕಟಾಕ್ಷಗಳಿಂದ ಅಪಕ್ವಮತಿಗಳಾದ ನಮ್ಮ ಹೃದಯಕಮಲವು ಅರಳುವಂತೆ ಇಲ್ಲಾ. ಏಕೆಂದರೆ ಲೋಕದಲ್ಲಿ ಸೂರ್ಯಕಿರಣಗಳು ಎಲ್ಲೆಲ್ಲಿಯೂ ಸಮವಾಗಿಯೇ ಬೀಳುವುವಲ್ಲದೆ ಒಂದೆಡೆಯಲ್ಲಿ ಬಿದ್ದು ಒಂದೆಡೆಯಲ್ಲಿ ಬೀಳದಿರುವ ಸ್ವಭಾವವುಳ್ಳವುಗಳಲ್ಲವಷ್ಟೆ, ಅಂತಹ ಸೂರ್ಯಕಿರಣಗಳಿಂದ ಕಮಲಗಳು ಅವಶ್ಯಕವಾಗಿ ಅರಳಬೇಕಾಗಿದ್ದರೂ ಚೆನ್ನಾಗಿ ಪಕ್ವವಾದ ಕಮಲಗಳುಮಾತ್ರ ಅರಳುತ್ತವೆಯೇ ಹೊರತು ಅಪಕ್ವಗಳಾದ ಕಮಲಗಳು ಅರಳುವುದಿಲ್ಲವು. ಅದರಂತೆ ಈಶ್ವರನ ಕರುಣಾಮಯವಾದ ಅನುಗ್ರಹ ಕಿರಣವು ಎಲ್ಲರ ಮೇಲೆ ಬಿದ್ದರೂ ಯಾರು ಪಕ್ವಮನಸ ರಾಗಿದ್ದಾರೆಯೋ ಅವರೀ ಈ ದುಃಖಮಯ ಸಂಸಾರದಿಂದ ಬಿಡುಗಡೆಯನ್ನು ಹೊಂದುವರು. ಯಾರು ಪಕ್ವಮನರಲ್ಲವೋ ಅವರು ಕಾಲಕ್ರಮದಿಂದ ಮುಕ್ತರಾಗುತ್ತಾರಲ್ಲದೆ ಆ ಕ್ಷಣದಲ್ಲಿಯೇ ಮುಕ್ತರಾಗುವದಿಲ್ಲವು. ಆದ್ದರಿಂದ ಈ ದಿವಸ ಅಪಕ್ವಗಳಾದ ಕಮಲಗಳು ಸೂರ್ಯಕಿರಣಗಳಿಂದ ಅರಳದೆ ಇದ್ದರೂ ನಾಳೆಯಾದರೂ ಪಕ್ವಗಳಾಗಿ ವಿಕಸನವನ್ನು ಹೊಂದೇ ಹೊಂದುವವು. ಈ ದಿವಸ ಪರಮೇಶ್ವರನು ಪಾಪಿಗಳನ್ನು ಬಂಧನದಿಂದ ಬಿಡುಗಡೆಮಾಡದೆ ಪುಣ್ಯಜೀವಿಗಳನ್ನು ಬಿಡುಗಡೆಮಾಡಿದರೂ ಮುಂದು ಮುಂದಾದರೂ ಪಾಪಿಗಳ ಪಾಪವನ್ನು ನಾಶಗೊಳಿಸಿ ಉದ್ಧರಿಸಿಯೇ ಉದ್ಧರಿಸುವನು. ಕೆಲವು ಕಮಲಗಳು ಅರಳಿ ಕೆಲವು ಅರಳದೆ ಇರುವುದಕ್ಕೆ ಆಯಾಯ ಕಮಲಗಳ ಪಕ್ವ ಅಪಕ್ವತೆಗಳೇ ಕಾರಣಗಳಲ್ಲದೆ ಸೂರ್ಯನನ್ನು ಪಕ್ಷಪಾತಿಯೆಂದು ಹೇಳಲಾಗುವುದಿಲ್ಲ. ಈಶ್ವರನು " ಈಶ್ವರೇಣ ಸಮಮೇವ ಸರ್ವೇಷಾಂ ಅನುಗ್ರಹೇ ಕ್ರಿಯಮಾಣೇಪಿ ಯೇಪಕ್ವಮಲಾಃ ತೇ ಮುಚ್ಯಂತೇ । ಅಪಕ್ವಮಲಾಸ್ತು ಕಾಲಕ್ರಮಾದೇವ ॥ ಎಂಬ ಮಹಾ ಭಾಷ್ಯೋಕ್ತಿಯಂತೆ ಎಲ್ಲರಲ್ಲಿಯೂ ಸಮವಾಗಿ ತನ್ನ ಕರುಣಾಕಟಾಕ್ಷವನ್ನು ಬೀರುತ್ತಿದ್ದರೂ ಪಕ್ವಾಂತಃಕರಣರಲ್ಲಿ ಮಾತ್ರ ಅದು ವ್ಯಾಪಿಸುವುದಲ್ಲದೆ ಅಪ

ಕ್ವಾಂತಃಕರಣದಲ್ಲಿ ವ್ಯಾಪಿಸುವದಿಲ್ಲ. ಆದ್ದರಿಂದ ಪ್ರತಿಯೊಬ್ಬ ಮಾನವನೂ ಮೇಲೆ ಹೇಳಿದ "ರಮಣೀಯ ಚರಣಾಃ" ಎಂಬ ಈಶ್ವರೋಕ್ತಿಯನ್ನು ಸಾವಧಾನದಿಂದ ಆಲಿಸಿ ಪಾಪಕರ್ಮಗಳನ್ನು ಬಿಡುತ್ತಾ ಈಶ್ವರ ಪೂಜಾದಿರೂಪ ಪುಣ್ಯಕರ್ಮಗಳನ್ನು ಮಾಡಿ ಪರಿಶುದ್ಧರಾಗುತ್ತಾ ಬಂದರೆ ಚನ್ನಾಗಿ ಒಲಿತ ಕಮಲಗಳ ಮೇಲೆ ಬಿದ್ದ ಸೂರ್ಯಕಿರಣಗಳಂತೆ ಸರ್ವತೋಮುಖವಾಗಿರುವ ಈಶ್ವರಾನುಗ್ರಹವೆಂಬ ಕಿರಣಗಳು ಫಲಿಸಿದಂತಾಗುವವು. "ವೈದ್ಯಂವಿನಾ ನಿರಾನಂದಾಃ ಕ್ಲಿಶ್ಯಂತೇ ರೋಗಿಣೋ ಯಥಾ। ಶಿವಂವಿನಾನಿರಾನಂದಂ ಕ್ಲಿಶ್ಯಂತೇಹಿ ಜಗತ್ತಥಾ॥ ರೋಗಿಗಳು ವೈದ್ಯರಿಲ್ಲದಿದ್ದರೆ ಆನಂದ ಶೂನ್ಯರಾಗಿ ಯಾವಾಗಲೂ ದುಃಖಪಡುತ್ತಲೇ ಇರುವಂತೆ ಸಂಸಾರರೋಗಕ್ಕೆ ಮಹಾವೈದ್ಯನಾದ ಶಿವನಿಲ್ಲದಿದ್ದರೆ ಜನಗಳು ಯಾವಾಗಲೂ ಆನಂದಶೂನ್ಯರಾಗಿ ದುಃಖವನ್ನು ಅನುಭವಿಸಬೇಕಾಗುವುದು. ಆದುದರಿಂದ ದುಃಖಮಯವಾದ ಜನನಮರಣಾತ್ಮಕ ಮಹಾರೋಗವನ್ನು ಪರಿಹರಿಸಿ ನಿತ್ಯಸುಖಿಗಳಾಗಬೇಕಾದರೆ ಮಹಾವೈದ್ಯನಾದ ಈಶ್ವರನನ್ನು ಧ್ಯೇಯವಾಗಿಟ್ಟುಕೊಂಡು ಪುಣ್ಯಕರ್ಮಾಚರಣೆಗಳನ್ನು ಮಾಡುತ್ತಬಂದರೆ ಪರಿಪಕ್ವಗಳಾದ ಕಮಲದ ಮೊಗ್ಗೆಗಳನ್ನು ಅರಳಿಸುವ ಸೂರ್ಯನಂತೆ ಪರಮಾತ್ಮನು ಅಂತಹ ಪರಿಪಕ್ವಾಂತಃಕರಣರನ್ನು ಉದ್ಧರಿಸುವುದೇ ಆತನ ಪರಮೋದ್ದೇಶವಾಗಿರುತ್ತದೆ. ಬಂಧಮೋಕ್ಷವಿಮೋಚನೆಗೂ ಅವರವರ ಸುಕರ್ಮ ದುಷ್ಕರ್ಮಗಳೇ ಕಾರಣಗಳಾಗಿರುತ್ತವಲ್ಲದೆ ಪರಮಾತ್ಮನು ಕಾರಣನಲ್ಲವೆಂದು ತಿಳಿದು ಸರ್ವರೂ ಸುಕರ್ಮಾಚರಣೆಯಲ್ಲಿ ನಿರತರಾಗಿರುವುದೇ ಮಾನವೀಯ ಧರ್ಮವಾಗಿರುತ್ತದೆ.

ಸನಾತನವಾದ ನಮ್ಮ ಹಿಂದೂ ಧರ್ಮವು ಕೇವಲ ಹಿಂದೂಸ್ಥಾನದಲ್ಲಿಯೇ ವ್ಯಾಪಿಸದೆ ಇಡೀ ಜಗತ್ತನ್ನೇ ವ್ಯಾಪಿಸಿತ್ತೆಂದು ಅನೇಕ ಆಧಾರಗಳಿಂದ ಹೇಳಬಹುದಾಗಿದೆ. ಪೂರ್ವಕಾಲದಲ್ಲಿ ಹಿಂದೂ ಧರ್ಮದಷ್ಟು ವ್ಯಾಪಕತೆಯುಳ್ಳ ಧರ್ಮವು ಪ್ರಪಂಚದಲ್ಲಿ ಮತ್ತೊಂದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು. ಯೂರೋಪ್, ಆಫ್ರಿಕಾ ಮೊದಲಾದ ದೇಶಗಳಲ್ಲಿ ಶಿವ, ಪಾರ್ವತಿ ಮೊದಲಾದ ಹಿಂದೂ ದೇವತೆಗಳ ವಿಗ್ರಹಗಳು ಈಗಲೂ ಅಚ್ಚಳಿಯದಂತೆ ಶೋಭಿಸುತ್ತಿರುವುದೇ ಇದಕ್ಕೆ ಬಲವಾದ ಸಾಕ್ಷಿ

ಯಾಗಿದೆ. ಸದ್ಯಃ ಫ್ರೆಂಚ್ ರಾಜ್ಯಕ್ಕೆ ಸೇರಿರುವ ಕಾಂಬೋಡಿಯಾ ದೇಶದಲ್ಲಿ ಮೂರು ಸಂಸ್ಕೃತ ಶಿಲಾಶಾಸನಗಳು ದೊರೆತಿರುತ್ತವೆ. ಈ ಶಾಸನಗಳು ಕಾಂಬೋಡಿಯಾ ದೇಶದ ಸಿಯಾಂರಾಪ್ ಡಿಸ್ಟ್ರಿಕ್ಟಿನಲ್ಲಿ "ಬಾತ್‌ಚೂಮ್" ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಗೋಪುರಗಳ ಕೆಳಭಾಗದಲ್ಲಿರುವ ಆರು ಕಂಬಗಳ ಮೇಲೆ ಕೆತ್ತಲ್ಪಟ್ಟಿರುವುವು. ಈ ಸಂಸ್ಕೃತ ಶಾಸನಗಳು ಇಂದ್ರ, ರಾಮಭಾಗವತ, ಶಿವಾಚ್ಯುತ ಎಂಬವರಿಂದ ರಚಿಸಲ್ಪಟ್ಟಿರುವುವೆಂದು ಆ ಶಾಸನಗಳಿಂದಲೇ ವೇದ್ಯವಾಗುವುದು. ಆ ಶಾಸನಗಳಲ್ಲಿ ಕಾಂಬೋಡಿಯಾ ದೇಶವನ್ನು ಕ್ರಿ.ಶ. ೯೬೬ ರಲ್ಲಿ ಆಳುತ್ತಿದ್ದ ರಾಜೇಂದ್ರವರ್ಮನೆಂಬ ಮಹಾ ರಾಜನ ಪ್ರತಾಪಾದಿಗಳು ವರ್ಣಿಸಲ್ಪಟ್ಟಿರುವುವು. ಮೊದಲನೆಯ ಶಾಸನದಲ್ಲಿ ೨೪ ಶ್ಲೋಕಗಳೂ ಎರಡನೆಯ ಶಾಸನದಲ್ಲಿ ೪೦ ಶ್ಲೋಕಗಳೂ, ಮೂರನೆಯ ಶಾಸನದಲ್ಲಿ ೪೩ ಶ್ಲೋಕಗಳೂ ಕೆತ್ತಲ್ಪಟ್ಟಿರುವುವು. ಈ ಶ್ಲೋಕಗಳಲ್ಲಿರುವ ಸಂಸ್ಕೃತ ವಾಙ್ಮಾಧುರ್ಯವನ್ನು ಎಷ್ಟು ವರ್ಣಿಸಿದರೂ ತೀರದು. ವಾಚಕರ ಅವಗಾಹನಕ್ಕಾಗಿ ಅದರಲ್ಲಿರುವ ಕೆಲವು ಶ್ಲೋಕಗಳನ್ನು ಕೆಳಗೆ ಉದಾಹರಿಸಿರುತ್ತೇವೆ.

ಆಸೀತ್ಸಮಸ್ತಭುವನಾಕರರತ್ನಸಾರ।
ತಾರಾಸ್ಫುರತ್ಕಿರಣರ ಜಿತಪಾದಪೀಠಃ॥
ಸೋಮಾನ್ವಯೋರಿಂಸಮಂಗಲಭೂಧರಃ ಶ್ರೀ।
ರಾಜೇಂದ ವರ್ಮನೃಪತಿರ್ವಿತತಾಂಗದೀಪ್ತಿಃ ॥೪॥

ಯಸ್ಯಾಂಘ್ರಿಯುಗ್ಮ ಕಮಲಂ ಕಮಲಾಲಿಲೀಢಂ।
ಸಿಂಹಾಸನೋಜ್ಜ್ವಲಿತ ರತ್ನಕರಾಬರೂಢಂ।
ಪ್ರೋಜ್ಜ್ವಭಿತಂ ಪ್ರಣತಭೂಪತಿಮೌಲಿಮಾಲಾ।
ಮಾಣಿಕ್ಯಕೋಟಿಕಿರಣಾಭಿನವಾರುಣೇನ ॥೫॥

ಈ ಪ್ರಕಾರವಾಗಿ ರಾಜೇಂದ್ರವರ್ಮ ಮಹಾರಾಜನ ವರ್ಣನವು ಕೆಲವು ಶ್ಲೋಕಗಳಿಂದ ಮಾಡಲ್ಪಟ್ಟಿದ್ದು ಮುಂದೆ ಈ ಮಹಾರಾಜನು ಈಗ "ಅಂಕೋರ್ ತೋಮ್" ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ "ಯಶೋಧರ ಪುರಿ" ಯನ್ನುದ್ಧರಿಸಿದ ವಿಷಯವೂ, ಅಲ್ಲಿ ಸಮುದ್ರದಂತಿರುವ ತಟಾಕದಲ್ಲಿ ಶಿವಲಿಂಗ, ಪಾರ್ವತೀದೇವಿ ಮೊದಲಾದ ದೇವತಾ ವಿಗ್ರಹಗಳನ್ನು ಸ್ಥಾಪಿಸಿರುವ ವಿಷಯವೂ ಪ್ರತಿಪಾದಿಸಲ್ಪಟ್ಟಿರುತ್ತದೆ.

ಶ್ರೀಮದ್ಯಶೋಧರಪುರೀಂ ಚಿರಕಾಲಶೂನ್ಯಾಂ ।
ಭಾಸ್ವತ್ಸುವರ್ಣ ಗೃಹರತ್ನ ವಿಮಾನರಮ್ಯಾಂ ॥
ಭೂಯೋಽಧಿಕಾಂ ಭುವಿ ಮಹೇಂದ್ರ ಗೃಹೋಪಮಾಂ ಯೋs ।
ಯೋಧ್ಯಾಪುರೀಮಿವಕುಶೋಽಭಿನವಾಂ ಚಕಾರ ॥೧೩॥

ಶ್ರೀಮದ್ಯಶೋಧ ತಟಾಕಪಯೋಧಿಮಧ್ಯೇ ।
ಮೇರೋಃಸಮಾನಶಿಖರೇ ಸ್ವಕೃತೇ ಮಹಾದ್ರೌ ॥
ಪ್ರಾಸಾದಸೌಧ ಗೃಹರತ್ನ ಚಿತೇ ವಿರಿಂಚಿ ।
ದೇವೀಶಶಾರ್ಙ್ಗ ಶಿವಲಿಂಗಮತಿಷ್ಠಿಪತ್ಸಃ ॥೧೪॥

ಈ ಶ್ಲೋಕಗಳನ್ನು ಪರಿಶೀಲಿಸಿದ್ದಾದರೆ ಈ ಮಹಾರಾಜನಲ್ಲಿರುವ ಅಸಾಧಾರಣ ದೇವತಾಭಕ್ತಿಯು ವೇದ್ಯವಾಗುವುದು. ಆ ದೇಶವನ್ನಾಳುತ್ತಿದ್ದ ಈ ಮಹಾರಾಜನೇ ಈ ರೀತಿಯಾಗಿ ದೇವತಾಭಕ್ತನಾಗಿದ್ದನೆಂದ ಮೇಲೆ ಅವನ ರಾಜ್ಯದಲ್ಲಿ ವಾಸಮಾಡತಕ್ಕ ಪ್ರಜೆಗಳು ಹಿಂದೂ ದೇವತೆಗಳ ವಿಷಯದಲ್ಲಿ ಎಷ್ಟು ಭಕ್ತಿಯುಳ್ಳವರಾಗಿದ್ದಿರಬಹುದೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಕ್ರಿ. ಶ. ೫ ನೆಯ ಶತಮಾನದಲ್ಲಿ ಯಾತ್ರಾರ್ಥಿಯಾಗಿ ಚೀಣಾದಿಂದ ಭರತಖಂಡಕ್ಕೆ ಬಂದಿದ್ದ "ಫಾ-ಹಿಯನ್" ಎಂಬ ಯಾತ್ರಿಕನೂ, ೭ ನೆಯ ಶತಮಾನದಲ್ಲಿ ಇದೇ ದೇಶದಿಂದ ಭರತಖಂಡಕ್ಕೆ ಬಂದಿದ್ದ "ಇಟ್-ಸಿಂಗ್" ಎಂಬ ಯಾತ್ರಿಕನೂ ಕಾಂಬೋಡಿಯಾ ದೇಶದಲ್ಲಿ ಹಿಂದೂ ಜನರು ವಿಶೇಷವಾಗಿ ವಾಸಮಾಡಿರುವ ವಿಷಯವನ್ನು ತಮ್ಮ ತಮ್ಮ ಗ್ರಂಥಗಳಲ್ಲಿ ಬಹು ಮನೋಹರವಾಗಿ ವರ್ಣಿಸಿರುತ್ತಾರೆ.

ಈ ಕಾಂಬೋಡಿಯಾ ದೇಶದಲ್ಲಿ ವಾಸಮಾಡಿದ ಹಿಂದೂ ಜನರು ಕರ್ಣಾಟಕ ಅಥವಾ ಆಂಧ್ರ ದೇಶದವರೆಂದು ಹೇಳಬಹುದಾಗಿದೆ. ಯಾಕೆಂದರೆ, ಆ ಕಾಲದಲ್ಲಿ ಈ ಎರಡು ದೇಶಗಳಲ್ಲಿ ಮಾತ್ರ ಪ್ರಚಾರದಲ್ಲಿದ್ದ ಶಾಲಿವಾಹನಶಕದ ಹೆಸರನ್ನು ಅವರು ಉಲ್ಲೇಖಿಸಿರುತ್ತಾರೆ. ಆಗ್ಗೆ ಈ ಶಕದ ಹೆಸರು ಬೇರೆ ಯಾವ ದೇಶಗಳಲ್ಲಿಯೂ ಪ್ರಚಾರದಲ್ಲಿರಲಿಲ್ಲ. ಇದೇ ಈ ವಿಷಯದಲ್ಲಿ ಬಲವಾದ ಸಾಕ್ಷಿಯಾಗಿದೆ. ಮತ್ತು ಆ ದೇಶದಲ್ಲಿ ಸ್ಥಾಪಿಸಲ್ಪಟ್ಟಿರುವ ಶಿವಲಿಂಗಾದಿ ದೇವತಾಮೂರ್ತಿಗಳು ಕರ್ಣಾಟಕ ದೇಶದ ಮೂರ್ತಿಗಳಂತೆಯೇ ಇರುತ್ತವೆ.

ಇನ್ನು ೨ ನೆಯ ಶಾಸನದಲ್ಲಿ ರಾಜೇಂದ್ರವರ್ಮ ಮಹಾರಾಜನ ವಿಷಯವು, ಹೇಳಲ್ಪಟ್ಟಿದ್ದು ಅವನ ಮಂತ್ರಿಯಾದ ಕವೀಂದ್ರಾರಿಮಥನನೆಂಬ ಬೌದ್ಧಮತೀಯನು ಸಹ ದೇವಿ, ಬುದ್ಧ ಮೊದಲಾದ ವಿಗ್ರಹಗಳನ್ನು ಸ್ಥಾಪಿಸಿದನೆಂದೂ, ತಾನು ಕಟ್ಟಿಸಿದ ಯಶೋಧರ ಸರೋವರದಲ್ಲಿ ವೇದ ವೇತೃವಾದ ವಿಪ್ರನನ್ನು ಬಿಟ್ಟು ಉಳಿದವರಾರೂ ಸ್ನಾನವನ್ನು ಮಾಡಕೂಡ ದೆಂದೂ, ಅಲ್ಲಿ ಆನೆಗಳು ಪ್ರವೇಶಿಸಕೂಡದೆಂದೂ, ಪ್ರವೇಶಿಸಿದ್ದಾದರೆ ದಯಾಳುಗಳು ಅದನ್ನು ನಿವಾರಿಸಬೇಕೆಂದೂ ಎಂಬಿವೇ ಮೊದಲಾದ ವಿಷಯಗಳು ಬರೆಯಲ್ಪಟ್ಟಿವೆ.

ಮಹತ್ಯಾಂ ವಿಧಿಜಾತಾಯಾಂ ಪರಿಖಾಯಾಂ ಶುಭಾಂಭಸಿ ।
ವಿಪ್ರಾದೃತೇ ವೇದವಿದಃ ಸ್ನಾತವ್ಯಂ ನಾತ್ರಕೈಶ್ಚನ ॥೨೮॥

ತಟಾಕೇಽಸ್ಮಿನ್ ತಟದ್ರುಹ್ಯೈಸ್ತರುಭಿಃ ಶೀತಲಾಂಭಸಿ ।
ಗಜಾನಾಂ ಮಜ್ಜನಂ ಮಾಭೂತ್ ಸ್ಯಾಚ್ಚೇದ್ವಾರ್ಯಂ
ದಯಾಲುಭಿಃ ॥೩೯॥

ಇತ್ಯಾದಿ ವಿಷಯಗಳನ್ನು ಪರ್ಯಾಲೋಚಿಸಿದರೆ ನಮ್ಮ ಹಿಂದೂ ಮತಾನುಯಾಯಿಗಳಾದ ರಾಜರು ಪೂರ್ವಕಾಲದಲ್ಲಿ ತಮ್ಮ ಭುಜಬಲದಿಂದ ಅನೇಕ ದೇಶಗಳನ್ನು ಗೆದ್ದು ಅಲ್ಲಿ ನಮ್ಮ ಸನಾತನಧರ್ಮತತ್ವಗಳನ್ನು ಪ್ರಚಾರಪಡಿಸಿ ಲೋಕೈಕಮಾನ್ಯರಾಗಿ ಮೆರೆದರೆಂಬುದು ಸ್ಪಷ್ಟವಾಗುತ್ತದೆ.

## ಧರ್ಮನಿಬಂಧನೆ

ನಮ್ಮ ಭಾರತೀಯರೆಲ್ಲರೂ ಸನಾತನ ಧರ್ಮಾವಲಂಬಿಗಳಾಗಿರುವ ರಲ್ಲದೆ ಅನ್ಯಧರ್ಮಾವಲಂಬಿಗಳಲ್ಲ. ಆದರೂ ಇತ್ತೀಚೆಗೆ ಕೆಲವರು ಪಾಶ್ಚಾತ್ಯರ ನಡೆನುಡಿಗಳ ಸಂಸರ್ಗವಿಶೇಷದಿಂದ ತಾವೂ ಸಹ ಅವರನ್ನು ಅನುಕರಿಸ ಬೇಕೆಂದು ತಮ್ಮ ಮೂಲಧರ್ಮಕ್ಕೆ ತರ್ಪಣವನ್ನು ಕೊಡಲುಪಕ್ರಮಿಸಿರುತ್ತಾರೆ. ಇದರಿಂದ ಸ್ವಧರ್ಮವನ್ನು ಮಾತ್ರ ಹಾಳುಮಾಡಿಕೊಳ್ಳುವುದೊಂದೇ ಫಲವಾಗುವುದಲ್ಲದೆ ಪಾಶ್ಚಾತ್ಯರ ದೈವೀಸಂಬಂಧವಾದ ನಿಜ ಧರ್ಮವು ಇವರಲ್ಲಿ ಅಳವಟ್ಟಂತಾಗಲಿಲ್ಲ. ಮಹಾಜ್ಞಾನಿಯಾದ ಕ್ರಿಸ್ತನಾಗಲಿ, ದಿವ್ಯಜ್ಞಾನಿಗಳಾದ ಮನ್ವಾದಿಗಳಾಗಲಿ ಆತ್ಮೋದ್ಧಾರಕ್ಕಾಗಿ ಧರ್ಮ

ನಿಬಂಧನೆ ಮಾಡಿರುವರಲ್ಲದೆ ಕೇವಲ ಐಹಿಕ ಸೌಖ್ಯಕ್ಕಾಗಿ ಧರ್ಮ ನಿಬಂಧನೆ ಮಾಡಲಿಲ್ಲ. ಪ್ರತಿಯೊಂದು ಮತೀಯರ ಧರ್ಮದಲ್ಲಿಯೂ ನಿಜಾಂಶವು ಇದ್ದೇ ಇರುವುದು. ಆದರೆ ಯಾವ ದೇಶದಲ್ಲಿ ಆಯಾಯ ಭೂಮಿಗನುಗುಣವಾಗಿ ಪೂರ್ವಿಕರಿಂದ ಯಾವ ಯಾವ ಧರ್ಮವು ಸ್ಥಾಪಿಸಲ್ಪಟ್ಟಿರುತ್ತದೆಯೋ ಆಯಾಯ ಧರ್ಮಗಳು ಆಯಾಯ ದೇಶಗಳಲ್ಲಿ ಅನಾದಿಕಾಲದಿಂದಲೂ ಸ್ಥಿರವಾಗಿ ನಿಂತಿರುತ್ತವೆ. ಧರ್ಮವೆಂಬುವುದು ದೇವರಿಂದ ನಿರ್ಮಿಸಲ್ಪಟ್ಟ ಆತ್ಮೋದ್ಧಾರಸಾಧಕವಾದ ಒಂದು ನಿಬಂಧನೆಯಲ್ಲದೆ ಜನಗಳೆಲ್ಲರೂ ಸೇರಿ ತಮ್ಮ ತಮ್ಮ ಸೌಕರ್ಯಕ್ಕಾಗಿ ಕಾಲಾನುಗುಣವಾಗಿ ಕಲ್ಪಿಸಿಕೊಂಡ ಸಾಮಾಜಿಕಕಟ್ಟಳೆಯಲ್ಲ. ಧರ್ಮವೆಂಬುದು ಸಾಮಾಜಿಕ ನಿಬಂಧನೆಯಾಗಿದ್ದರೆ ಕಾಲಾನುಸಾರವಾಗಿ ಮನುಷ್ಯರ ಬುದ್ಧಿಬಲಾನುಸಾರವಾಗಿಯೂ ಎಷ್ಟೋಸಾರಿ ಬದಲಾವಣೆಯನ್ನು ಹೊಂದಬಹುದಾಗಿತ್ತು. 'ಧ್ರಿಯತೆ ಅನೇನೇತಿಧರ್ಮಃ' ಅಥವಾ 'ಧರತೀತಿ ಧರ್ಮ' ಎಂಬ ಉತ್ಪತ್ತಿಗನುಸಾರವಾಗಿ ಕೆಳಗೆ ಬಿದ್ದಿರುವ ಆತ್ಮನನ್ನು ಮೇಲಕ್ಕೆತ್ತಿ ದೇವರ ಬಳಿಗೆ ಸೇರಿಸುವ ಸಾಮರ್ಥ್ಯವು ಇರುವುದರಿಂದ ಇದಕ್ಕೆ ಧರ್ಮವೆಂಬ ಹೆಸರು ಉಂಟಾಗಿದೆ. ಸೃಷ್ಟಿಸ್ಥಿತಿಸಂಹಾರಕರ್ತನಾದ ದೇವರು ಸೃಷ್ಟಿಸಿದ ಭೂಮಿಯಲ್ಲಿ ಜನನ ಮರಣರೂಪವಾದ ಕೆಸರಿನಲ್ಲಿ ಬಿದ್ದು ಮುಳುಗೇಳುತ್ತಲಿರುವ ಆತ್ಮನಿಗೆ ಆಯಾಯ ಮತಾಚಾರ್ಯರು ದೇವರ ಆಜ್ಞೆಯನ್ನು ಪಡೆದು ಧರ್ಮಾಧಿಕಾರವೆಂಬ ಒಂದೊಂದು ದಂಡವನ್ನು ಹೊಂದಿರುತ್ತಾರೆ. ಈ ದಂಡದ ಅವಲಂಬನದಿಂದ ದುಃಖರೂಪವಾದ ಘೋರಸಂಸಾರತಾಪದಿಂದ ಉತ್ತೀರ್ಣರಾಗಿ ದೇವರನ್ನು ಸೇರಿ ಪುನಃ ಕೆಳಗಿಳಿದು ಬರದಂತೆ ಪ್ರಯತ್ನ ಮಾಡಿಕೊಳ್ಳಬೇಕಲ್ಲದೆ ಯಾರೂ ಅನಾದಿಕಾಲದಿಂದ ಬಂದ ಈ ಧರ್ಮದಂಡವನ್ನು ಬದಲಾಯಿಸಲು ಪ್ರಯತ್ನಪಡಬಾರದು. ಹೀಗೆ ದೇವರು ಅನುಗ್ರಹಿಸಿರುವ ಪರಲೋಕಕ್ಕೆ ಸಹಾಯ ಮಾಡುವ ಈ ಧರ್ಮದಂಡವನ್ನು ಯಾರು ಅನ್ಯಸಂಸರ್ಗವೆಂಬ ಪ್ರವಾಹದ ಸೆಳೆತಕ್ಕೆ ಬಿದ್ದು ಬದಲಾಯಿಸಲು ಪ್ರಯತ್ನಿಸುತ್ತಾರೆಯೋ ಅವರ ಪೂರ್ವದ ಧರ್ಮದಂಡವನ್ನೂ ಕಳೆದುಕೊಂಡು ಇನ್ನೊಂದು ಧರ್ಮದಂಡವೂ ಸಹ ಸಿಕ್ಕದೆ ಸಂಸಾರವೆಂಬ ಮಹಾಕೂಪದಲ್ಲಿ ಮುಳುಗಿ ಅಂತರಿಕ್ಷದಲ್ಲಿ ಜೋಲಾಡುತ್ತಿರುವ ತ್ರಿಶಂಕುವಿನಂತೆ ಉಭಯಭ್ರಷ್ಟರಾಗಬೇಕಾಗುತ್ತದೆ. 'ಸ್ವಧರ್ಮೇ ನಿಧನಂ ಶ್ರೇಯಃ ಪರ

ಧರ್ಮೋ ಭಯಾವಹಃ' ಎಂಥ ಸಂಕಟಗಳೊದಗಿದರೂ ಸೃಷ್ಟ್ಯಾರಂಭದಿಂದ ಬಂದಿರುವ ಈ ಧರ್ಮದಂಡವನ್ನು ಬಿಡಕೂಡದೆಂದು ಗೀತಾಕಾರರು ಸ್ಪಷ್ಟ ಪಡಿಸಿರುತ್ತಾರೆ. ಪ್ರಕೃತದಲ್ಲಿ ನಮ್ಮ ಭಾರತೀಯರಲ್ಲನೇಕರು ಇತ್ತೀಚೆಗೆ ಇಂಥ ಸನಾತನವಾದ ಧರ್ಮದಂಡವನ್ನು ಅತಿಪರಿಚಯದ ದೋಷ ದಿಂದಲೋ ಅಥವಾ ಐಹಿಕಸೌಖ್ಯವೇ ಮಾನವಜನ್ಮದ ಫಲವೆಂದು ತಿಳಿದು ದರಿಂದಲೋ ಮುರಿದೊಗೆಯಲು ಪ್ರಯತ್ನ ಪಡುತ್ತಿದ್ದಾರೆ. ಧರ್ಮಗಳು ರಾಜಕೀಯ ನೈತಿಕ ಆತ್ಮೀಯ ಮುಂತಾಗಿ ಅನಂತರೂಪಗಳಾಗಿರುತ್ತವೆ. ಇವುಗಳಲ್ಲಿ ರಾಜಕೀಯ ನೈತಿಕ ಧರ್ಮಗಳು ಮಾತ್ರ ಕೇವಲ ಐಹಿಕ ಸುಖ ಸಾಧಕಗಳಾದ್ದರಿಂದ ಕಾಲಾನುಸಾರವಾಗಿ ಅವರವರ ಬುದ್ಧಿಚಾತುರ್ಯವನ್ನು ಅನುಸರಿಸಿ ಹೇಗೆ ಬೇಕಾದರೂ ಬದಲಾವಣೆಯಾಗಬಹುದು. ಪಾಪಧ್ವಂಸ ಕಾರಿಯೂ ಶ್ರುತಿಸ್ಮೃತ್ಯುಕ್ತವೂ ಆದ ಧರ್ಮವು ಪರಸುಖಸಾಧಕವಾದುದ ರಿಂದ ಪ್ರಪಂಚವು ಇರುವವರೆಗೂ ಏಕಾಕಾರವಾಗಿ ನಿಂತಿರಬೇಕಲ್ಲದೆ ಬದಲಾ ಯಿಸಲು ಅವಕಾಶವಿಲ್ಲವು. ಆದುದರಿಂದಲೇ ಇದನ್ನು ಸನಾತನಧರ್ಮ ವೆಂದು ನಮ್ಮ ಭಾರತೀಯರು ಕರೆಯುತ್ತಾರೆ. ಇಂಥ ಧರ್ಮವು ಯಾವು ದೆಂಬುದನ್ನು ವೇದದಿಂದಲೇ ನಿರ್ಣಯಗೊಳಿಸಬೇಕಲ್ಲದೆ, ಸ್ವತಂತ್ರವಾಗಿ ನಿರ್ಣಯಿಸಕೂಡದು.

ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ॥

ಇದು ಧರ್ಮವು, ಇದು ಅಧರ್ಮವು ಎಂಬ ವ್ಯವಸ್ಥೆಯು ವೇದ ದಿಂದಲೇ ನಿರ್ಣಯವಾಗಬೇಕು. ಎಲ್ಲರೂ ವೇದೋಕ್ತವಾದ ಧರ್ಮವನ್ನೇ ಅನುಷ್ಠಿಸಬೇಕು ಎಂದು ಶ್ರೀಕೃಷ್ಣನು ಅರ್ಜುನನನ್ನು ಕುರಿತು ಧರ್ಮಸ್ವರೂಪ ವನ್ನು ಬೋಧಿಸಿ,

ಯಃಶ್ಶಾಸ್ತ್ರವಿಧಿ ಮುತ್ಸೃಜ್ಯ ವರ್ತತೇ ಕಾಮಕಾರತಃ ।
ನಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥

ವೇದವಿಹಿತವಾದ ಧರ್ಮವನ್ನು ಮೀರಿ ಯಾವನು ತನ್ನ ಇಚ್ಛಾನು ಗುಣವಾಗಿ ವ್ಯವಹರಿಸುತ್ತಾನೆಯೋ ಅವನು ಯಾವ ಸಿದ್ಧಿಯನ್ನೂ, ಯಾವ ಸುಖವನ್ನೂ, ಯಾವ ಸದ್ಗತಿಯನ್ನೂ ಹೊಂದುವುದಿಲ್ಲವೆಂದು ವೇದೋಕ್ತ ವಾದ ಸನಾತನ ಧರ್ಮದ ಮೇಲೆ ಕೈಮಾಡುವವರಿಗೊಂದು ವಜ್ರಾಘಾತ

ದಂತಿರುವ ಭಯೋತ್ಪಾದನವನ್ನು ಸಹ ತೋರಿಸುತ್ತಾನೆ. ಪಾಶ್ಚಾತ್ಯರೇ ಆಗಲಿ ಪೌರ್ವಸ್ತ್ಯರೇ ಆಗಲಿ ಪ್ರತಿಯೊಬ್ಬರೂ ದೇವರುಂಟು, ಪರಲೋಕವುಂಟು, ನರಕವುಂಟು, ಪುಣ್ಯಪಾಪಗಳುಂಟು ಎಂದು ನಂಬುತ್ತಾರೆ. ಇವುಗಳು ಧರ್ಮಾಧರ್ಮಗಳಿಂದಲೇ ನಿಶ್ಚಯಿಸಲ್ಪಡಬೇಕಲ್ಲದೆ ಮತ್ತಾವುದರಿಂದಲೂ ತಿಳಿಯಲ್ಪಡತಕ್ಕವುಗಳಲ್ಲ. ಮತ್ತು ದೇವರು ಹೇಳಿದ ಈ ಧರ್ಮಾಧರ್ಮಗಳ ಸ್ವರೂಪವನ್ನು ಬೋಧಿಸುವುದಕ್ಕಾಗಿ ಅನೇಕ ಮಹಾತ್ಮರು ಭೂಮಿಯಲ್ಲವತರಿಸಿದರು. ಅದರಲ್ಲಿ ಪಾಶ್ಚಾತ್ಯಭೂಮಿಯಲ್ಲಿ ಕ್ರಿಸ್ತನೆಂಬ ಮಹಾತ್ಮನವತರಿಸಿ ಆ ಭೂಮಿಗನುಗುಣವಾಗಿ ಧರ್ಮವನ್ನು ನೆಲೆಗೊಳಿಸಿದನು. ನಮ್ಮ ಪೌರ್ವಸ್ತ್ಯ ಭೂಮಿಯಲ್ಲಿ ಮನ್ವಾದಿಗಳೆಂಬ ಮಹಾತ್ಮರು ಅವತರಿಸಿ ಈ ಭೂಮಿಗನುಗುಣವಾಗಿ ಧರ್ಮವನ್ನು ನೆಲೆಗೊಳಿಸಿದರು. ಹೀಗೆ ಸೃಷ್ಟಿಕರ್ತನಾದ ದೇವರ ಆಜ್ಞೆಯಿಂದಲೇ ಪ್ರಪಂಚಸೃಷ್ಟ್ಯಾರಂಭದಿಂದ ಧರ್ಮಸ್ಥಾಪನೆಯಾಗಿರುತ್ತದೆ.

ಹೀಗೆ ಅನಾದಿಕಾಲದಿಂದ ಬಂದ ಆ ಧರ್ಮನಿಬಂಧನೆಯನ್ನು ಇದುವರಿವಿಗೂ ಯಾವ ಪಾಶ್ಚಾತ್ಯರೇ ಆಗಲಿ ಪೌರ್ವಸ್ತ್ಯರೇ ಆಗಲಿ ಬದಲಾಯಿಸಲು ಪ್ರಯತ್ನಪಟ್ಟಿಲ್ಲ; ಹಾಗೆ ಒಬ್ಬಿಬ್ಬರು ಪ್ರಯತ್ನಪಟ್ಟರೂ ಅದು ಆಕಾಶಕ್ಕೆ ಸೆದ ಮಣ್ಣಿನ ಹೆಂಟೆಯಂತೆ ನಿರ್ನಾಮವಾಗಿರುವುದಲ್ಲದೆ ಸಿದ್ಧಿಸಲಿಲ್ಲ. ಹೀಗಿರುವಲ್ಲಿ ದೈವಪ್ರೇರಿತವಾದ ಈ ಸನಾತನ ಧರ್ಮವನ್ನು ದೈವೇಚ್ಛೆಗೆ ವಿರುದ್ಧವಾಗಿ ವಿನಿಮಯಗೊಳಿಸಬೇಕೆಂಬಿಚ್ಛೆಯುಳ್ಳವರು ಪೂರ್ವದಲ್ಲಿ ಉದಯಿಸುವ ಸೂರ್ಯನನ್ನು ಪಶ್ಚಿಮದಲ್ಲಿ ಉದಯಿಸುವಂತೆ ಮಾಡಬೇಕೆಂದಿಚ್ಛಿಸುವವರಿಗೆ ಸಮಾನರಾಗುವರೆಂಬುವಲ್ಲಿ ಸಂಶಯವಿಲ್ಲ. ಆದಕಾರಣ ಸೃಷ್ಟ್ಯಾರಂಭದಿಂದ ಬಂದ ಈ ಸನಾತನ ಧರ್ಮವನ್ನು ಕ್ಷಣಿಕವಾದ ಐಹಿಕ ಸೌಖ್ಯಕ್ಕಾಗಿ ಯಾರು ದ್ವೇಷಿಸುವರೋ ಅವರಿಗೆ ದೈವದ್ರೋಹವೊಂದೇ ಪುರುಷಾರ್ಥವಾಗಿ ಪರಿಣಮಿಸುವುದಲ್ಲದೆ ಇನ್ನಾವ ಫಲವೂ ದೊರೆಯುವುದಿಲ್ಲವಾದ್ದರಿಂದ ಪ್ರತಿಯೊಬ್ಬ ಭಾರತೀಯನೂ ಈಶ್ವರ ಪ್ರಣೀತವಾದ ಈ ಸನಾತನಧರ್ಮದಲ್ಲಿ ಶ್ರದ್ಧೆಯುಳ್ಳವನಾಗಿ ಉತ್ತರೋತ್ತರ ತಮ್ಮ ಆತ್ಮೋನ್ನತಿಯ ವಿಷಯದಲ್ಲಿ ಪ್ರಯತ್ನ ಪಡುವಂತಾಗಲಿ.

ಮಾನವೋದ್ಧಾರವೇ ಮುಖ್ಯಧ್ಯೇಯವುಳ್ಳ ಹಿಂದಿನ ಮಹರ್ಷಿಗಳು ಪ್ರಪಂಚೋದ್ಧಾರಕ್ಕಾಗಿ ಒಂದೊಂದು ಸಮಯದಲ್ಲಿ ಒಂದೊಂದು ವಿಧವಾದ

ಧರ್ಮವನ್ನು ಆನುಷ್ಠಿಸಿರುತ್ತಾರೆ. ಅವುಗಳಲ್ಲಿ ಅನೇಕ ಧರ್ಮಗಳು ವೇದವಿಹಿತವಾದ ಮಾರ್ಗವನ್ನು ಅನುಸರಿಸಿರಬಹುದು. ಕೆಲ ಧರ್ಮಗಳು ವಿರುದ್ಧಮಾರ್ಗವನ್ನು ಅನುಸರಿಸಿಯೂ ಇರಬಹುದು. ಅವರು ಅನುಷ್ಠಿಸಿದ ನಡೆನುಡಿಗಳೆಲ್ಲವೂ ಅಲ್ಪಜ್ಞರಾದ ಮಾನವರಿಂದ ಅನುಷ್ಠಿಸಲ್ಪಡಲು ಸಾಧ್ಯವಿಲ್ಲ. ಹಿಂದಿನ ಆಚಾರ್ಯಾದಿ ಮಹರ್ಷಿಗಳು ಅಧಿಕಶಕ್ತಿಯುಳ್ಳವರಾದುದರಿಂದ ಅಧರ್ಮದಿಂದುಂಟಾಗುವ ಕಷ್ಟಗಳನ್ನೂ ಧರ್ಮದಿಂದುಂಟಾಗುವ ಸುಖಗಳನ್ನೂ ಪ್ರಪಂಚದ ಮಾನವರಿಗೆ ತೋರಿಸುವುದಕ್ಕಾಗಿ ಒಂದೊಂದು ಸಮಯದಲ್ಲಿ ಬೀಭತ್ಸಕರಗಳಾದ ಧರ್ಮವಿರುದ್ಧ ಮಾರ್ಗದಲ್ಲಿ ಕಾಲಿಟ್ಟಿದ್ದರೂ ಅಂಥ ಅಧರ್ಮದ ಲೇಪವು ಅವರಿಗೆಂದೂ ಸೋಂಕಲಾರದು.

ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।

ಎಂಬುವಂತೆ ಬಂಧಕ್ಕಾಗಲಿ ಮೋಕ್ಷಕ್ಕಾಗಲಿ ಅವರವರ ಮನಸ್ಸೇ ಕಾರಣವೆಂಬ ವಾಕ್ಯದಂತೆ ಆಚಾರ್ಯಾದಿ ಮಹರ್ಷಿಗಳ ಮನಸ್ಸು ಅಲ್ಪಜ್ಞರಾದ ಮಾನವರಂತೆ ಮೋಹಪಾಶದಿಂದ ಬಂಧಿಸಲ್ಪಡದೆ ಕೇವಲ ಪರಮಾತ್ಮನೊಬ್ಬನಲ್ಲಿಯೇ ವಿಲೀನವಾದುದರಿಂದಲೂ ಸ್ವಭಾವ ಪರಿಶುದ್ಧವಾದುದರಿಂದಲೂ ಲೀಲಾಮಾತ್ರದಿಂದ ನಟಿಸುತ್ತಿರುವ ಅವರ ಅಸಹ್ಯವಾದ ಬಾಹ್ಯಕೃತಿಗಳು ಅವರನ್ನೆಂದೂ ಬಾಧಿಸಲಾರವು. "ಭಿನ್ನರುಚಿರ್ಹಿಲೋಕಃ" ಎಂಬುವಂತೆ ಪ್ರಪಂಚವು ಭಿನ್ನಭಿನ್ನ ಸ್ವಭಾವವುಳ್ಳದಾದುದರಿಂದ ಹಿಂದಿನ ಮಹರ್ಷಿಗಳು ಆಯಾಯ ಮಾನವರ ಇಚ್ಛಾನುಸಾರವಾದ ಮಾರ್ಗದಲ್ಲಿಯೇ ಪ್ರವೇಶಿಸಿ ಕೆಲವು ಸಮಯದಲ್ಲಿ ಭೀತಿಯನ್ನೂ ಕೆಲವು ಸಮಯದಲ್ಲಿ ಪ್ರೀತಿಯನ್ನೂ ತೋರಿಸುತ್ತ ಧರ್ಮವೆಂಬ ಸೌಮ್ಯವಾದ ಗೋವನ್ನು ಹಿಂಸಿಸುತ್ತಿರುವ ಅಧರ್ಮವೆಂಬ ಕ್ರೂರಮೃಗವನ್ನು ನಾಶಗೊಳಿಸಿ ಪ್ರಪಂಚದಲ್ಲಿ ವೇದಧರ್ಮವನ್ನು ಪ್ರತಿಷ್ಠೆಗೊಳಿಸಿರುತ್ತಾರೆ. ಹಾಗೆ ಹಿಂದಿನ ಮಹರ್ಷಿಗಳು ಮಿಶ್ರವಾದ ಧರ್ಮಾಧರ್ಮಗಳನ್ನು ತಾದಾತ್ಮ್ಯಸಂಬಂಧದಿಂದ ಅನುಷ್ಠಿಸಿ, ಅವುಗಳಿಂದಾಗುವ ಸುಖದುಃಖಗಳನ್ನು ಸ್ಪಷ್ಟಪಡಿಸದೆ ಹೋಗಿದ್ದಲ್ಲಿ ಮುಂದಣ ಮಾನವರಿಗೆ ಇದು ಧರ್ಮಮಾರ್ಗವು ಇದು ಅಧರ್ಮಮಾರ್ಗವು ಎಂಬ ವಿವೇಚನೆಯೇ ಹುಟ್ಟದೆ ಅಧರ್ಮವನ್ನು ಧರ್ಮವನ್ನಾಗಿಯೂ, ಧರ್ಮವನ್ನು ಅಧರ್ಮವನ್ನಾಗಿಯೂ, ತಿಳಿದು ನಾನಾ ವಿಧಗಳಾದ ಕಷ್ಟಗಳಿಗೆ ಗುರಿಯಾಗಬೇಕಾಗಿ

ದ್ದಿತು. ಪ್ರಪಂಚದಲ್ಲಿ ರಾಜಾಧಿಕಾರಿಗಳಿಗೆ ಒಬ್ಬ ಕಳ್ಳನನ್ನು ಪತ್ತೆಮಾಡಬೇಕಾದರೆ ಅನೇಕ ಮಾರ್ಗಗಳುಂಟು ಒಂದು ಸಮಯದಲ್ಲಿ ಅವರು ತಮ್ಮ ಸ್ವಭಾವಸಿದ್ಧವಾದ ವೇಷದಿಂದಲೇ ಹೋಗಿ ಕಳ್ಳರನ್ನು ಬಂಧಿಸುತ್ತಾರೆ. ಹಾಗಿಲ್ಲದಿದ್ದರೆ ಆ ಕಳ್ಳರಂತೆ ತಾವೂ ವೇಷವನ್ನು ಹಾಕಿಕೊಂಡು ಆ ಕಳ್ಳರಂತೆಯೇ ಅಭಿನಯಿಸುತ್ತ ಕಾಲಾನಂತರ ಸಮಯವರಿತು ಆ ಕಳ್ಳರನ್ನು ಹಿಡಿದು ಶಿಕ್ಷಿಸಿ ದುಷ್ಟವಾದ ಕಳ್ಳತನದಿಂದ ತಪ್ಪಿಸಲು ತಕ್ಕ ಉಪಾಯವನ್ನು ಕಲ್ಪಿಸುತ್ತಾರೆ. ಕಳ್ಳತನವನ್ನು ಅಭಿನಯಿಸಿದ ಮಾತ್ರಕ್ಕೆ ಅವರೂ ಕಳ್ಳರೆನಿಸಲಾರರಷ್ಟೆ. ಅದರಂತೆ ಮಹರ್ಷಿಗಳೂ ಆಚಾರ್ಯ ಭಗವತ್ಪಾದರೂ ಅಧರ್ಮಿಷ್ಠರಾದ ಶಿಷ್ಯರನ್ನು ಶಿಕ್ಷಿಸಿ ಅವರ ಅಧರ್ಮವನ್ನು ತಪ್ಪಿಸುವುದಕ್ಕಾಗಿ ತಾವೂ ಅಧರ್ಮಿಗಳಂತೆ ಅಭಿನಯಿಸಿದ ಮಾತ್ರದಿಂದ ಅವರಿಗೆ ಅಧರ್ಮದ ಕಳಂಕವುಂಟಾಗಲಾರದು. ಅಂಥ ಲೀಲಾವೇಷಧಾರಿಗಳಾದ ಮಹರ್ಷಿಗಳ ಮತ್ತು ಆಚಾರ್ಯರ ಮುಖ್ಯ ಧ್ಯೇಯವನ್ನು ತೆಗೆದುಕೊಳ್ಳಬೇಕಲ್ಲದೆ ಅವರು ಮಾಡಿದ ಅಧರ್ಮಕೃತಿಗಳನ್ನು ತೆಗೆದುಕೊಳ್ಳಬಾರದು.

"ಯಾನ್ಯಸ್ಮಾಕಂ ಸುಚರಿತಾನಿ ತಾನಿತ್ವಯೋಪಾಸ್ಯಾನಿ ನೋ ಇತರಾಣಿ." ಅಂದರೆ ಅನೇಕ ಸಂದರ್ಭಗಳಲ್ಲಿ ನಾವುಗಳು ಮಾನವೋದ್ಧಾರಸಾಧಕಗಳಾದ ಧರ್ಮೋಪಾಸನೆಗಳನ್ನು ಅನುಷ್ಠಿಸಿದ್ದೇವೆ. ಇನ್ನೂ ಅನೇಕ ಸಂದರ್ಭಗಳಲ್ಲಿ ಅಧರ್ಮಗಳನ್ನು ಅನುಷ್ಠಿಸಿರುತ್ತೇವೆ. ಎಲೌ ಶಿಷ್ಯರುಗಳಿರಾ? ನಾವು ನಡೆಯಿಸಿರುವ ಧರ್ಮಾಧರ್ಮಗಳಲ್ಲಿ ಯಾವುದು ಧರ್ಮಮಾರ್ಗವಾಗಿದೆಯೋ ಅದನ್ನೇ ನೀವು ಉಪಾಸನೆಮಾಡಿರಿ! ಯಾವುದು ಅಧರ್ಮಮಾರ್ಗವಾಗಿದೆಯೋ ಅದನ್ನು ಮಾತ್ರ ಎಂದೂ ಅನುಷ್ಠಿಸಬೇಡಿರಿ! ಎಂದು ತೈತ್ತರೀಯಕದಲ್ಲಿ ಧರ್ಮಾಧರ್ಮಗಳ ಅನುಷ್ಠಾನಕ್ರಮವು ಚೆನ್ನಾಗಿ ವರ್ಣಿಸಲ್ಪಟ್ಟಿರುವುದನ್ನು ಪರಿಶೀಲಿಸಿನೋಡಿದರೆ ಮಹರ್ಷಿಗಳಿಂದ ಅನುಷ್ಠಿತಗಳಾದ ಧರ್ಮಾಧರ್ಮಮಾರ್ಗದಲ್ಲಿ ಕಾಲಿಡದೆ ಧರ್ಮಮಾರ್ಗದಲ್ಲಿಯೇ ಹೋಗುವುದನ್ನು ಕಲಿಯುವುದು ನಮ್ಮ ಭಾರತೀಯರ ಕರ್ತವ್ಯವೆಂದು ಗೊತ್ತಾಗುವದು.

ಹೀಗಿದ್ದರೂ ಪರಮಾಸ್ತಿಕರಾದ ನಮ್ಮ ಭಾರತೀಯರಲ್ಲಿ ಕೆಲ ತಾಮಸಸ್ವಭಾವಿಗಳು ಈ ರಹಸ್ಯವನ್ನರಿಯದೆ ಮೈಯುಂಡ ಪಿಶಾಚಿಗಳಂತೆ ಹಿಂದಿ

ನಿಂದ ತಾವು ನಡೆಯಿಸಿಕೊಂಡು ಬ ದ ಅಧರ್ಮವನ್ನೇ ಭದ್ರಪಡಿಸು ವುದಕ್ಕಾಗಿ ತಾವು ಅಲ್ಪಜ್ಞರೂ ಅಧಮಿ ಳೂ ಆಗಿದ್ದರೂ ದೊಡ್ಡವರನ್ನು ಸರಿಗಟ್ಟಿಕೊಂಡು ಹಿಂದಿನ ಪು ರ್ಷಿಗಳು ಹಾಗೆ ಮಾಡಲಿಲ್ಲವೋ ಹೀಗೆ ಮಾಡಲಿಲ್ಲವೋ ನಾವೇಕೆ ಮಾಡಬ ರದು. ದೊಡ್ಡವರು ಆಚರಿಸಿದುದೆಲ್ಲವೂ ನಮ್ಮಿಂದ ಗ್ರಾಹ್ಯವಲ್ಲವೋ? ಎಂದು ಬಡಬಡಿಸುತ್ತ ಅಧರ್ಮಮಾರ್ಗದಲ್ಲಿ ಕಾಲಿಟ್ಟು ತಾವೂ ನರಕಗಾಮಿಗಳಾಗುವುದಲ್ಲದೆ ಇತರರನ್ನೂ ನರಕಕ್ಕೆ ಎಳೆಯುತ್ತಲಿರುವುದನ್ನು ನೋಡಿದರೆ ಕಲಿಪ್ರಾಬಲ್ಯವು ಪ್ರತಿಯೊಬ್ಬ ಆಸ್ತಿಕನ ಸ್ಮೃತಿಪಥವನ್ನೇರುತ್ತಿರುವದು ಕಂಡುಬರುತ್ತದೆ.

ಸಮಸ್ತ ಜನ್ಮಗಳಲ್ಲಿ ಮಾನವ ಜನ್ಮವೇ ಶ್ರೇಷ್ಠವಾದ ಜನ್ಮವಾಗಿರುತ್ತದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಪಡೆಯುವ ಸಾಮರ್ಥ್ಯವು ಈ ಮಾನವನಿಗಲ್ಲದೆ ಇತರ ಯಾವ ಪ್ರಾಣಿವರ್ಗಕ್ಕೂ ಇರುವುದಿಲ್ಲ. ಈ ಪದಾರ್ಥಗಳಾದರೋ ವಿವೇಕಿಗಳಿಗೆ ಸಿದ್ಧಿಸುವುವಲ್ಲದೆ ವಿವೇಕಶೂನ್ಯರಿಗೆಂದೂ ಸಿದ್ಧಿಸಲಾರವು. ಸೃಷ್ಟಿಕರ್ತನಾದ ಈಶ್ವರನು ಪ್ರತಿಯೊಬ್ಬ ಮಾನವನ ಹೃದಯದಲ್ಲಿಯೂ ಅಂಥ ಸುಖಸಾಧಕವಾದ ವಿವೇಕವೆಂಬ ರತ್ನವನ್ನು ಇಟ್ಟೇ ಇಟ್ಟಿರುತ್ತಾನೆ. ಆದರಲ್ಲಿ ಕೆಲವರು ಅಜ್ಞಾನವೆಂಬ ಪರದೆಯಿಂದ ಮುಚ್ಚಿಕೊಂಡಿರುವುದರಿಂದ ಅದರಿಂದಾಗುವ ಪುರುಷಾರ್ಥಸಿದ್ಧಿಯಿಲ್ಲದೆ ಕ್ರಿಮಿಕೀಟ ಪಶುಪಕ್ಷ್ಯಾದಿಗಳಂತೆ ಹುಟ್ಟಿ ಸಾಯುತ್ತಲಿದ್ದಾರೆ. ಇನ್ನು ಕೆಲವರು ಆ ಅಜ್ಞಾನವೆಂಬ ತೆರೆಯನ್ನು ಕಿತ್ತು ನ್ಯಾಯಮಾರ್ಗದಲ್ಲಿ ಪ್ರವರ್ತಿಸುತ್ತ ಪುಣ್ಯಪಾಪಗಳ ವಿಚಾರದಲ್ಲಿ ಆಸಕ್ತರಾಗುತ್ತ ಗುರುದೇವರಲ್ಲಿ ಭಕ್ತಿಯನ್ನಿಟ್ಟು ದೇಶಕಲ್ಯಾಣವನ್ನು ಮಾಡಿ ತಮ್ಮ ಜನ್ಮವನ್ನು ಸಾರ್ಥಕಮಾಡಿಕೊಳ್ಳುತ್ತಾರೆ. ಮುಖ್ಯವಾಗಿ ಮನುಷ್ಯನು ಅನ್ಯಾಯಮಾರ್ಗದಲ್ಲಿ ಕಾಲಿಡದೆ ನ್ಯಾಯವಾದ ಮಾರ್ಗದಲ್ಲಿ ಹೋಗಬೇಕೆಂಬುದೇ ಭಗವಂತನ ಇಚ್ಛೆಯಾಗಿರುವುದರಿಂದ ಆತನ ಸಂಕಲ್ಪದಂತೆ ಪ್ರತಿಯೊಬ್ಬ ಮನುಷ್ಯನೂ ತ್ರಿಕರಣದಲ್ಲಿಯೂ ಹಿಂಸಾ, ಕ್ರೌರ್ಯ, ಅಪಕಾರ ಮುಂತಾದ ಅಧರ್ಮಗಳನ್ನು ಸ್ಮರಿಸದೆ ಅಹಿಂಸಾ, ಸತ್ಯ, ಅಸ್ತೇಯಾದಿ ಧರ್ಮಗಳನ್ನು ಪರಿಪಾಲಿಸುತ್ತ ಬಂದರೆ, ಅಂಥ ವಿವೇಕಿಯಾದ ಮಾನವನಿಗೆ ಬಂದ ಭಯಂಕರ ಕಷ್ಟಗಳೂ ಸಹ ದೂರವಾಗಿ ಅವನು ದೇವರ ಅನುಗ್ರಹಕ್ಕೆ ಪಾತ್ರನಾಗುವನಲ್ಲದೆ ಲೋಕವಂದ್ಯನಾಗುವುದರಲ್ಲಿ ಸಂದೇಹವಿಲ್ಲ. "ಯಾಂತಿ

ನ್ಯಾಯಪ್ರವೃತ್ತಸ್ಯ ತಿರ್ಯಂಚೋಽಪಿ ಸಹಾಯತಾಂ । ಅಪಂಥಾನಂತುಗಚ್ಛಂತಂ ಸೋದರೋಽಪಿ ವಿಮುಂಚತಿ" ನ್ಯಾಯ ಮಾರ್ಗವನ್ನು ಅನುಸರಿಸಿದವನಿಗೆ ವಿವೇಕವಿಲ್ಲದ ಪಶುಪಕ್ಷ್ಯಾದಿಗಳೂ ಸಹ ಸಹಾಯಮಾಡುತ್ತವೆ. ನ್ಯಾಯಮಾರ್ಗವನ್ನು ಬಿಟ್ಟು ಅಮಾರ್ಗದಲ್ಲೇ ಹೋಗುವವನಿಗೆ ತನ್ನ ಸಹೋದರರೂ ಸಹ ಮಹಾಶತ್ರುಗಳಾಗುತ್ತಾರೆ; ಎಂಬ ನೀತಿವಾಕ್ಯವನ್ನು ಪರ್ಯಾಲೋಚಿಸಿದರೆ ಅನ್ಯಾಯಮಾಡದ ಮನುಷ್ಯನಿಗೆ ಪರ್ವತದಂಥ ಕಷ್ಟಗಳು ಒದಗಿದರೂ ಆ ಕಷ್ಟಪರಂಪರೆಯೆಲ್ಲವೂ ತೋರಿ ಅಡಗುವ ಇಂದ್ರಜಾಲದಂತೆ ಉತ್ತರಕ್ಷಣದಲ್ಲಿಯೇ ಮಾಯವಾಗುವದು.

ಇದಕ್ಕೆ ರಾಮಚಂದ್ರನೇ ಉದಾಹರಣೆಯಾಗಿರುತ್ತಾನೆ. ರಾಮನು ತನ್ನ ಪಿತೃವಿನ ಆಜ್ಞೆಯನ್ನು ಪರಿಪಾಲಿಸುವುದಕ್ಕಾಗಿ ದೇಶಕೋಶಗಳನ್ನೆಲ್ಲಾ ಬಿಟ್ಟು ಕಾಡಿನಲ್ಲಿ ವಾಸಮಾಡಿದನು. ಅಲ್ಲದೆ ಮಾಯಾವಿಯಾದ ರಾವಣಾಸುರನು ಧರ್ಮಪತ್ನಿಯಾದ ಸೀತೆಯನ್ನು ಅಪಹರಿಸಿದನು. ಆ ಕಾಲದಲ್ಲಿ ರಾಮನಿಗೆ ಯಾವುದೊಂದು ಸಹಾಯವೂ ಇಲ್ಲದಾಯಿತು. ಈ ರಾಮನ ಸಚ್ಚರಿತ್ರೆಗೆ ಮೆಚ್ಚಿ ಕಾಡಿನಲ್ಲಿ ಸ್ವೇಚ್ಛಾವಿಹಾರಿಗಳಾಗಿದ್ದ ಕಪಿಗಳೂ ಸಹ ದೈವಪ್ರೇರಿತಗಳಾಗಿ ರಾಮನ ಕಷ್ಟಪರಿಹಾರದಲ್ಲಿ ಭಾಗಿಗಳಾದವು. ಇಂಥ ಸತ್ಯಶೀಲನಾದ ರಾಮನಿಗೆ ರಾವಣನ ತಮ್ಮನಾದ ವಿಭೀಷಣನೂ ಸಹ ವಿರೋಧಿಯಾಗಿ ರಾಮನಿಗೆ ಸಹಾಯವನ್ನು ಮಾಡಬೇಕಾಯಿತು. ಇದರಂತೆ ಹರಿಶ್ಚಂದ್ರ ಪಾಂಡವಾದಿ ಮಹಾರಾಜರೂ ಸಹ ತಮ್ಮ ನ್ಯಾಯವನ್ನು ಪರಿಪಾಲಿಸುವುದಕ್ಕಾಗಿ ಎಷ್ಟೋ ಕಷ್ಟಗಳನ್ನನುಭವಿಸಿದರು. ಕೊನೆಗೆ ಅವರಿಗೆ ದೇವತೆಗಳು ಸಹ ಪ್ರತ್ಯಕ್ಷರಾಗಿ ಬೇಡಿದ ವರಗಳನ್ನು ದಯಪಾಲಿಸಿದರೆಂಬುದು ಜಗತ್ಪ್ರಸಿದ್ಧವೇ ಅದೆ. ಇವರು ತಮ್ಮ ಕಷ್ಟಗಳ ಮೇಲೆ ದೃಷ್ಟಿಯನ್ನಿಡದೆ ಧರ್ಮದಲ್ಲಿಯೇ ದೃಷ್ಟಿಯುಳ್ಳವರಾಗಿ ತಮ್ಮ ದೇಹಮಾನವನ್ನೆಲ್ಲಾ ಕಳೆದುದರಿಂದ ಅವರು ಈಗ ಪ್ರತ್ಯಕ್ಷವಾಗಿಲ್ಲದಿದ್ದರೂ ಅವರ ಸಚ್ಚರಿತ್ರೆಯು ಪ್ರತಿಯೊಬ್ಬರ ಆತ್ಮದಲ್ಲಿ ಮೂರ್ತೀಭವಿಸಿರುತ್ತದೆ ಅಧರ್ಮವನ್ನಾಚರಿಸುವುದರಿಂದ ಸುಖವು ದೊರೆಯುತ್ತದೆಂದು ನಮಗೆ ತೋರಿದರೂ ಅಂಥ ಅಧರ್ಮದಲ್ಲಿ ಪ್ರವರ್ತಿಸದಿರುವುದೇ ಮನುಷ್ಯನ ಕರ್ತವ್ಯವು. ಮಾಂಸವನ್ನು ತಿನ್ನುವ ಆಶೆಯಿಂದ ಹೋಗಿ ಜಾಲದಲ್ಲಿ ಸಿಕ್ಕು ಪ್ರಾಣವನ್ನು ಒಪ್ಪಿಸುವ

ಮೀನದಂತೆ, ಸುಖವೆಂದು ಭ್ರಮಿಸಿ ಅಧರ್ಮದಲ್ಲಿ ಮನಗೊಟ್ಟರೆ ಖಂಡಿತ ವಾಗಿ ಪರಿಣಾಮದಲ್ಲಿ ದುಃಖವುಂಟಾಗುವುದಲ್ಲದೆ ಸುಖವು ಮಾತ್ರ ಎಂದೂ ಉಂಟಾಗಲಾರದು. ಮನಸ್ಸೆಂಬುವದು ಬಹು ಚಂಚಲಸ್ವಭಾವವುಳ್ಳದ್ದಾದ್ದ ರಿಂದ ಸಂಸರ್ಗದೋಷದಿಂದ ಒಂದೊಂದು ಕಾಲದಲ್ಲಿ ಅಧರ್ಮವು ಧರ್ಮ ವಾಗಿಯೂ ಧರ್ಮವು ಅಧರ್ಮವಾಗಿಯೂ ತೋರುವುದುಂಟು. ಇಂಥ ತಪ್ಪು ತಿಳುವಳಿಕೆಯನ್ನು ತಿದ್ದಿ ಧರ್ಮಾಧರ್ಮ ಸ್ವರೂಪವನ್ನು ಸ್ಥಾಪಿಸು ವುದಕ್ಕಾಗಿಯೇ ಭಗವಂತನು ರಾಜರನ್ನೂ ಗುರುಗಳನ್ನೂ ಏರ್ಪಡಿಸಿರು ತ್ತಾನೆ. ರಾಜರು ಪ್ರಜೆಗಳನ್ನೂ ಮತ್ತು ಗುರುಗಳು ಶಿಷ್ಯರನ್ನೂ ತಿದ್ದಿ ನ್ಯಾಯವಾದಿಗಳನ್ನಾಗಿಯೂ, ಪಾಪಬೀರುಗಳನ್ನಾಗಿಯೂ ಮಾಡುತ್ತಿರ ಬೇಕು. ರಾಜರು ಬಹಿರಂಗವಾಗಿ ಮಾಡುವ ಪ್ರಜೆಗಳ ಅನ್ಯಾಯವನ್ನು ತಪ್ಪಿಸಬೇಕು. ಗುರುಗಳು ಅಂತರಂಗದಲ್ಲಿ ಶಿಷ್ಯರು ಮಾಡುವ ದುರಾಚಾರ ಗಳನ್ನು ತಪ್ಪಿಸಬೇಕು. ಹೀಗೆ ರಾಜಶಿಕ್ಷಣದಿಂದಲೂ ಗುರುವಿನ ಹಿತೋ ಪದೇಶದಿಂದಲೂ ಮಾನವರ ಬಹಿರಂಗ ಅಂತರಂಗಗಳೆರಡೂ ಪರಿಶುದ್ಧಗ ಳಾಗುತ್ತ ಹೋದರೆ ಮಾನವಲೋಕವು ಪುಟಕ್ಕೆ ಹಾಕಿದ ಚಿನ್ನದಂತೆ ಸರ್ವತ್ರ ಮಾನ್ಯವಾಗುವುದಲ್ಲದೆ ಮಾನವನು ಪಡೆಯಬೇಕಾದ ಪುರುಷಾರ್ಥಗಳು ಬಹು ಸುಲಭವಾಗಿ ದೊರೆಯುವುವು. ಪ್ರಕೃತದಲ್ಲಿ ರಾಜರು ಪ್ರಜೆಗಳ ಬಹಿರಂಗಾಚರಣೆಗಳನ್ನು ದರ್ಪದಿಂದ ತಿದ್ದುತ್ತಲಿದ್ದರೂ ಗುರುಗಳು ಮಾತ್ರ ಶಿಷ್ಯರ ಅಂತರಂಗಾಚರಣೆಯನ್ನು ತಿದ್ದುವುದರಲ್ಲಿ ಅಶಕ್ತರಾಗಿದ್ದಾರೆ. ಮಾವಾಟಿಗನು ಮದಿಸಿದ ಆನೆಯನ್ನು ಅಂಕುಶಪ್ರಹಾರದಿಂದ ತಿದ್ದುವಂತೆ ರಾಜರು ತಮ್ಮ ಆಯುಧದರ್ಪದಿಂದ ಪ್ರಜೆಗಳನ್ನು ಚೌರ್ಯಾದಿ ಅಧರ್ಮ ಮಾರ್ಗದಲ್ಲಿ ಕಾಲಿಡದಂತೆ ತಿದ್ದುವುದು ಸಾಧ್ಯವೇ ಸರಿ. ಅದರಂತೆ ಗುರುಗಳು ಶಿಷ್ಯರ ಡೊಂಕಾದ ಮನಸ್ಸನ್ನು ತಿದ್ದಿ ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಬೇಕಾದರೆ ಮೂಲಗುರುಗಳು ಬರೆದಿಟ್ಟ ಧರ್ಮಶಾಸ್ತ್ರವನ್ನು ಚೆನ್ನಾಗಿ ಓದಬೇಕು. ಅದರಲ್ಲಿ ಹೇಳಿದಂತೆ ತಾವು ಮೊದಲು ಅನುಷ್ಠಾನಮಾಡ ಬೇಕು. ಇಂದ್ರಿಯದಮನವನ್ನು ಮಾಡಿ ವಾಕ್ಸಿದ್ಧಿಯನ್ನು ಹೊಂದಬೇಕು. ಕಾಯವಾಙ್ಮನಸ್ಸುಗಳಲ್ಲಿ ಏಕಾಕಾರವಾದ ವೃತ್ತಿಯನ್ನು ಅವಲಂಬಿಸಬೇಕು. ಶರಣಾಗತರಾಗಿ ಬಂದ ಶಿಷ್ಯರಿಗೆ ನಿಜತತ್ತ್ವವನ್ನು ಬೋಧಿಸಬೇಕು. ಹೀಗೆ ಮಾಡುವುದರಿಂದ ಶಿಷ್ಯರ ಆತ್ಮವು ಪರಿಶುದ್ಧವಾಗಿ ಬಾಹ್ಯರಾಜ್ಯದಲ್ಲಿ ರಾಜ

ನಿಂದ ಪ್ರಜೆಗಳು ಅಭಿವೃದ್ಧಿ ಹೊಂದುವಂತೆ ಆತ್ಮೀಯರಾಜ್ಯದಲ್ಲಿ ಗುರುಗಳಿಂದ ಶಿಷ್ಯರು ಸೌಖ್ಯವನ್ನನುಭವಿಸುತ್ತಾರೆ. ಹಾಗಿಲ್ಲದೆ ಗುರುಗಳು ಶಿಷ್ಯರ ಮನೆಯಲ್ಲಿ ಕಾಣಿಕೆಯನ್ನು ಮಾತ್ರ ತೆಗೆದುಕೊಂಡು ಅವರಿಗೆ ಧರ್ಮಾಧರ್ಮಗಳನ್ನು ಬೋಧಿಸದಿದ್ದಲ್ಲಿ ಪಾಠವನ್ನು ಹೇಳದೆ ನಿದ್ರಿಸುತ್ತಿರುವ ಉಪಾಧ್ಯಾಯನಿಂದ ವಿದ್ಯಾರ್ಥಿಗಳೆಲ್ಲರೂ ಮೂಢರಾಗುವಂತೆ ಉದಾಸೀನರಾದ ಗುರುಗಳಿಂದ ಶಿಷ್ಯರೆಲ್ಲರೂ ಮೂಢಾತ್ಮರಾಗುತ್ತ ಬಂದರೆ ಪಾಪಪುಣ್ಯವಿಚಾರಶೂನ್ಯರಾಗಿ ಈಶ್ವರನು ಅನುಗ್ರಹಿಸಿದ ವಿವೇಕದಿಂದೊಡಗೂಡಿದ ಮಾನವ ಜನ್ಮಕ್ಕೆ ಫಲವೇ ಇಲ್ಲದಂತಾಗುತ್ತದೆ. ಪಾಪಕರ್ಮದಿಂದ ದುಃಖವೂ, ಪುಣ್ಯಕರ್ಮದಿಂದ ಸುಖವೂ ಉಂಟಾಗುವುವೆಂಬ ಧರ್ಮಶಾಸ್ತ್ರವು ಮಾನವನಿಗೆಮಾತ್ರ ಬೋಧಿಸಲ್ಪಟ್ಟಿರುವುದೇ ಹೊರತು ಪಶುಪಕ್ಷ್ಯಾದಿಗಳಿಗೆ ಬೋಧಿಸಲ್ಪಟ್ಟಿಲ್ಲ. ಮಾನವರು ದೇಹವಾಕ್ಕು ಮನಸ್ಸುಗಳಲ್ಲಿ ಬಹಳಮಟ್ಟಿಗೆ ಪರಿಶುದ್ಧರಾಗಿರಬೇಕಾಗಿದೆ. ಅಂದರೆ ನಮ್ಮ ಆತ್ಮವು ಸ್ಥೂಲದೇಹದಲ್ಲಿ ಕಳ್ಳತನ, ಜಾರತನ, ಹಿಂಸಾ ಮುಂತಾದ ಅಧರ್ಮಗಳನ್ನು ಮಾಡದಂತೆ ನೋಡಿಕೊಳ್ಳಬೇಕು. ವಾಕ್ಯದಲ್ಲಿ ಯಾರಿಗೂ ಕಠಿನೋಕ್ತಿಗಳನ್ನೂ, ಅಸತ್ಯವನ್ನೂ ಆಡದಂತೆ ನೋಡಿಕೊಳ್ಳಬೇಕು. ಮನಸ್ಸನ್ನು ಯಾರಿಗೂ ವಂಚಿಸದ ಹಾಗೆ ಸನ್ಮಾರ್ಗದಲ್ಲಿ ಪ್ರವೇಶಿಸುವಂತೆ ಮಾಡಿಕೊಂಡು ಅಧರ್ಮಚಿಂತನೆಯನ್ನು ಮಾಡದೆ ಧರ್ಮಚಿಂತೆಯಲ್ಲಿಯೇ ಆಸಕ್ತನಾಗಿರುವಂತೆ ನೋಡಿಕೊಳ್ಳಬೇಕು. ಹೀಗೆ ಜೀವಾತ್ಮರು ತಮ್ಮ ಅಧೀನದಲ್ಲಿರುವ ಮನಸ್ಸನ್ನೂ, ವಾಕ್ಯವನ್ನೂ, ದೇಹವನ್ನೂ ಅಧರ್ಮಮಾರ್ಗದಲ್ಲಿ ಹೋಗದಂತೆ ಮಾಡಿಕೊಂಡಲ್ಲಿ ಪರಮಾತ್ಮನು ಅಂತಹ ಜೀವಾತ್ಮರಲ್ಲಿ ಪರಮಪ್ರೀತಿಯುಳ್ಳವನಾಗಿ ಮೋಕ್ಷವೆಂಬ ಮಹಾಸುಖವನ್ನು ಅನುಗ್ರಹಿಸುತ್ತಾನೆ. ಅದಿಲ್ಲದೆ ಈಶ್ವರಸಂಕಲ್ಪಕ್ಕೆ ವಿರುದ್ಧವಾಗಿ ದೇಹದಲ್ಲಿ ಚೌರ್ಯಪ್ರಾಣಿಹಿಂಸಾದಿ ದುಷ್ಕರ್ಮಗಳನ್ನೂ ಮುಖದಲ್ಲಿ ಅಪವಿತ್ರವಾಕ್ಕುಗಳನ್ನೂ ಮನಸ್ಸಿನಲ್ಲಿ ಧರ್ಮವಿರುದ್ಧ ಪಾಪ ದುರಾಲೋಚನೆಯನ್ನೂ ಮಾಡುತ್ತ ಬಂದಲ್ಲಿ ಕೊಲೆಗಡಕರಾದ ಪ್ರಜೆಗಳನ್ನು ನೋಡಿ ಶಿಕ್ಷಿಸುವ ರಾಜನಂತೆ ಈಶ್ವರನು ಕುಪಿತನಾಗಿ ನಾಯಿ, ನರಿ, ಹಂದಿ ಮೊದಲಾದ ಹೀನಜನ್ಮಗಳಲ್ಲಿ ಹಾಕಿ ಅಲ್ಲಿ ಮಾಡಬಾರದ ದುಷ್ಕೃತಿಗಳನ್ನು ಮಾಡಿಸಿ ಜೀವರನ್ನು ಕಷ್ಟಕ್ಕೀಡುಮಾಡುವನು. ಹೀಗಾಗಿ

ಈಶ್ವರನಿಂದ ಬಂದ ಪವಿತ್ರಾಧಿಕಾರವನ್ನು ಮಾನವನೇ ಕಳೆದುಕೊಂಡು ಯಾವಾಗಲೂ ನರಕಕೂಪದಲ್ಲಿ ನರಳಬೇಕಾಗುವುದು. ಈ ಪಾಪಪುಣ್ಯರೂಪವಾದ ಸಾಮಾನ್ಯಧರ್ಮವನ್ನು ಪ್ರಥಮತಃ ಪ್ರತಿಯೊಬ್ಬನೂ ಪಾಲಿಸುತ್ತ, ಮುಂದೆ ತನ್ನ ಮತದ ವಿಶೇಷಧರ್ಮವನ್ನು ಅನುಷ್ಠಿಸಬೇಕು.

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪದಾರ್ಥಗಳೇ ಪುರುಷನ ಪ್ರಯೋಜನಗಳಾಗಿರುತ್ತವೆ. ಮಾನವದೇಹವನ್ನು ಧರಿಸಿದಮೇಲೆ ಈ ನಾಲ್ಕು ಪುರುಷಾರ್ಥಗಳನ್ನು ಪ್ರತಿಯೊಬ್ಬನೂ ಪಡೆಯಲೇಬೇಕು. ಇವುಗಳನ್ನು ಪಡೆಯದೆಹೋದರೆ ಮನುಷ್ಯನು ತನ್ನ ಕರ್ತವ್ಯವನ್ನು ಪೂರ್ಣಗೊಳಿಸಿದಂತಾಗುವುದಿಲ್ಲ. ಇವುಗಳಲ್ಲಿ ಧರ್ಮವು ಪಾಪಪುಣ್ಯಗಳನ್ನು ವಿಧಿಸುತ್ತದೆ. ಅರ್ಥವು ಧನಧಾನ್ಯವಸ್ತ್ರಾಭರಣಾದಿಗಳ ಸ್ವರೂಪವನ್ನು ವಿಧಿಸುತ್ತದೆ. ಕಾಮವು ಸ್ರಕ್ಚಂದನ ವನಿತಾದಿವಿಷಯವ್ಯಾಪಾರವನ್ನು ವಿಧಿಸುತ್ತದೆ. ಮುಕ್ತಿಯು ಜರಾಮರಣಗಳಿಂದ ದೂರಮಾಡಿ ನಿತ್ಯಾನಂದವೆಂಬ ಅರ್ಥವನ್ನು ವಿಧಿಸುತ್ತದೆ. ಪ್ರತಿಯೊಬ್ಬ ಮನುಷ್ಯನಿಗೂ ಪಾಪಪುಣ್ಯ ವಿಚಾರ, ಧನಧಾನ್ಯಾದಿ ಸಂಪತ್ತು ವಿಷಯಾಭಿಲಾಷೆ, ನಿತ್ಯಾನಂದ ಇವುಗಳು ಅವಶ್ಯ ಸಂಗ್ರಹಣೀಯುವಾಗಿದ್ದರೂ ಈ ನಾಲ್ಕರಲ್ಲಿ ಧರ್ಮದಲ್ಲಿಯೂ ಮೋಕ್ಷದಲ್ಲಿಯೂ ಪ್ರವೃತ್ತಿಯು ಹುಟ್ಟದೆ ಉಳಿದ ಅರ್ಥ, ಕಾಮಗಳೆರಡರಲ್ಲಿಯೇ ಪ್ರವೃತ್ತಿಯು ತೋರುತ್ತಿದೆ. ಅನೇಕ ಮಹರ್ಷಿಗಳ ಮತ್ತು ವೇದಾಗಮಗಳ ವಾಕ್ಯಗಳನ್ನು ಮೀರಿ ಮಾನವನ ಮನಸ್ಸು ಹೀಗೆ ಅರ್ಥ ಕಾಮಗಳಲ್ಲಿ ಮಾತ್ರ ಪ್ರವೇಶಿಸುತ್ತ ಧರ್ಮ ಮೋಕ್ಷಗಳಲ್ಲಿ ಪ್ರವೇಶಿಸದಿರಲು ಕಾರಣವೇನೆಂಬುದನ್ನು ವಿಚಾರಮಾಡಿನೋಡಿದರೆ ಮನಸ್ಸೆಂಬುವದು ಬಹು ಚಂಚಲಸ್ವಭಾವದ ಪದಾರ್ಥವಾಗಿರುವುದರಿಂದ ನೀರಿಗೆ ಹಳ್ಳವಿದ್ದ ಕಡೆಯಲ್ಲಿಯೇ ಹರಿಯುವ ಸ್ವಭಾವ ಇರುವಂತೆ ಸದ್ಯ ಫಲವನ್ನು ಕೊಡುವ ಸ್ವಭಾವವುಳ್ಳ ಮತ್ತು ಸ್ಥೂಲ ದೃಷ್ಟಿಗೆ ಆಪಾತ ರಮಣೀಯವಾಗಿ ಕಂಡುಬರುವ ಈ ಅರ್ಥಕಾಮಗಳಲ್ಲಿಯೇ ಮನಸ್ಸು ಬಹು ವೇಗವಾಗಿ ಓಡುತ್ತದೆ. ಪರಿಣಾಮದಲ್ಲಿ ಇದರಿಂದಾಗುವ ಮಹಾನರ್ಥವನ್ನು ಮಾತ್ರ ಯೋಚಿಸುವುದಿಲ್ಲ. ಒಂದು ವೇಳೆ ಹಾಗೆ ಯೋಚಿಸಿದ್ದರೆ ಅರ್ಥಕಾಮಗಳಲ್ಲಿ ಸಂಕುಚಿತ ವೃತ್ತಿಯನ್ನು ತಾಳಿ ಧರ್ಮಮೋಕ್ಷಗಳಲ್ಲಿ ಪ್ರತಿವರ್ತಿಸಲೇಬೇಕಾಗಿತ್ತು. ಈ ಚತುರ್ವಿಧ

ಪುರುಷಾರ್ಥಗಳಲ್ಲಿ ಅರ್ಥಕಾಮುಗಳೆರಡೂ ಐಹಿಕ ಪುರುಷಾರ್ಥವಾಗಿರುತ್ತವೆ. ಧರ್ಮಮೋಕ್ಷಗಳೆರಡೂ ಆಮುಷ್ಮಿಕ ಪುರುಷಾರ್ಥವಾಗಿರುತ್ತವೆ. ಈ ಆಮುಷ್ಮಿಕ ಪುರುಷಾರ್ಥಗಳು ಕೇವಲ ಅದೃಷ್ಟವಾಗಿರುವುದರಿಂದಲೂ ಐಹಿಕ ಪುರುಷಾರ್ಥವು ಕೇವಲ ದೃಷ್ಟರೂಪವಾಗಿರುವುದರಿಂದಲೂ ದೃಷ್ಟವಸ್ತುಗಳಲ್ಲಿ ಮನಸ್ಸು ಹೋಗುವಂತೆ ಅದೃಷ್ಟವಸ್ತುಗಳಲ್ಲಿ ಹೋಗುವುದಿಲ್ಲ. ಪ್ರಪಂಚದಲ್ಲಿ ಪ್ರತಿಯೊಬ್ಬನೂ ತಾನು ಧನಿಕನಾಗಬೇಕು, ವನಿತಾದಿ ಸೌಖ್ಯಾನುಭವ ಮಾಡಬೇಕೆಂಬ ಆಸೆಯು ಪರಮಾವಧಿಯನ್ನು ಹೊಂದಿರುವುದರಿಂದಲೂ ಧನವು ಅನಿತ್ಯವು, ವನಿತಾದಿ ಸೌಖ್ಯವು ಅನಿತ್ಯವು, ನಾವು ಈಶ್ವರನ ಪ್ರೇಮ ವನ್ನು ಪುಣ್ಯಕರ್ಮದಿಂದಾರ್ಜಿಸಿ ದೇವರಲ್ಲಿ ಸೇರಿ ನಿರವಧಿಕಾನಂದವನ್ನು ಪಡೆಯಬೇಕೆಂಬ ಅಭಿಲಾಷೆಗೆ ದೂರವಾಗಿದ್ದರಿಂದಲೂ ಮುಖ್ಯ ಪುರುಷಾ ರ್ಥಗಳೆನಿಸಿದ ಧರ್ಮಮೋಕ್ಷಸ್ವರೂಪಗಳು ಪ್ರಪಂಚದಲ್ಲಿ ಶಿಥಿಲವಾಗಿ ಸದ್ಯಃ ಫಲದಾಯಕಗಳಂತೆ ತೋರುವ ಅರ್ಥಕಾಮುಗಳಲ್ಲಿಯೇ ಪ್ರಪಂಚವೆಲ್ಲ ಪರವಶವಾಗಿ ಹೋಗಿದ್ದುದರಿಂದ ಧರ್ಮಕ್ಕೆ ನೆಲಗಟ್ಟಾದ ನಮ್ಮ ಭಾರತ ಭೂಮಿಯು ಜರ್ಝರಿತವಾಗಲು ಕಾರಣವಾಯಿತು.

ಮುಕ್ತಿಮಾರ್ಗಕ್ಕೆ ಸಾಧನವಾದ ಧರ್ಮವು ಯಾವ ಆತ್ಮನ ಆಶ್ರಯ ವನ್ನು ಬಿಟ್ಟುಹೋಗುವುದೋ ಅಂದೇ ಆ ಆತ್ಮವು ಪರಮಾತ್ಮನಿಂದ ದೂರ ವಾಗಿ ಅನೇಕ ಕಷ್ಟಗಳಿಗೆ ಗುರಿಯಾಗುತ್ತ ಹೋಗುವದು. ಲೋಕದಲ್ಲಿ ನಾಯಕ ನಾಯಕರುಗಳಿಗೆ ಕಾರಣಾಂತರಗಳಿಂದ ಉಂಟಾದ ವಿಯೋಗದಲ್ಲಿ ದೂತಿಯು ತನ್ನ ಪ್ರೌಢಿಮೆಯನ್ನು ಬೆಳೆಸುತ್ತಾಳಷ್ಟೆ. ಇಲ್ಲಿ ಜೀವಾತ್ಮನೆಂಬ ನಾಯಕಿಯು ಮೋಹಸಂಬಂಧದಿಂದ ಪರಮಾತ್ಮನೆಂಬ ನಾಯಕನನ್ನು ಬಹುಕಾಲದಿಂದ ಅಗಲಿ ಹೀನೋತ್ತಮಗಳಾದ ಅನೇಕ ದೇಹಗಳನ್ನು ಧರಿ ಸುತ್ತ ಸಂಕಟಕ್ಕೆ ಈಡಾಗಿರುತ್ತಾಳೆ. ಧರ್ಮವೆಂಬ ದೂತಿಯು ತನ್ನಲ್ಲಿರುವ ಪಾಪಪುಣ್ಯವೆಂಬ ಶಕ್ತಿಯನ್ನು ಆ ಜೀವಾತ್ಮನ ಮೇಲೆ ಉಪಯೋಗಿಸಿ ಅಂತಃ ಕಾಲುಷ್ಯವನ್ನು ತೊಳೆದು ಪರಿಶುದ್ಧಳನ್ನಾಗಿ ಮಾಡಿ ತನ್ನ ಸಂಗಡ ಕರೆದು ಕೊಂಡು ಹೋಗಿ ನಿರವಧಿಕ ಕೃಪಾಸಾಗರನಾದ ಪರಮಾತ್ಮನನ್ನು ಕೂಡಿಸುವು ದರಿಂದ ಈ ಧರ್ಮದ ಮಹೋಪಕಾರವನ್ನು ಇಷ್ಟೇ ಎಂದು ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲವು. ಪರಮಾತ್ಮನಲ್ಲಿ ಪ್ರೇಮವನ್ನು ಹುಟ್ಟಿಸುವ

ಇಂಥ ಧರ್ಮವು "ವೇದೋಽಖಿಲೋ ಧರ್ಮಮೂಲಂ" ಎಂಬ ಪ್ರಮಾಣ ವಚನದಂತೆ ವೇದೋಕ್ತವಾದುದಾಗಿಯೇ ಇರಬೇಕು. ವೇದೋಕ್ತವಲ್ಲದ ಧರ್ಮವು ಅವರವರ ಇಚ್ಛಾನುಸಾರವಾಗಿ ಧರ್ಮವೆಂದು ತಿಳಿದಿದ್ದರೂ ಅದು ಹಗ್ಗವನ್ನು ನೋಡಿ ಸರ್ಪವೆಂದು ತಿಳಿಯುವಂತೆ ಭ್ರಮರೂಪವೇ ಹೊರತು ವಾಸ್ತವವಾಗಿ ಧರ್ಮವೆನಿಸಲಾರದು. ದ್ರವ್ಯಾಭಿಲಾಷೆ ವನಿತಾದಿಸೌಖ್ಯಾಭಿಲಾಷೆಗಳು ಯಾರ ಪ್ರೇರಣೆಯಿಲ್ಲದೆ ತಾವಾಗಿಯೇ ಹುಟ್ಟುತ್ತವೆ. ಧರ್ಮಾಭಿಲಾಷೆ, ಮೋಕ್ಷಾಭಿಲಾಷೆ ಇವುಗಳು ಮಾತ್ರ ಇನ್ನೊಬ್ಬರ ಪ್ರೇರಣೆಯಿಲ್ಲದೆ ಹುಟ್ಟಲಾರವು. ಅರ್ಥಕಾಮಗಳು ಪ್ರಕೃತದಲ್ಲಿ ಸುಖದಾಯಕಗಳಾದರೂ ಅಂತ್ಯದಲ್ಲಿ ದುಃಖಕರಗಳಾಗಿರುತ್ತವೆ. ಧರ್ಮಮೋಕ್ಷಗಳು ಪ್ರಕೃತದಲ್ಲಿ ಕಷ್ಟಕರಗಳಾಗಿ ತೋರಿದರೂ ಅಂತ್ಯದಲ್ಲಿ ಸುಖದಾಯಕಗಳಾಗಿರುತ್ತವೆ. ವಿಷಮಿಶ್ರವಾದ ಅನ್ನವು ನಾಲಿಗೆಗೆ ರುಚಿಯನ್ನು ತೋರಿಸಿ ಪ್ರಾಣವನ್ನು ಹೀರುವಂತೆ ಧರ್ಮಮೋಕ್ಷವಿಲ್ಲದ ಕೇವಲ ಅರ್ಥಕಾಮಗಳು ಮನುಷ್ಯನ ವಿವೇಕವನ್ನು ಹಾಳುಮಾಡಿ ಅನಂತ ಕರ್ಮಗಳನ್ನು ಮಾಡಿಸಿ ಆತ್ಮನಿಗೆ ಅಧೋಗತಿಯನ್ನು ತಂದೊಡ್ಡುವವು. ಇಂಥ ಅಧೋಗತಿಯು ತಪ್ಪಿ, ವಿವೇಕವು ಹೆಚ್ಚಿ ಪುಣ್ಯಮಾರ್ಗದಲ್ಲಿ ಪ್ರವೃತ್ತಿಯು ಪಾಪಮಾರ್ಗದಲ್ಲಿ ನಿವೃತ್ತಿಯು ಹುಟ್ಟುವುದಕ್ಕಾಗಿಯೇ ಪರಮಾತ್ಮನು ಧರ್ಮಮೋಕ್ಷ ಸ್ವರೂಪವನ್ನು ವೇದಮೂಲಕವಾಗಿ ಮಾನವರಿಗೆ ಅನುಗ್ರಹಿಸಿದ್ದಾನೆ. ಈ ವೇದಗಳನ್ನು ಅನುಸರಿಸಿಯೇ ಹಿಂದಿನ ಮಹರ್ಷಿಗಳೂ ಆಚಾರ್ಯಭಗವತ್ಪಾದರೂ ಧರ್ಮ ಮೋಕ್ಷಗಳಲ್ಲಿ ಪರಾಕಾಷ್ಠದಶೆಯನ್ನು ಪಡೆದು ತಾವು ಅನುಭವಿಸುವ ನಿತ್ಯಸೌಖ್ಯಾನುಭವವನ್ನು ಗ್ರಂಥಮೂಲಕವಾಗಿಯೂ ಉಪದೇಶ ಮೂಲಕವಾಗಿಯೂ ಪ್ರಪಂಚದಲ್ಲಿ ವಿಸ್ತರಿಸಿರುತ್ತಾರೆ. ಪ್ರತಿಯೊಬ್ಬ ಮತಸ್ಥಾಪನಾಚಾರ್ಯರು, ಪ್ರತಿಯೊಬ್ಬ ಮನುಷ್ಯರು ಧಾರ್ಮಿಕರಾಗಿ ಮೋಕ್ಷವನ್ನು ಪಡೆಯಲೆಂಬುದ್ದೇಶದಿಂದಲೇ ಒಂದೊಂದು ಮತವನ್ನು ಸ್ಥಾಪಿಸಿ, ಆ ಮತದಲ್ಲಿರುವ ಜನಗಳನ್ನು ಅಧರ್ಮಮಾರ್ಗದಲ್ಲಿ ಹೋಗಗೊಡದೆ ಧರ್ಮಮಾರ್ಗದಲ್ಲಿ ಹೋಗುವಂತೆ ಶಿಕ್ಷಣವನ್ನು ಕೊಡುವುದಕ್ಕಾಗಿ ಆ ಮೂಲಾಚಾರ್ಯರು ತಮ್ಮ ತಮ್ಮ ಪೀಠಗಳಲ್ಲಿ ಗುರುಗಳನ್ನು ನಿಯಮಿಸಿ ಆಯಾಯ ಮತಸ್ಥರು ಧರ್ಮ ಮೋಕ್ಷರೂಪ ಪುರುಷಾರ್ಥಗಳಲ್ಲಿ ಪ್ರವೃತ್ತರಾಗುವಂತೆ ಅನುಕೂಲವನ್ನು ಕಲ್ಪಿಸಿರುತ್ತಾರೆ. ವಿದ್ಯಾರ್ಥಿಗಳ ನಡೆನುಡಿಗಳನ್ನು ತಿದ್ದಿ ಸನ್ಮಾರ್ಗದಲ್ಲಿ ಹಚ್ಚು

ವುದೇ ಉಪಾಧ್ಯಾಯನ ಮುಖ್ಯಕರ್ತವ್ಯವಾಗಿರುವಂತೆ ಮೂಲಾಚಾರ್ಯರ ಆಜ್ಞೆಯಂತೆ ಶಿಷ್ಯರ ಮನೋವೃತ್ತಿಯನ್ನು ತಿದ್ದಿ ಧರ್ಮಮೋಕ್ಷಗಳಲ್ಲಿ ಆಸಕ್ತರಾಗುವಂತೆ ಮಾಡುವುದೇ ಗುರುಗಳ ಕರ್ತವ್ಯ ಕರ್ಮವಾಗಿದ್ದರೂ ತಾವೂ ಸಹ ಶಿಷ್ಯರಂತೆ ಅರ್ಥಕಾಮುಗಳಲ್ಲಿಯೇ ಲೋಲರಾದರೆ ಧರ್ಮಮೋಕ್ಷಗಳೆಂಬ ಸುಖಸಾಧಕಗಳಾದ ಪುರುಷಾರ್ಥಗಳು ನಾಮಾವಶೇಷಗಳಾಗುವುದಲ್ಲದೆ ಪುಣ್ಯಪಾಪವಿಚಾರವುಳ್ಳ ಈ ಮಾನವಜನ್ಮಕ್ಕೆ ಫಲವಿಲ್ಲದಂತಾಗುತ್ತದೆ. ಆದ್ದರಿಂದ ಮನುಷ್ಯರ ಮನೋವೃತ್ತಿಯನ್ನು ಅರ್ಥದಿಂದ ಪರಿಶುದ್ಧಗೊಳಿಸಲು ಸಾಧ್ಯವಿಲ್ಲದ ಪ್ರಯುಕ್ತ ಧರ್ಮಮೋಕ್ಷಗಳಿಂದಲೇ ಪರಿಶುದ್ಧಗೊಳಿಸಬೇಕಾಗಿರುವದು. ಧರ್ಮಬುದ್ಧಿ-ಮೋಕ್ಷೇಚ್ಛೆ ಇವುಗಳಿಂದ ಕೂಡಿ ಅರ್ಥಕಾಮುಗಳಲ್ಲಿ ಆಸಕ್ತರಾದರೆ ತನ್ನಿಷ್ಟಾನುಸಾರ ಐಹಿಕಸೌಖ್ಯವನ್ನು ಪಡೆಯುವುದಲ್ಲದೆ ಆಮುಷ್ಮಿಕ ಸೌಖ್ಯವನ್ನೂ ಸಹ ಪಡೆಯಬಹುದು. ಲೋಕದಲ್ಲಿ ಬಿದರು ಎಳಸಾಗಿದ್ದರೆ ಹೇಗೆ ಬೇಕಾದರೂ ಹಾಗೆ ಬಾಗಿಸಲು ಬರುವಂತೆ ಇಂಥ ಧರ್ಮಬುದ್ಧಿಯಿಂದಲೂ, ಮೋಕ್ಷೇಚ್ಛೆಯಿಂದಲೂ ಕೂಡಿದವನಾಗಿ ಅರ್ಥಾರ್ಜನೆಯಲ್ಲಿಯೂ ಕಾಮೋಪಭೋಗದಲ್ಲಿಯೂ ಮನಸ್ಸು ಪ್ರವೇಶಿಸುವಂತೆ ಬಾಲ್ಯದಿಂದಲೂ ಅಭ್ಯಾಸ ಮಾಡುತ್ತ ಬಂದರೆ ಈ ಐಹಿಕ ಸೌಖ್ಯದೊಂದಿಗೆ ಆಮುಷ್ಮಿಕ ಸೌಖ್ಯವು ಉಂಟಾಗಿ ಚತುರ್ವಿಧ ಪುರುಷಾರ್ಥಗಳೂ ಕೈಸೇರಿ ಮಾನವಜನ್ಮವು ಸಫಲವಾಗುತ್ತದೆ. ಧರ್ಮಮೋಕ್ಷಗಳೆಂಬ ಪುರುಷಾರ್ಥಗಳಲ್ಲಿ ಲಕ್ಷ್ಯಕೊಡದೆ, ಕೇವಲ ಕಾಮ-ಅರ್ಥಗಳಲ್ಲಿ ಮಾತ್ರ ಲೋಲರಾದರೆ ಅದು ಮಾನವಧರ್ಮವನ್ನು ಅತಿಕ್ರಮಿಸಿ ನಡೆದಂತಾಗುವುದಲ್ಲದೆ ಪುಣ್ಯದಿಂದ ಸುಖವೂ, ಪಾಪದಿಂದ ದುಃಖವೂ ಉಂಟಾಗುವುದೆಂಬ ಧರ್ಮಾಧರ್ಮ ವಿಚಾರದಿಂದ ಬಿಡಲ್ಪಟ್ಟವನಾಗಿ ಪಶುಗಳಂತೆ ವ್ಯರ್ಥ ಜೀವಿಯಾಗಬೇಕಾಗುವುದು. ಎಲ್ಲ ಪ್ರಾಣಿಗಳಿಗಿಂತಲೂ ಈ ಮನುಷ್ಯನಿಗೆ ಮಾತ್ರ ಮುಕ್ತಿಹೇತುವಾದ ಧರ್ಮಾಧರ್ಮವಿಚಾರವೆಂಬ ವಿವೇಕವನ್ನು ಈಶ್ವರನು ದಯಪಾಲಿಸಿರುವುದರಿಂದ ಅಂಥ ಅನರ್ಘ್ಯವಾದ ವಿವೇಕವನ್ನು ಹಾಳುಮಾಡಿ ಸಾಮಾನ್ಯ ಜೀವಿಗಳಂತೆ ಕೇವಲ ಕಾಮದಲ್ಲಿ ಕೇವಲ ಅರ್ಥದಲ್ಲಿ ಮಗ್ನನಾಗಿ ಗುರುಗಳನ್ನೂ, ದೇವರನ್ನೂ, ದೇವರವಾಕ್ಯವನ್ನೂ ತುಚ್ಛೀಕರಿಸಿ ಅಧರ್ಮವೆಂಬ ಮಹಾರಣ್ಯವನ್ನು ಬೀಳುವುದು ನಮ್ಮ ಭಾರತೀಯ ಮಾನವ ಧರ್ಮಕ್ಕೆ ಹೇಯಾಸ್ಪದವಾಗಿರುತ್ತದೆ. ಆದ್ದರಿಂದ ಆಸ್ತಿಕಧರ್ಮಾವ

ಲಂಬಿಗಳಾದ ಭಾರತೀಯ ಮಾನವರಿಗೆ ತಮ್ಮ ವಯೋಧರ್ಮಕ್ಕನುಸಾರ ವಾಗಿ ಸ್ವಭಾವದಿಂದ ಹುಟ್ಟುವ ಕಾಮ, ಅರ್ಥಾಭಿಲಾಷೆಗಳ ಜೊತೆಯಲ್ಲಿ ಸುಖಸಾಧಕವಾದ ಧರ್ಮ ಮೋಕ್ಷಗಳಲ್ಲಿ ಪ್ರವೃತ್ತಿಯು ಹೆಚ್ಚಲಿ.

ದುರ್ಲಭಂ ಮಾನುಷಂ ಪ್ರಾಪ್ಯ ಜನನಂ ಜ್ಞಾನಸಾಧನಂ ।
ಯೇನಜಾನಂತಿ ದೇವೇಶಂ ತೇಷಾಮಾತ್ಮಾ ನಿರರ್ಥಕಃ ॥

ಮನುಷ್ಯಜನ್ಮವೇ ಶ್ರೇಷ್ಠವಾದ ಜನ್ಮವು. ಈ ಜನ್ಮದಲ್ಲಿ ಅಲ್ಲದೆ ಇನ್ನಾವ ಜನ್ಮದಲ್ಲಿಯೂ ಜ್ಞಾನವನ್ನು ಆರ್ಜಿಸಲಾಗುವುದಿಲ್ಲ. ಇಂಥ ಉತ್ತಮವಾದ ಮನುಷ್ಯ ಜನ್ಮವನ್ನು ಪಡೆದ ಪ್ರತಿಯೊಬ್ಬರೂ ಪರಮಾತ್ಮ ನನ್ನು ಅರಿಯಲೇಬೇಕು. ಯಾರು ಪರಮಾತ್ಮನನ್ನು ಮರೆಯುವರೋ ಅವರ ಆತ್ಮವು ನಿರರ್ಥಕವಾದುದು. ಎಂಬ ಶ್ರೀರೇಣುಕಭಗವತ್ಪಾದರ ಉಕ್ತಿಯಿರುವುದರಿಂದ ಪರಮಾತ್ಮನನ್ನು ಪ್ರೀತಿಸುವುದಕ್ಕಾಗಿಯೇ ದೇಹ ವನ್ನೂ ಕಣ್ಣು ಕಿವಿ ಮೂಗು ತ್ವಕ್ಕು ಶ್ರೋತೃ ಮುಂತಾದ ಇಂದ್ರಿಯ ಗಳನ್ನೂ ಬುದ್ಧಿಯನ್ನೂ ದೇವರು ನಮಗೆ ಅನುಗ್ರಹಿಸಿದ್ದಾನೆ. ಇಂಥ ಉತ್ತಮಸಾಮಗ್ರಿಯನ್ನು ಕ್ಷಣಿಕವೂ ದುಃಖವೂ ಆದ ದುಷ್ಟವಿಷಯಗಳಲ್ಲಿ ಉಪಯೋಗಿಸಿದ್ದಾದರೆ, ಅದರಿಂದ ದೇವರು ಕುಪಿತನಾಗುವನಲ್ಲದೆ ಪ್ರೀತಿ ಸುವುದಿಲ್ಲ. ಲೋಕದಲ್ಲಿ ತಂದೆಯು ತನ್ನ ಮಗನು ಸನ್ಮಾರ್ಗಪ್ರತಿಷ್ಠನಾ ಗಬೇಕು, ಅಧರ್ಮಮಾರ್ಗದಲ್ಲಿ ಪ್ರವೇಶಮಾಡಬಾರದು ಎಂಬ ಉದ್ದೇಶ ದಿಂದ ಆತನನ್ನು ರಕ್ಷಣೆಮಾಡುತ್ತ ಅಪಾರವಾದ ದ್ರವ್ಯವನ್ನು ವ್ಯಯಮಾಡಿ ವಿದ್ಯೆಯನ್ನು ಕಲಿಸುತ್ತಾನೆ. ಅಂಥ ವಿದ್ಯೆಯನ್ನು ಮಗನು ದುರ್ಮಾರ್ಗದಲ್ಲಿ ಉಪಯೋಗಿಸುತ್ತ ಬಂದರೆ ಅದಕ್ಕೆ ತಂದೆಯು ಏನುಮಾಡುವುದಕ್ಕಾದೀತು? ದೇವರು ಯಾವಉದ್ದೇಶದಿಂದ ಈಮನುಷ್ಯದೇಹವನ್ನೂ ಇಂದ್ರಿಯಗಳನ್ನೂ ಬುದ್ಧಿಜ್ಞಾನಗಳನ್ನೂ ಕೊಟ್ಟಿರುವನೋ ಆ ಉದ್ದೇಶವನ್ನು ನಿರ್ವಾಹಮಾ ಡದೆ ಅವುಗಳನ್ನೆಲ್ಲ ಅಡ್ಡಮಾರ್ಗದಲ್ಲಿ ಉಪಯೋಗಿಸುತ್ತ ದೇವರ ಆಜ್ಞೆಗೆ ವಿರೋಧವಾಗಿ ವರ್ತಿಸುತ್ತ ಬಂದರೆ, ಆದಕ್ಕನುಗುಣವಾದ ದುಷ್ಫಲವನ್ನು ಅನುಭವಿಸಬೇಕಾಗುವುದು. ಇಂಥವರನ್ನು ದೇವರು ರಕ್ಷಣೆಮಾಡುವುದಿಲ್ಲ. ದೇವರ ಇಚ್ಛೆಯಂತೆ ನಡೆಯಲಾರದ ಇಂಥವನ ವಿಷಯದಲ್ಲಿ ಪರಮಾತ್ಮನು ಮುಂದೆಂದೂ ಇಂಥ ದೇಹವನ್ನಾಗಲಿ, ಇಂಥ ಬುದ್ಧೀಂದ್ರಿಯಾದಿ ಉತ್ತಮ ಸಾಮಗ್ರಿಯನ್ನಾಗಲಿ ಕೊಡುವುದಿಲ್ಲ. ಲೋಕದಲ್ಲಿ ತನಗೆ ಬಂದ ಅಧಿಕಾರ

ದಲ್ಲಿ ತನ್ನ ಕರ್ತವ್ಯಗಳನ್ನೆಲ್ಲಾ ನಂಬಿಕೆಯಿಂದ ಸಂಪೂರ್ಣಮಾಡಲು ಯಾವನು ಶಕ್ತನಾಗಿರುವನೋ ಅಂಥವನಿಗೆ ಪ್ರಭುತ್ವದವರು ಸರ್ವಸ್ವಾತಂತ್ರ್ಯವನ್ನು ಕೊಡುತ್ತಾರೆ. ಯಾವನು ತನ್ನ ಕರ್ತವ್ಯಗಳನ್ನು ನಡೆಸಲು ಅಸಮರ್ಥನಾಗಿದ್ದಾನೆಯೋ ಅವನಿಗೆ ಪುನಃ ಯಾವ ಸ್ವಾತಂತ್ರ್ಯವೂ ಕೊಡಲ್ಪಡುವುದಿಲ್ಲವು. ಮತ್ತು ಹೆಚ್ಚಿನ ಅಧಿಕಾರವೂ ಶಿಕ್ಕದೆ, ಅದೇ ಅಧಿಕಾರದಲ್ಲಿಯೂ ಇರದೆ ಯಾವುದಾದರೂ ಒಂದು ಕೀಳುಕೆಲಸಕ್ಕೆ ನೇಮಿಸಲ್ಪಡುವುದು ರಾಜನೀತಿಯಾಗಿರುವಂತೆ ಜ್ಞಾನಸಾಧಕವಾದ ತನ್ನ ಬುದ್ಧೀಂದ್ರಿಯಾದಿ ಸಾಮಗ್ರಿಯನ್ನು ದುರುಪಯೋಗಮಾಡಿದ ಇಂಥವನಿಗೆ ಮುಂದೆ ದೇವರು ಇದಕ್ಕಿಂತಲೂ ಉತ್ತಮಜನ್ಮವನ್ನಾಗಲಿ ಇದೇ ಜನ್ಮವನ್ನಾಗಲಿ ಕೊಡದೆ ಕನಿಷ್ಠವಾದ ಬುದ್ಧೀಂದ್ರಿಯಾದಿಶಕ್ತಿಗಳಿಲ್ಲದ ಕ್ರಿಮಿಕೀಟಾದಿ ನೀಚದೇಹಗಳನ್ನು ಕೊಡುತ್ತಾನೆ. ಅಂಥ ಜನ್ಮಗಳಲ್ಲಿ ಮಾತ್ರ ಏನು ಬೇಕಾದರೂ ಮಾಡಬಹುದು. ಯಾವ ವಿಧಿನಿಷೇಧವೂ ಇರುವುದಿಲ್ಲ. ಮನುಷ್ಯದೇಹವೆಂಬುವದು ನಮ್ಮ ಆತ್ಮವನ್ನು ಜನನ ಮರಣರೂಪವಾದ ಸಂಸಾರಸಮುದ್ರದಿಂದ ದಾಟಿಸಿ ಪರಮಾತ್ಮನನ್ನು ಶೇರಿಸುವ ಒಂದು ದೊಡ್ಡ ಹಡಗದಂತಿರುವದು. ಸಮುದ್ರದಲ್ಲಿ ಹೋಗುತ್ತಿರುವ ಹಡಗವು ಬಹಳ ಭದ್ರವಾಗಿರಬೇಕಾಗುವುದು. ಎಲ್ಲಿಯಾದರೂ ಒಂದು ತೂತು ಬಿದ್ದರೂ ಸಹ ಆ ಹಡಗಿನಲ್ಲೆಲ್ಲ ನೀರು ತುಂಬಿಕೊಂಡು ಸಮುದ್ರದಲ್ಲಿ ಮುಳುಗಿ ಹೋಗುವುದಲ್ಲದೆ ಸಮುದ್ರತೀರವನ್ನು ಹೊಂದಲಾರದು. ಹಡಗದ ಹಾಗೆ ನಮ್ಮ ದೇಹದಲ್ಲಿರುವ ಚಕ್ಷುರಾದಿ ಇಂದ್ರಿಯಗಳೆಲ್ಲವೂ ಎಲ್ಲಿಯವರೆಗೆ ಸರಿಯಾದ ದಾರಿಯಲ್ಲಿರುತ್ತವೆಯೋ ಅಲ್ಲಿಯವರಿವಿಗೂ ಭವಸಾಗರವು ನಿರಾತಂಕವಾಗಿ ದಾಟಲ್ಪಡುತ್ತ ಬರುತ್ತದೆ. ಎಂದು ಇಂದ್ರಿಯಗಳು ದಾರಿತಪ್ಪುವುವೋ ಅಂದೇ ಈ ದೇಹವೆಂಬ ಹಡಗಿನಲ್ಲಿ ಕೂತಿರುವ ಆತ್ಮನು ಈ ದೇಹದೊಂದಿಗೆ ಮುಳುಗಿಹೋಗುವನು.

" ಇಂದ್ರಿಯಾಣಾಂ ಹಿ ಚರತಾಂವಿಷಯೇಷ್ವಪಹಾರಿಷು ।
ಸಂಯಮೇಯತ್ನಮಾತಿಷ್ಠೇತ್ ವಿದ್ವಾನ್ಯಂತೇವವಾಜಿನಾಂ ॥ "

ರಥಹೊಡೆಯುವ ಮನುಷ್ಯನು ಅಡ್ಡಡ್ಡವಾಗಿ ಎಳೆದುಕೊಂಡು ಹೋಗುತ್ತಿರುವ ಕುದುರೆಗಳನ್ನು ಹೇಗೆ ತಡೆಯುತ್ತಾನೆಯೋ ಹಾಗೆ ವಿವೇಕಿಯಾದ ಪುರುಷನು ಚಕ್ಷುರಾದೀಂದ್ರಿಯುಗಳನ್ನು ದುರ್ವಿಷಯುಗಳಲ್ಲಿ ಎರಗ

ದಂತೆ ಪ್ರಯತ್ನಿಸಬೇಕು ಎಂದು ಉಪನಿಷದ್ವಾಕ್ಯವು ಇದೇ ಅರ್ಥವನ್ನು ದೃಢಗೊಳಿಸುತ್ತದೆ. ಇಂದ್ರಿಯನಿಗ್ರಹಮಾಡದಿದ್ದವನ ಜ್ಞಾನವೆಲ್ಲವೂ ನಷ್ಟ ವಾಗಿ ಹೋಗುತ್ತದೆ.

" ಇಂದ್ರಿಯಾಣಾಂತುಸರ್ವೇಷಾಂ ಯದ್ಯೇಕಕ್ಷರತೀಂದ್ರಿಯಂ ।
ತೇನಾಸ್ಯಕ್ಷರತಿಪ್ರಜ್ಞಾದೃತೇಃ ಪಾದಾದಿವೋದಕಂ ॥ "

ಚರ್ಮದ ತಿತ್ತಿಯಲ್ಲಿ ನೀರುತುಂಬಿದ್ದರೂ ಅದಕ್ಕೆ ಎಲ್ಲಿಯಾದರೂ ಒಂದು ಸಣ್ಣರಂಧ್ರಬಿದ್ದರೂ ಆ ರಂಧ್ರದಿಂದ ಒಳಗಿರುವ ನೀರೆಲ್ಲವೂ ಹೊರಗೆ ಹರಿದುಹೋಗುವಂತೆ ಇಂದ್ರಿಯಗಳಲ್ಲಿ ಯಾವುದಾದರೂ ಒಂದು ಇಂದ್ರಿಯವು ಸ್ವಲ್ಪ ಅಮಾರ್ಗದಲ್ಲಿ ಹೋದರೂ ಆ ಇಂದ್ರಿಯದ್ವಾರದಿಂದ ದೇಹದೊಳಗಣ ಜ್ಞಾನವೆಲ್ಲವೂ ನಷ್ಟವಾಗಿಹೋಗುತ್ತದೆ. ಆದ್ದರಿಂದ ಮನುಷ್ಯನು ಉತ್ತಮ ಸ್ಥಿತಿಯನ್ನು ಹೊಂದಬೇಕಾದರೆ ತನ್ನ ಇಂದ್ರಿಯಗಳನ್ನೆಲ್ಲಾ ಸನ್ಮಾರ್ಗದಲ್ಲಿ ಉಪಯೋಗಿಸುವುದನ್ನು ಕಲಿಯಬೇಕು. ಈ ಎಲ್ಲ ಇಂದ್ರಿಯಗಳ ಮನಸ್ಸೇ ಪ್ರಧಾನವಾದುದು. ಇದನ್ನು ಪರಮಾತ್ಮನ ಕಡೆಗೆ ತಿರುಗಿಸುವುದರಿಂದ ಬಾಹ್ಯಪ್ರಪಂಚದಲ್ಲಿ ಹರಿಯುವ ಸ್ವಭಾವವುಳ್ಳ ಚಕ್ಷುರಾದಿ ಇಂದ್ರಿಯಗಳು ಅಂತರ್ಮುಖಗಳಾಗಿ ಹೃದಯಾಕಾಶದಲ್ಲಿ ವಿರಾಜಮಾನವಾದ ಶಿವಲಿಂಗದ ಲಾವಣ್ಯಾದಿಗಳನ್ನು ನೋಡುತ್ತ ವಿಶ್ರಾಂತಿ ಸೌಖ್ಯವನ್ನನುಭವಿಸುತ್ತವೆ. ಇಂದ್ರಿಯಗಳು ಅಂತರ್ಮುಖಗಳಾಗದೆ ಯಾವಾಗಲೂ ಬಾಹ್ಯದಲ್ಲಿ ಇದ್ದು ಇವುಗಳ ಜತೆಯಲ್ಲಿ ಅಂತರಿಂದ್ರಿಯವೂ ಸಹ ಓಡಿ ಓಡಿ ಎಲ್ಲಿಯೂ ಗತಿಯಿಲ್ಲದೆ ನಿಲ್ಲಬೇಕಾಗುವುದು. ಬೆಂಕಿಯಲ್ಲಿ ಆಜ್ಯಾದಿ ಹವಿಸ್ಸನ್ನು ಹಾಕಿದಷ್ಟು ಆ ಬೆಂಕಿಯು ಹೆಚ್ಚುತ್ತಲೇ ಹೋಗುವಂತೆ ಇಂದ್ರಿಯಗಳಿಗೆ ಬಾಹ್ಯಗಳಾದ ವಿಷಯಭೋಗವನ್ನು ಅನುಭವಿಸಿದಂತೆ ಮತ್ತಿಷ್ಟು ಭೋಗೇಚ್ಛೆಯು ಹೆಚ್ಚುವುದಲ್ಲದೆ, ಶಾಂತಿಯುಂಟಾಗುವುದಿಲ್ಲ. ಇಂದ್ರಿಯಗಳು ಶಾಂತವಾಗದೆ ಮೇಲಕ್ಕೇಳಲಾರನು. ಬಹಿರಿಂದ್ರಿಯ ಅಂತರಿಂದ್ರಿಯಗಳು ಈ ಜೀವಾತ್ಮನನ್ನು ಘೋರವಾದ ಸಂಸಾರದಲ್ಲಿ ಎಲ್ಲಿಯವರಿವಿಗೆ ಕೆಡುವಿರುವುವೋ ಅಲ್ಲಿಯವರಿವಿಗೂ ಈ ಜೀವಾತ್ಮನು ಹಿಂಸಾ, ಅಸತ್ಯಸ್ತೇಯ, ಅಬ್ರಹ್ಮಚರ್ಯ, ನಿರ್ದಯೆ, ಅಕ್ಷಮೆ ಮುಂತಾದ ದುರ್ಗುಣಗಳಿಗೆ ಬೀಡಾಗುವನು.

ಇಂದ್ರಿಯಾಣಾಂ ವಶೀಕಾರೋನಿವೃತ್ತಿರೀತಿಗೀಯತೇ ।
ಲಕ್ಷ್ಯೀಕೃತೇಶಿವೇತೇಷಾಂ ಕುತಸ್ಸಂಸಾರಸಾಗರಃ ॥

ಎಂಬ ರೇಣುಕಭಗವತ್ಪಾದರ ಉಕ್ತಿಯಂತೆ ಇಂದ್ರಿಯಗಳಿಗೆ ತಾನು ವಶನಾಗದೆ ಆ ಇಂದ್ರಿಯಗಳನ್ನೇ ತನ್ನ ವಶಮಾಡಿಕೊಂಡು ಪರಮಾತ್ಮನೊಬ್ಬನನ್ನೇ ಇಂದ್ರಿಯಗಳಿಗೆ ಲಕ್ಷ್ಯಮಾಡುತ್ತ ಬಂದರೆ ಸಂಸಾರಸಾಗರಾಭಿಮುಖನಾಗಿರುವ ಈ ಜೀವಾತ್ಮನು ಉತ್ತೀರ್ಣನಾಗಿ ಮಧ್ಯದಲ್ಲಿ ಬಂದಿರುವ ಕಿಂಚಿಜ್ಞತ್ವಾದಿ ಅಲ್ಪಧರ್ಮಗಳು ನಷ್ಟವಾಗಿ ಸ್ವಭಾವಸಿದ್ಧವಾಗಿರುವ ಸರ್ವಜ್ಞತ್ವಾದಿ ಕಲ್ಯಾಣಗುಣಗಳು ಉದ್ಬೋಧವಾಗಿ ಪ್ರಪಂಚವೆಲ್ಲವೂ ಪರಮಾತ್ಮಸ್ವರೂಪವಾದುದೆಂಬ ದೃಢಭಾವನೆಯು ಬೆಳೆಯುತ್ತ ಅಹಂಕಾರಮಮಕಾರಗಳೆಲ್ಲವೂ ನೀಗಿ ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ದಯೆ ಕ್ಷಮೆ ಮುಂತಾದ ಸದ್ಗುಣಗಳಿಗಾಶ್ರಯನಾಗುತ್ತ ಸಮುದ್ರದಿಂದ ಹರಿದುಬಂದ ನೀರು ಪುನಃ ಸಮುದ್ರಕ್ಕೆ ಸೇರಿ ಸಮುದ್ರಾಕಾರವೇ ಆಗುವಂತೆ ಪರಮಾತ್ಮನಿಂದ ಬೇರ್ಪಟ್ಟ ಈ ಜೀವಾತ್ಮನು ಅಂತರಿಂದ್ರಿಯ ಬಹಿರಿಂದ್ರಿಯ ಸಹಾಯದಿಂದ ಮತ್ತೆ ಪರಮಾತ್ಮನನ್ನೇ ಸೇರಿ ಮರಳಿ ಈ ಭೌತಿಕಶರೀರವನ್ನು ಪ್ರವೇಶ ಮಾಡದಂತಾಗುವನು. ಇದೇ ಮಾನವಜನ್ಮದ ಮುಖ್ಯ ಗುರಿಯಾಗಿರುವುದು. ಮಿಕ್ಕ ಪ್ರಾಪಂಚಿಕ ಸೌಖ್ಯಗಳೆಲ್ಲವೂ ಆನುಷಂಗಿಕ ಫಲಗಳಾಗುವುವಲ್ಲದೆ ಮುಖ್ಯ ಫಲಗಳಾಗಲಾರವು. ಇದೇ ಮಾನವೀಯಧರ್ಮವೆನಿಸುತ್ತದೆ. ಇಂಥ ಸ್ಥಿತಿಯನ್ನು ಮಾನವದೇಹಧಾರಿಗಳು ಎಂದು ಪಡೆಯುವರೋ ಅಂದೇ ಪರಮಾತ್ಮನ ಇಚ್ಛೆಯು ಪರಿಪೂರ್ಣವಾಗುವದು. ಅದುವರಿವಿಗೂ ಸಮುದ್ರದಲ್ಲಿನ ಅಲೆಗಳಂತೆ ನಾನಾವಿಧಗಳಾದ ದುಃಖಗಳು ಒಂದರಮುಂದೊಂದು ಹುಟ್ಟುತ್ತಲೇ ಬರುತ್ತವೆ. ಆದುದರಿಂದ ಪ್ರತಿಯೊಬ್ಬ ಮಾನವನೂ ತಾನು ಪ್ರಪಂಚ ವ್ಯಾಪಾರದಲ್ಲಿ ಇದ್ದರೂ ಪದ್ಮದಳದಲ್ಲಿರುವ ನೀರಿನ ಹನಿಯಂತೆ ದುಃಖಹೇತುವಾದ ಆ ಪ್ರಪಂಚಸಂಬಂಧವನ್ನು ಅಂಟಿಸಿಕೊಳ್ಳದೆ ಪರಮಾತ್ಮನಲ್ಲಿ ಮನಸ್ಸಿಟ್ಟರೆ ಜರಾಮರಣರೂಪವಾದ ದುಃಖದಿಂದ ದೂರಾಗುವನು.

ವರ್ಣಾಶ್ರಮಧರ್ಮಗಳ ಆಧಾರದಲ್ಲಿಯೇ ಈ ಭಾರತಭೂಮಿಯು ನಿಂತಿರುತ್ತದೆ. ವೇದಶಾಸ್ತ್ರಪುರಾಣೇತಿಹಾಸಗಳೆಲ್ಲವೂ ವರ್ಣಾಶ್ರಮಧರ್ಮಗಳನ್ನೇ ಬೋಧಿಸುತ್ತವೆ. ಭಗವದ್ಗೀತೆಯಲ್ಲಿ "ಚಾತುರ್ವರ್ಣ್ಯಂ ಮಯಾ

ಸೃಷ್ಟಂ ಗುಣಕರ್ಮವಿಭಾಗಶಃ" ಎಂದು ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸುವ ರೀತಿಯನ್ನು ಪರಿಶೀಲಿಸಿದರೆ ಅವರವರು ಹಿಂದಣಜನ್ಮದಲ್ಲಿ ಮಾಡಿದ ಪುಣ್ಯಪಾಪಕರ್ಮಗಳಿಗನುಸಾರವಾಗಿ ಬ್ರಾಹ್ಮಣಾದಿಯೋನಿಗಳಲ್ಲಿ ಜನ್ಮಗಳನ್ನು ಧರಿಸುವರೆಂದೂ ಬ್ರಾಹ್ಮಣಾದಿ ವರ್ಣಗಳ ಸೃಷ್ಟಿಯು ಭಗವಂತನಿಂದ ಆದುದಲ್ಲದೆ ಮನುಷ್ಯಕೃತವಾದುದಲ್ಲವೆಂದೂ ಸ್ಪಷ್ಟವಾಗುತ್ತದೆ. ಹಾಗೆ ಮನುಷ್ಯಕಲ್ಪಿತಗಳೇ ಎಂದು ಹೇಳುವುದಾದರೆ "ಮಯಾ ಸೃಷ್ಟಂ" ನನ್ನಿಂದಲೇ ಸೃಷ್ಟಿಸಲ್ಪಟ್ಟಿತೆಂದು ಹೇಳುವ ಆ ಶ್ಲೋಕಕ್ಕೆ ಅರ್ಥವೇ ಇಲ್ಲದಂತಾಗುತ್ತದೆ. ಇದರಿಂದ ಬ್ರಾಹ್ಮಣಾದಿಜನ್ಮಗಳನ್ನು ಪಡೆಯಲು ಹಿಂದಿನ ಜನ್ಮದ ಗುಣಗಳೇ ಕಾರಣಗಳೆಂದೂ, ಈಗಿನ ಜನ್ಮದಲ್ಲಿ ಆರ್ಜಿಸಿದ ಗುಣಗಳು ಮುಂದಣ ಜನ್ಮಗಳಿಗೆ ಕಾರಣಗಳೆಂದೂ ಸ್ಪಷ್ಟವಾಗುವುದರಿಂದ ಬ್ರಾಹ್ಮಣಾದಿವರ್ಣಗಳು ಬರುವುದಕ್ಕೆ ಜನ್ಮಗಳು ಕಾರಣವಾಗುವುವಲ್ಲದೆ ಕೇವಲ ಗುಣಗಳೇ ಕಾರಣವಾಗಲಾರವು. ಈಗಿನ ಕೆಲ ಆತ್ಮೋತ್ಕರ್ಷಾಪೇಕ್ಷಿಗಳು ವರ್ಣಾಶ್ರಮಧರ್ಮಗಳು ಜನಗಳನ್ನು ಕೀಳು ಮೇಲು ಮಾಡುವ ಒಂದು ಉಪಾಯವೇ ಹೊರತು ಇನ್ನೇನೂ ಮುಕ್ತಿಸಾಧಕಗಳಾಗುವುದಿಲ್ಲವೆಂದು ಹೇಳಹತ್ತಿರುವರು. ಸೂಕ್ಷ್ಮದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಇದು ಅವಿಚಾರಿತರಮಣೀಯವೆಂದು ಕಾಣುತ್ತದೆ. ವರ್ಣಾಶ್ರಮಧರ್ಮಗಳು ಭಗವಂತನ ಪ್ರೀತಿಗೆ ಸಾಧನವಾಗಿರುವುವಲ್ಲದೆ ಈ ಪ್ರಪಂಚಭಾರವನ್ನು ಎಲ್ಲರೂ ಸಮವಾಗಿ ಹಂಚಿಕೊಂಡು ಪರಸ್ಪರ ರಾಗದ್ವೇಷವನ್ನು ಬಿಟ್ಟು ಮೈತ್ರಿಯಿಂದ ವ್ಯವಹರಿಸಬೇಕೆಂಬ ಸದಭಿಪ್ರಾಯವನ್ನು ತೋರಿಸುವವು. ಹಾಗೆ ಉತ್ಕರ್ಷಾಪಕರ್ಷಗಳನ್ನೇ ತೋರಿಸುವವುಗಳಾಗಿದ್ದರೆ ಎಲ್ಲರನ್ನೂ ಸಮದೃಷ್ಟಿಯಿಂದ ನೋಡಬೇಕೆಂಬ ಧರ್ಮಶಾಸ್ತ್ರವು ವ್ಯರ್ಥವಾಗಿಹೋಗುತ್ತದೆ. ಆದರೆ ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ ಯಾರು ಗುಣವಂತರಾಗಿರುತ್ತಾರೆಯೋ ಅವರನ್ನು ಪ್ರೀತಿಸುತ್ತಿರುವುದೇ ಮಾನವಧರ್ಮದ ತಿರುಳಾಗಿರುತ್ತದೆ. ಗುಣಹೀನನಾದ ಬ್ರಾಹ್ಮಣನಿಗಿಂತಲೂ ಗುಣವಂತನಾದ ಶೂದ್ರನೇ ಮಾನ್ಯನೆಂಬ ನೀತಿಯನ್ನು ಎಲ್ಲರೂ ಒಪ್ಪಿಕೊಳ್ಳಲೇಬೇಕಾಗಿದೆ. ಇದರಿಂದ ಬ್ರಾಹ್ಮಣನಾಗಲಿ, ಕ್ಷತ್ರಿಯಾದಿಗಳೇ ಆಗಲಿ ಎಲ್ಲರೂ ಹಿಂಸಾದಿ ಕ್ರೂರಕರ್ಮಗಳನ್ನು ಮಾಡದೆ ಸೌಮ್ಯಗುಣವನ್ನವಲಂಬಿಸಬೇಕೆಂಬುವುದು ಎಲ್ಲರ ಸಾಮಾನ್ಯ ನಿಯಮ

ವಾಗಿದೆ. ಇಷ್ಟುಮಾತ್ರದಿಂದ ವರ್ಣಾಶ್ರಮಧರ್ಮಗಳಿಗಾದ ಕುಂದಕವೇನು? ವೀರಶೈವಸಮಾಜದಲ್ಲಿ ಕೆಲವರು ಬ್ರಾಹ್ಮಣರನ್ನು ನೋಡಿ ತಾವೂ ಬ್ರಾಹ್ಮಣರೆನಿಸಿಕೊಳ್ಳಬೇಕೆಂದು ಪ್ರಯತ್ನಮಾಡುತ್ತಲಿರುವರೆಂದು ಹೇಳಲುಪಕ್ರಮಿಸಿರುತ್ತಾರೆ. ಬ್ರಾಹ್ಮಣ್ಯವು ಒಬ್ಬರನ್ನು ನೋಡಿ ಒಬ್ಬರು ಕಲಿತರೆ ಬರತಕ್ಕುದಲ್ಲ. ವೀರಶೈವಮತವೂ ಸಹ ಅನಾದಿಕಾಲದಿಂದ ದ್ವೈತಾದ್ವೈತಾದಿ ಮತಗಳಂತೆ ವರ್ಣಾಶ್ರಮಸಹಿತವಾದುದೇ ಹೊರತು ವರ್ಣಾಶ್ರಮರಹಿತವಾದುದಲ್ಲ. ಆದರೆ ಆ ವರ್ಣಾಶ್ರಮಗಳು ಪ್ರಾಕೃತ ಅಪ್ರಾಕೃತ ಎಂಬ ಎರಡು ಭೇದವನ್ನು ಹೊಂದಿರುವುದರಿಂದ ವೀರಶೈವಮತದಲ್ಲಿ “ವರ್ಣಾಶ್ರಮಾದಿಧರ್ಮಾಣಾಂ ವ್ಯವಸ್ಥಾಹಿ ದ್ವಿಧಾಮತಾ । ಏಕಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾಪರಾ” ಎಂದು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದಂತೆ ಶಿವನಿಂದುಕ್ತವಾದ ವರ್ಣಾಶ್ರಮವ್ಯವಸ್ಥೆಯೆಂತಲೂ, ಬ್ರಹ್ಮನಿಂದುಕ್ತವಾದ ವರ್ಣಾಶ್ರಮವ್ಯವಸ್ಥೆಯೆಂತಲೂ ಎರಡುಪ್ರಕಾರವಾಗಿರುವವು. ಸಾಮಾನ್ಯವಾಗಿ ವರ್ಣಾಶ್ರಮಧರ್ಮಗಳು ಎಲ್ಲರಿಗೂ ಸಮಾನಗಳಾಗಿದ್ದರೂ ಪಶುವಿಕಸನಾದಿ ಕೆಲ ಧರ್ಮಗಳು ಮಾತ್ರ ವೀರಶೈವಧರ್ಮಕ್ಕೆ ವಿರುದ್ಧಗಳಾಗಿರುವುದರಿಂದಲೂ, ಉಳಿದ ನಿತ್ಯ ನೈಮಿತ್ತಿಕಾದಿ ಧರ್ಮಗಳು ಸಮಾನವಾಗಿರುವುದರಿಂದಲೂ, ಇನ್ನು ಕೆಲವು ವಿಶೇಷ ಧರ್ಮಗಳನ್ನು ಅನುಷ್ಠಿಸುವುದರಿಂದಲೂ ಇವರು ಅಪ್ರಾಕೃತವರ್ಣಾಶ್ರಮಿಗಳೆಂದು ಸಿದ್ಧಾಂತದಲ್ಲಿ ಹೇಳಲ್ಪಟ್ಟಿರುವುದರಿಂದ ವರ್ಣಾಶ್ರಮಧರ್ಮಗಳು ಎಲ್ಲರಿಗೂ ಇರುವಂತೆ ವೀರಶೈವರಿಗೂ ಇರುವವು.

“ತಸ್ಮಾನ್ಮಾಹೇಶ್ವರೋ ವಿಪ್ರಃ ಶ್ರುತಿಸ್ಮೃತ್ಯಾಗಮೋದಿತಂ ।
ವರ್ಣಾಶ್ರಮೋದಿತಂ ಧರ್ಮಂ ಪ್ರಾಣತ್ಯಾಗೇಪಿ ನತ್ಯಜೇತ್ ॥
ಪ್ರಾಣಲಿಂಗಾಂಗಸಂಬಂಧೀ ವೀರಮಾಹೇಶ್ವರೋ ಜನಃ ।
ಸ್ವಜಾತ್ಯಾಶ್ರಮಧರ್ಮಂ ಯಸ್ತ್ಯಕ್ತ್ವಾ ವೇದೋದಿತಂ ನರಃ ॥
ಅನ್ಯಜಾತ್ಯುಚಿತಾಚಾರಂ ಚರೇತ್ಸಪತಿತೋ ಭವೇತ್ ।
ಅಧ್ಯಾಪನಂಚಾಧ್ಯಾಯನಂ ದಾನಂ ಯಜನಯಾಜನೇ ॥
ಪ್ರತಿಗ್ರಹೋಬ್ರಾಹ್ಮಣಾನಾಂ ಷಟ್ಕರ್ಮಾಣಿ ಪ್ರಚಕ್ಷತೇ ।
ದಾನಮಧ್ಯಯನಂ ಯಜ್ಞಸ್ತ್ರೀಣಿ ರಾಜನ್ಯವೈಶ್ಯಯೋಃ ॥
ಶಸ್ತ್ರಾಜ್ಜೀವೋಮಹೀರಕ್ಷಾಪ್ಯಪಲಾಯನಮಾಹವೇ ॥

ಕ್ಷತ್ರಿಯಾಣಾಮಯಂ ಧರ್ಮಸ್ಸ್ವಧರ್ಮಶ್ಚಾನುಯಾಯಿನಾಂ ।
ಕೃಷಿವಾಣಿಜ್ಯಗೋರಕ್ಷಾ ಧರ್ಮೋಽಯಂ ಸಹಜೋ ವಿಶಾಂ ।

ಎಂದು ವೀರಮಾಹೇಶ್ವರಪ್ರಶಂಸೆಯಲ್ಲಿ ವರ್ಣಾಶ್ರಮಧರ್ಮಗಳು ವಿಶದವಾಗಿ ಉಕ್ತವಾಗಿವೆ.

ವರ್ಣಾಶ್ರಮಸದಾಚಾರಾಶ್ಶಿವೇನ ಕಥಿತಾಃ ಪುರಾ ।
ಏತಾನುಲ್ಲಂಘ್ಯ ವರ್ತಂತೇ ಶಿವಸ್ಯಾಜ್ಞಾಪಲಾಪಿನಃ ।
ರಾಜಾಜ್ಞಾಭಂಗಕೃನ್ಮ್ಯಾಣಾಂ ದಂಡೋಽಹಿನರಕಸ್ತಥಾ ॥

ಯಾರು ಶಿವನಿಂದುಕ್ತವಾದ ವರ್ಣಾಶ್ರಮಧರ್ಮಗಳನ್ನು ಉಲ್ಲಂಘಿಸುವರೋ ಅವರು ಶಿವಾಜ್ಞೆಯನ್ನು ಮೀರುತ್ತಾರೆ. ಲೋಕದಲ್ಲಿ ರಾಜಾಜ್ಞೆಯನ್ನು ಮೀರಿದವರಿಗೆ ಹೇಗೆ ಶಿಕ್ಷೆಯು ವಿಧಿಸಲ್ಪಡುತ್ತದೆಯೋ, ಅದರಂತೆ ಶಿವಾಜ್ಞೆಯನ್ನು ಮೀರಿ ನಡೆದವರಿಗೆ ನರಕರೂಪವಾದ ಶಿಕ್ಷೆಯು ವಿಧಿಸಲ್ಪಡುತ್ತದೆ ಎಂದು ಶ್ರೀಕರಭಾಷ್ಯ ಮುಂತಾದ ಉದ್ದಾಮಗ್ರಂಥಗಳಲ್ಲಿ ವರ್ಣಾಶ್ರಮಧರ್ಮಗಳು ವಿಶೇಷವಾಗಿ ಹೇಳಲ್ಪಟ್ಟಿರುತ್ತವೆ. ಹೀಗೆ ಪ್ರತಿಯೊಂದು ಸಿದ್ಧಾಂತಗಳಲ್ಲಿ ವರ್ಣಾಶ್ರಮಧರ್ಮಗಳ ಆವಶ್ಯಕತೆಯನ್ನು ಪ್ರತಿಪಾದಿಸಿದ್ದರೂ ಇವುಗಳನ್ನು ನಿರಾಕರಿಸುವವರಮಾತಿನಲ್ಲಿ ಎಷ್ಟು ಗೌರವಬುದ್ಧಿಯುಂಟಾಗುವುದೋ ವಾಚಕರೇ ಊಹಿಸಬಹುದಾಗಿದೆ. ವಾಸ್ತವವಾಗಿ ಆತ್ಮನಿಗೆ ಜಾತಿಕುಲಾದಿ ಭೇದಗಳೊಂದೂ ಇಲ್ಲದಿದ್ದರೂ ಶರೀರಸಹಿತವಾದ ಆತ್ಮನಿಗಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಪ್ರಪಂಚದಲ್ಲಿ ವಿಧಿನಿಷೇಧಗಳು ಆತ್ಮಸಹಕೃತವಾದ ಶರೀರಕ್ಕೆ ಹೇಳಲ್ಪಟ್ಟಿರುವುದರಿಂದ ಈ ಭೌತಿಕ ಶರೀರಾಭಿಮಾನವು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೂ ವರ್ಣಾಶ್ರಮೋಚಿತಗಳಾದ ವಿಧಿನಿಷೇಧಮಾರ್ಗಗಳು ಪ್ರತಿಯೊಬ್ಬನಿಗೂ ಇರಲೇಬೇಕಾಗಿವೆ. ಯಾವನು ಜೀವನ್ಮುಕ್ತಾವಸ್ಥೆಯನ್ನು ಪಡೆಯುವನೋ ಅಂಥವನಿಗೆ ಮಾತ್ರ "ಕೋಽವಿಧಿಃ ಕೋಽನಿಷೇಧಃ" ಎಂಬಂತೆ ಯಾವ ವರ್ಣಾಶ್ರಮಗಳ ನಿರ್ಬಂಧವೂ ಇರುವುದಿಲ್ಲ. ಇಂಥ ಸ್ಥಿತಿ ಹೊಂದಿದವನನ್ನು ವೀರಶೈವಸಿದ್ಧಾಂತವು ಅತಿವರ್ಣಾಶ್ರಮಿಯೆಂದು ಕರೆಯುತ್ತಿರುವದು. ಈ ಉತ್ತಮಸ್ಥಿತಿಯು ತನ್ನ ಪೂರ್ವಧರ್ಮಗಳನ್ನು ಅನುಷ್ಠಿಸಿದ ಹೊರತು ಯಾರಿಗೂ ಬರಲಾರದು. ಪ್ರತಿಯೊಬ್ಬನೂ ಹೀಗೆ ಉತ್ತಮಸ್ಥಿತಿಯನ್ನು ಹೊಂದಬೇಕೆಂದು ಶ್ರೀ ರೇಣುಕಭಗವತ್ಪಾದರು ಭಕ್ತಾದ್ಯೈಕ್ಯಾಂತ

ವಾದ ಆರುಸ್ಥಳಗಳ ಸ್ವರೂಪವನ್ನು ಬೋಧಿಸಿರುವರು. ಈ ಸೋಪಾನ ಗಳನ್ನು ಕ್ರಮವಾಗಿ ಹತ್ತಿ ಐದನೆಯ ಸೋಪಾನವೆನಿಸಿದ ಶರಣಸ್ಥಲಕ್ಕೆ ಬಂದೊಡನೆಯೇ ಆತನು ಪ್ರಾಪಂಚಿಕವ್ಯವಹಾರದಿಂದ ದೂರನಾಗಿ ಲಿಂಗವೇ ಸತಿ, ಲಿಂಗವೇ ಪತಿಯೆಂಬ ದೃಢತರವಾದ ಭಾವನೆಯಿಂದ ಕೂಡಿ ಶರಣ ನೆಂಬ ಪ್ರಶಸ್ತಿಗೆ ಅರ್ಹನಾಗುತ್ತಾನೆ.

ಆಸ್ತಿಕರಾದ ಮಾನವರು ಭಗವಂತನನ್ನು ಕಾಣಬೇಕೆಂಬ ಒಂದು ಮುಖ್ಯ ಧ್ಯೇಯವನ್ನು ಸಾಧಿಸುವುದಕ್ಕಾಗಿ ಅನೇಕ ಉಪಾಸನಾಮಾರ್ಗ ಗಳನ್ನವಲಂಬಿಸುವುದುಂಟು. ತಮ್ಮ ತಮ್ಮ ಪೂರ್ವಿಕರು ಮಾಡುತ್ತಿದ್ದ ವ್ಯಾಪಾರದಲ್ಲಿ ಅವರ ಮಕ್ಕಳು ಮರಿಮಕ್ಕಳು ಅದನ್ನು ನೋಡಿಯೂ ಕೇಳಿಯೂ ವಿಶೇಷ ಅನುಭವ ಪಡೆದಿದ್ದರಿಂದ ಆ ವ್ಯಾಪಾರವನ್ನು ಅವಲಂ ಬಿಸಿ ದ್ರವ್ಯವನ್ನು ಸಂಪಾದಿಸುವುದು ಸುಲಭವಾಗಿರುವಂತೆ, ತಮ್ಮ ಹಿರಿಯರ ಕೈಕೆಳಗೆ ಸ್ವಲ್ಪವೂ ಅಭ್ಯಾಸಮಾಡದ ಕಸಬುಗಳನ್ನವಲಂಬಿಸಿ ದ್ರವ್ಯವನ್ನಾ ರ್ಜಿಸುವುದು ಸುಲಭವೆನಿಸುವುದಿಲ್ಲ. ಅದರಂತೆ ತಮ್ಮ ತಮ್ಮ ಹಿರಿಯರು ಅನುಷ್ಠಿಸುತ್ತಿರುವ ಆಯಾಯ ಮತನಿಬಂಧನೆಗಳ ಧರ್ಮೋಪಾಸನೆಯನ್ನು ಮಾಡುತ್ತ ಪರಮಾತ್ಮನ ಪ್ರೀತಿಯನ್ನು ಸಂಪಾದಿಸುವುದು ಸುಲಭ ವಲ್ಲದೆ, ತಾವಾಗಲಿ ತಮ್ಮ ಹಿರಿಯರಾಗಲಿ ಯಾರೂ ಅನುಷ್ಠಿಸದ ಭಿನ್ನ ಮತಗಳ ಧರ್ಮೋಪಾಸನೆಯನ್ನು ಮಾಡಿ ಪರಮಾತ್ಮನನ್ನೊಲಿಸುವುದು ಸಾಧ್ಯವಿಲ್ಲ. ಇದರಿಂದ ಪೂರ್ವಕಾಲದಿಂದಲೂ ಯಾರು ಯಾರು ಯಾವ ಯಾವ ಧರ್ಮಗಳನ್ನು ಅವಲಂಬಿಸಿರುತ್ತಾರೆಯೋ ಅವರವರು ಆಯಾಯ ಮತಧರ್ಮಗಳನ್ನು ಬಿಟ್ಟು ಭಿನ್ನ ಧರ್ಮಗಳಿಗೆ ಪ್ರವೇಶಿಸಬಾರದೆಂಬುದು ಸ್ಪಷ್ಟವಾಗುವುದು. “ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವ ನುಷ್ಠಿತಾತ್” ಎಂದು ಭಗವದ್ಗೀತಾಕಾರರು ಸ್ಪಷ್ಟವಾಗಿ ಪ್ರತಿಪಾದಿಸಿರು ವರು. ಮಾನವನನ್ನು ಒಂದು ಧರ್ಮದಿಂದ ಇನ್ನೊಂದು ಧರ್ಮಕ್ಕೆ ಬದಲಾ ವಣೆಮಾಡುವ ಕರ್ತನು ಎಲ್ಲರಂತೆ ಕಿಂಚಿದಜ್ಞನಾಗಿರದೆ ಅಘಟಿತಘಟನ ಶಕ್ತಿ ಯನ್ನು ಪಡೆದಿರಬೇಕಾಗುತ್ತದೆ. ಹಾಗಿಲ್ಲದೆ ತಾನು ಎಲ್ಲರಂತೆ ಅಲ್ಪಶಕ್ತಿ ಯುಳ್ಳವನಾಗಿದ್ದು ಕೇವಲ ಜನಸಹಾಯದಿಂದಲೇ ಜನಗಳನ್ನು ಸ್ವಧರ್ಮ ದಿಂದ ತಪ್ಪಿಸಿ ಪರಧರ್ಮಗಳಿಗೆಳೆಯುವದಂತೂ ಎಂದೂ ಸಾಧ್ಯವೇ ಇಲ್ಲ. ಹಾಗೆ ಒಂದು ವೇಳೆ ಧರ್ಮಾಂತರಗೊಳಿಸಿದರೂ ಅದಕ್ಕಿಂತಲೂ ಪ್ರಬಲನಾವ

ಮತ್ತೊಬ್ಬನು ಬಂದು ಮತ್ತೆ ಹಿಂದಕ್ಕೆ ಎಳೆಯುವನು. ಆಗ್ಯೆ ಒಬ್ಬರಿ ಗೊಬ್ಬರಿಗೆ ವೈಷಮ್ಯಬುದ್ಧಿಯು ಹೆಚ್ಚಿ ಕಲಹಕ್ಕಾಸ್ಪದವಾಗಿ ಪರಧರ್ಮ ವಿಮೂಢನಾಗಿ ಉಭಯಭ್ರಷ್ಟನಾಗುವನು. ಇಂಥ ಉದಾಹರಣೆಗಳನ್ನು ಪ್ರಪಂಚದಲ್ಲಿ ನಾವು ಅನೇಕವಾಗಿ ನೋಡುತ್ತಿದ್ದೇವೆ. ಕ್ರೈಸ್ತರು ತಮ್ಮ ಸಂಘಶಕ್ತಿಯಿಂದ ಅನೇಕ ಹಿಂದುಗಳನ್ನು ಕ್ರೈಸ್ತಧರ್ಮಕ್ಕೆ ಸೇರಿಸಿಕೊಂಡಿರು ತ್ತಾರೆ. ಹಿಂದುಗಳು ಬೋಧಮಾಡಿ ತಿರುಗಿ ಅವರನ್ನು ತಮ್ಮ ಹಿಂದೂ ಧರ್ಮಕ್ಕೆ ಸೇರಿಸಿಕೊಂಡಿರುತ್ತಾರೆ. ಆರ್ಯಸಮಾಜದವರು ಅನೇಕ ಮಹಮ್ಮ ದೀಯರನ್ನು ತಮ್ಮ ಸಮಾಜಕ್ಕೆ ಸೇರಿಸಿಕೊಂಡಿರುತ್ತಾರೆ. ಮಹಮ್ಮದೀ ಯರು ಅಂಥವರನ್ನು ಬಲಾತ್ಕಾರದಿಂದ ತಿರುಗಿ ತಮ್ಮ ಮತಕ್ಕೆ ತೆಗೆದು ಕೊಂಡಿರುತ್ತಾರೆ. ಈ ಪರಸ್ಪರ ವಿನಿಮಯವಲ್ಲಿ ಹೊಡೆದಾಟಗಳು ನಡೆದು ಅನೇಕರು ಯಮಲೋಕಕ್ಕೆ ಅತಿಥಿಗಳಾಗಿದ್ದಾರೆ. ಹಿಂದಿನ ಮತಾಚಾರ್ಯ ರಾರೂ ಇಂಥ ಹೊಡೆದಾಟಗಳಿಗೆ ಅವಕಾಶವನ್ನು ಕೊಟ್ಟಿರಲಿಲ್ಲ. ಶಾಪಾನು ಗ್ರಹಸಾಮರ್ಥ್ಯವುಳ್ಳ ಪೂರ್ವಾಚಾರ್ಯರ ಮಹತ್ವಾತಿಶಯಗಳು ಸೂಜಿಯನ್ನು ಆಕರ್ಷಿಸುವ ಸೂಜಿಗಲ್ಲಿನಂತೆ ಜನಗಳನ್ನು ಆಕರ್ಷಿಸುತ್ತಿದ್ದುದರಿಂದ ಆಯಾಯ ಮತಗಳೆಲ್ಲವೂ ಆಚಂದ್ರಾರ್ಕಸ್ಥಾಯಿಯಾಗಿ ನಿಂತಿರುತ್ತವೆ. ಮಧ್ವಾಚಾರ್ಯರ ಕಾಲದಲ್ಲಿ ಅನೇಕರು ದ್ವೈತಮತವನ್ನವಲಂಬಿಸಿದರೂ, ರಾಮಾನುಜಾಚಾರ್ಯರ ಕಾಲದಲ್ಲಿ ಅನೇಕರು ವಿಶಿಷ್ಟಾದ್ವೈತಮತವನ್ನವ ಲಂಬಿಸಿದರೂ, ಶ್ರೀ ರೇಣುಕಾದಿ ಪಂಚಾಚಾರ್ಯರ ಕಾಲದಲ್ಲಿ ಅನೇಕರು ಶಕ್ತಿವಿಶಿಷ್ಟಾದ್ವೈತಮತವನ್ನವಲಂಬಿಸಿದರೂ, ಶಂಕರಾಚಾರ್ಯರ ಕಾಲದಲ್ಲಿ ಅನೇಕರು ಅದ್ವೈತ ಮತವನ್ನವಲಂಬಿಸಿದರೂ ಯಾರೂ ತಡೆಗಟ್ಟಲಿಲ್ಲ. ಇದರಂತೆ ಆಯಾಯ ಮತದ ಮೂಲಗುರುಗಳು ಅನಿತರಸಾಧಾರಣವಾದ ದೈವಿಕಶಕ್ತಿಯನ್ನು ಪಡೆದದ್ದರಿಂದ ಅವರು ಅನುಷ್ಠಿಸಿದ ಪವಿತ್ರಧರ್ಮಗಳು ಅಂದಿನಿಂದಲೂ ಅಚ್ಚಳಿಯದಂತೆ ಉಳಿದುಕೊಂಡು ಬಂದಿರುತ್ತವೆ. ಇದ ಕ್ಕೆಲ್ಲಾ ಆಯಾಯಮತಾಚಾರ್ಯರ ಅದ್ಭುತವಾದ ಆತ್ಮ ಶಕ್ತಿಯೇ ಕಾರಣ ವಾಗಿರುತ್ತದಲ್ಲದೆ ದೇಹಶಕ್ತಿಯಾಗಲಿ, ದ್ರವ್ಯಶಕ್ತಿಯಾಗಲಿ, ಇನ್ನಾವ ಲೌಕಿಕ ಶಕ್ತಿಯಾಗಲಿ ಒಂದೂ ಕಾರಣವಾಗಿರಲಿಲ್ಲ. ಅವರು ಇಂಥ ಅದ್ಭುತ ಮಹಿಮಾಶಾಲಿಗಳಾದುದರಿಂದಲೇ ಅವರವರ ಸಂಪ್ರದಾಯಾನುಸಾರವಾಗಿ ಕೆಲವು ಮತಾಚಾರ್ಯರು ಶಿವಾಂಶಸಂಭೂತರೆಂದೂ, ಕೆಲವು ಮತಾ ಚಾರ್ಯರು ನಾರಾಯಣಾಂಶಸಂಭೂತರೆಂದೂ ಜಗತ್ಪ್ರಸಿದ್ಧಿಯನ್ನು ಪಡೆದರು.

## ಲಿಂಗಮಹಿಮೆ

ದೇವರ ವಿಗ್ರಹಾರಾಧನೆಯು ಅನಂತರೂಪವಾಗಿರುವುದು. ಆದರಲ್ಲಿ ಶಿವಲಿಂಗಧಾರಕರು ಶಿವನನ್ನು ಹೊರತು ಬೇರೆ ದೇವತೆಗಳನ್ನು ಆರಾಧಿಸಲಾರರು. ಸ್ಥಾವರಲಿಂಗಾರಾಧಕರಿಗಿಂತಲೂ ಇಷ್ಟಲಿಂಗಾರಾಧಕರು ಉತ್ತಮರೆಂದು ವೀರಶೈವಸಿದ್ಧಾಂತದಲ್ಲಿ ಹೇಳಲ್ಪಟ್ಟಿರುತ್ತದೆ. ಶಿವನೆಂಬ ಒಂದೇ ದೇವರನ್ನು ಪೂಜಿಸುತ್ತಿದ್ದರೂ, ಆದರೊಳಗೆ ಭೂಮಿಯಲ್ಲಿ ಪ್ರತಿಷ್ಠಿತವಾದ ಶಿವಲಿಂಗವನ್ನು ಆರಾಧಿಸುವುದಕ್ಕಿಂತಲೂ ದೇಹದಲ್ಲಿ ಪ್ರತಿಷ್ಠಿತವಾದ ಶಿವಲಿಂಗವನ್ನಾರಾಧಿಸುವುದು ಮೇಲೆಂದು ಹೇಳಲು ಕಾರಣವೇನೆಂಬುದನ್ನು ಇಲ್ಲಿ ವಿಚಾರಮಾಡಬೇಕಾದುದು ಅವಶ್ಯಕವಾಗಿದೆ. ದೇವಾಲಯದಲ್ಲಿ ಪ್ರತಿಷ್ಠಿತವಾದ ಶಿವಲಿಂಗವು ಪಂಚಸೂತ್ರಘಟಿತವಾದುದು; ದೇಹದಲ್ಲಿ ಧರಿಸಲ್ಪಟ್ಟ ಶಿವಲಿಂಗವೂ ಪಂಚಸೂತ್ರಘಟಿತವಾದುದು. ಶಿಲಾತ್ವದೋಷ ಪರಿಹಾರಕ್ಕಾಗಿಯೂ ದೇವತ್ವವು ಸ್ಥಿರಗೊಳ್ಳುವುದಕ್ಕಾಗಿಯೂ ಆ ಶಿವಲಿಂಗಕ್ಕಾಗುವ ವಿಶಿಷ್ಟಮಂತ್ರಸಂಸ್ಕಾರಗಳು ಈ ಲಿಂಗಕ್ಕೂ ಆಗುತ್ತವೆ. ಇಷ್ಟಲಿಂಗಕ್ಕೆ ವಿಧಿಸಿರುವ ಪೂಜಾನಿಯಮಗಳೆಲ್ಲವೂ ಸ್ಥಾವರಲಿಂಗಕ್ಕೂ ವಿಧಿಸಲ್ಪಟ್ಟಿರುತ್ತವೆ. ಹೀಗಾದಮೇಲೆ ಸ್ಥಾವರಲಿಂಗಾರಾಧನೆಗಿಂತಲೂ ಇಷ್ಟಲಿಂಗಾರಾಧನೆಯು ಹೇಗೆ ತಾನೆ ಉತ್ತಮವೆಂಬ ಶಂಕೆಯು ಉತ್ಪನ್ನವಾಗುವುದು. ಸ್ಥಾವರಲಿಂಗಾರಾಧಕನು ಪ್ರತಿದಿವಸವೂ ಸ್ಥಾವರಲಿಂಗವಿದ್ದೆಡೆಗೆ ಹೋಗಿ ಪೂಜೆಯನ್ನು ಮಾಡಲೇಬೇಕೆಂಬ ನಿಯಮವಾಗಲಿ, ಪೂಜೆಯನ್ನು ಮಾಡಿ ತೀರ್ಥಪ್ರಸಾದಗಳನ್ನು ಸ್ವೀಕರಿಸಿಯೇ ಭೋಜನಮಾಡಬೇಕೆಂಬ ನಿಯಮವಾಗಲಿ, ಹಾಗೆ ಮಾಡದೆ ಭೋಜನಾದಿ ವ್ಯವಹಾರಗಳನ್ನು ಮಾಡುವುದಾದರೆ ದೋಷಬರುವುದೆಂಬ ನಿಷೇಧ ಶಾಸ್ತ್ರವಾಗಲಿ ಇರುವುದಿಲ್ಲ. ಅವರವರ ಇಚ್ಛಾನುಸಾರವಾಗಿ ಹಬ್ಬ ಮೊದಲಾದ ದಿನಗಳಲ್ಲಿಯೂ ಹರಕೆ ಮುಂತಾದ ಸಂಕಲ್ಪಕಾಲಗಳಲ್ಲಿಯೂ ದೇವರಿದ್ದೆಡೆಗೆ ಹೋಗಿ ಪರಿಶುದ್ಧಭಾವದಿಂದ ಸೇವೆಮಾಡುವುದು ಲೋಕಪ್ರಸಿದ್ಧವಾಗಿದ್ದು ಸ್ಥಾವರಲಿಂಗವನ್ನು ಯಾರು ಪೂಜಿಸುತ್ತಾರೆಯೋ ಅವರೇ ಪೂಜಿಸಬೇಕೆಂಬ ಪ್ರಬಲನಿಯಮವಿಲ್ಲ. ಆ ಒಂದು ಲಿಂಗವನ್ನು ಅನೇಕರು ಪೂಜಿಸಬಹುದು. ಅಥವಾ ಒಬ್ಬರೇ ಆದರೂ ಪೂಜಿಸಬಹುದು. ಆದರೆ ದೇಹದಲ್ಲಿ ಧರಿಸಲ್ಪಟ್ಟ ಶಿವಲಿಂಗವನ್ನು ಮಾತ್ರ

ಯಾವನು ಶರೀರದಲ್ಲಿ ಧರಿಸಿರುವನೋ ಅವನೇ ತನ್ನ ಜೀವಿತದವರೆಗೂ ಪೂಜಿಸಬೇಕೆಂಬ ನಿಯಮವಿರುವುದಲ್ಲದೆ ಪ್ರತಿದಿವಸವೂ ಸ್ನಾನಾದಿಗಳಿಂದ ದೇಹಶುದ್ಧನಾಗಿಯೂ ಕ್ರಮವರಿತು ತತ್ವಶುದ್ಧಿ ಭೂತಶುದ್ಧ್ಯಾದಿಗಳಿಂದ ಚಿತ್ತಶುದ್ಧನಾಗಿಯೂ ಗುರುವು ಉಪದೇಶಿಸಿದ ಶಾಸ್ತ್ರಕ್ರಮದಿಂದರ್ಚಿಸಿ ಶಿವಲಿಂಗದ ತೀರ್ಥಪ್ರಸಾದಗಳನ್ನು ಸ್ವೀಕರಿಸಿದ ಹೊರತು ಭೋಜನಾದಿ ವ್ಯವಹಾರಗಳನ್ನು ನಡೆಸಲಾಗದು. "ಶಿವಪೂಜಾತಿಕ್ರಮಣಂ ಮಹಾದೋಷಸ್ಯ ಕಾರಣಂ" ಶಿವಪೂಜೆಯನ್ನು ಪ್ರತಿದಿವಸವೂ ಮಾಡದಿದ್ದಲ್ಲಿ ಮಹಾದೋಷವುಂಟಾಗುವುದು.

ಅಸಮರ್ಚ್ಯ ಪದಂ ಶಂಭೋಃ ಭುಂಕ್ತೇ ಖಾದತಿ ಪಾತಿ ಯಃ ।
ಶ್ವಮಾಂಸಮಷ್ಠಿಮೂತ್ರಂಚ ಭುಂಕ್ತೇ ಖಾದತಿ ಪಾತಿ ಸ ॥

ಎಂಬ ಪ್ರಮಾಣಬಲದಿಂದ ಯಾವ ವೀರಶೈವನು ಶಿವಲಿಂಗವನ್ನು ಪೂಜಿಸದೆ ಊಟಮಾಡುವುದಾಗಲಿ, ಜಲಪಾನಮಾಡುವುದಾಗಲಿ, ಫಲಾಹಾರ ಮಾಡುವುದಾಗಲಿ ಯಾವುದನ್ನೂ ಮಾಡಕೂಡದು. ಹಾಗೆ ಮಾಡಿದ್ದಾದರೆ ನರಕಗಾಮಿಯಾಗುವನೆಂದು ಶಾಸ್ತ್ರವು ವಿಧಿಸಿರುತ್ತದೆ. ಇಷ್ಟಲಿಂಗಧಾರಿಯಾದವನು ತಾನು ಯಾವಾಗಲೂ ಶಿವಸನ್ನಿಧಿಯಲ್ಲಿ ವಾಸ ಮಾಡಿದ್ದೇನೆಂಬ ದೃಢಭಾವನೆಯುಳ್ಳವನೂ, ಶಿವಸನ್ನಿಧಿಯಲ್ಲಿ ಪಾಪಕಾರ್ಯವನ್ನು ಮಾಡಲಾಗದೆಂಬ ಭಯದಿಂದ ಕೂಡಿದವನೂ ಆದ್ದರಿಂದ ತ್ರಿಕಾಲದಲ್ಲೂ ಶಿವಸ್ಮರಣ, ಶಿವನಾಮಕೀರ್ತನ, ಶಿವಕಥಾಶ್ರವಣ, ಶಿವಸೇವನ, ಶಿವಾರ್ಚನ, ಶಿವವಂದನ, ಶಿವಕೈಂಕರ್ಯ, ಶಿವಸಖ್ಯ, ಆತ್ಮಾರ್ಪಣ ಎಂಬ ನವವಿಧ ಭಕ್ತಿಗಳಿಂದ ಕೂಡಿರಬೇಕೆಂಬುದೇ ಲಿಂಗಧಾರಣೆಯ ಮುಖ್ಯೋದ್ದೇಶವಾಗಿದೆ. ಸ್ಥಾವರಲಿಂಗಾರಾಧಕರು ಮುಕ್ತಿಸಾಧಕಗಳಾದ ಈ ನವವಿಧ ಭಕ್ತಿಗಳನ್ನು ಸಾಧಿಸಬೇಕಾಗಿದ್ದರೂ, ಅವರಿಗೆ ಯಾವಾಗಲೂ ಶಿವಲಿಂಗದ ಸಾನ್ನಿಧ್ಯದಲ್ಲಿರುವುದು ಸಾಧ್ಯವಿಲ್ಲ. ಏಕೆಂದರೆ ದೇವಾಲಯದಲ್ಲಿರುವ ಶಿವಲಿಂಗಕ್ಕೂ ತನಗೂ ಎಡೆಬಿಡದೆ ಸಾನ್ನಿಧ್ಯವಿಲ್ಲದುದರಿಂದ ಶಿವಲಿಂಗದ ದರ್ಶನಮಾಡಬೇಕೆಂಬ ಇಚ್ಛೆ ಹುಟ್ಟಿದಾಗ ಮಾತ್ರ ಸ್ನಾನ ಮಾಡಿ ದೇವಾಲಯಕ್ಕೆ ಹೋಗಬೇಕಾಗುತ್ತದೆ. ಆ ದೇವಾಲಯದಲ್ಲಿ ದೇವರು ಎಲ್ಲಿಯವರೆಗೂ ಪ್ರತ್ಯಕ್ಷವಾಗಿ ಕಾಣಿಸಿಕೊಂಡಿರುತ್ತಾನೆಯೋ ಅಲ್ಲಿಯವರೆಗೆ

ಘಾತ್ರ ತಾನು ಮಾಡಿದ ಪಾಪಕರ್ಮಗಳನ್ನೆಲ್ಲಾ ಮರೆತು ಪರಿಶುದ್ಧಭಾವನೆಯಿಂದೊಡಗೂಡಿರುತ್ತಾನೆ. ಪುನಃ ದೇವಾಲಯದಿಂದ ಹೊರಗೆ ಬಂದು ಶಿವಸಾನ್ನಿಧ್ಯವು ತಪ್ಪಿದಾಗ ಕಾಯಕ, ವಾಚಕ, ಮಾನಸಿಕಗಳಾದ ಪಾಪಕರ್ಮಗಳನ್ನು ಮಾಡುವುದಕ್ಕೆ ಅವಕಾಶವಾದರೂ ಆಗಬಹುದು. ಲೋಕದಲ್ಲಿ ಭೂಮಿಯನ್ನಾಳುವ ಮಹಾರಾಜನಸಮಕ್ಷಮದಲ್ಲಿ ನಿಂತಿರುವ ಪ್ರಜೆಗಳಿಗೂ ದೂರದಲ್ಲಿ ಸ್ವೇಚ್ಛೆಯಾಗಿ ತಿರುಗಾಡುವ ಪ್ರಜೆಗಳಿಗೂ ಬಹಳ ಅಂತರವುಂಟು. ದೂರದಲ್ಲಿರುವ ಪ್ರಜೆಗಳ ಭಯಭಕ್ತಿಗೂ ರಾಜಸನ್ನಿಧಿಯಲ್ಲಿರುವ ಪ್ರಜೆಗಳ ಭಯಭಕ್ತಿಗಳಿಗೂ ಬಹಳ ವ್ಯತ್ಯಾಸವಿರುವಂತೆ ಸದಾ ಶಿವಲಿಂಗಸಾನ್ನಿಧ್ಯವಿರುವ ಶಿವಭಕ್ತರಿಗೂ ಯಾವುದೋ ಒಂದು ದಿವಸ ಶಿವಲಿಂಗವಿದ್ದೆಡೆಗೆ ಹೋಗಿ ಶಿವಲಿಂಗ ದರ್ಶನಮಾಡುವ ಶಿವಭಕ್ತರಿಗೂ ಬಹಳವಾದ ತಾರತಮ್ಯವಿರುತ್ತದೆ ಎಂಬುದು ಅನುಭವಸಿದ್ಧವಾಗಿ ಕಂಡುಬರುತ್ತದೆ. ಇದರಿಂದ ಗುರುವಿನಿಂದ ಸಂಸ್ಕರಿಸಲ್ಪಟ್ಟ ದೇಹವೆಂಬ ದೇವಾಲಯದಲ್ಲಿ ಶಿವಲಿಂಗ ಸಾನ್ನಿಧ್ಯವಿದುವುದರಿಂದ ಯಾವಾಗಲೂ ಭಯಭಕ್ತಿಯುಳ್ಳವನಾಗಿದ್ದು ಕಾಯವಾಕ್‌ಮನಸ್ಸುಗಳೊಳಗೆ ಯಾವುದೊಂದರಲ್ಲಿಯೂ ನರಕಹೇತುವಾದ ಪಾಪಕಾರ್ಯಗಳನ್ನು ಮಾಡಲವಕಾಶವಿಲ್ಲವು. ಹಾಗೆ ಪಾಪಕಾರ್ಯಗಳನ್ನು ಮಾಡಿದ್ದಾದರೆ ಸ್ಥಾವರಲಿಂಗಾರಾಧಕರು ಮಾಡಿದ ಪಾಪಕಾರ್ಯಗಳು ಶಿವಸಾನ್ನಿಧ್ಯವಿಲ್ಲದಾಗ ಮಾಡಿದ್ದುದರಿಂದ ಕ್ಷಮ್ಯವಾದರೂ ಆಗಬಹುದು. ಇಷ್ಟಲಿಂಗಾರಾಧಕನು ಮಾಡುವ ಪಾಪಕರ್ಮಗಳು ಶಿವಸನ್ನಿಧಿಯಲ್ಲಿಯೇ ನಿರ್ಭೀತವಾಗಿ ಮಾಡಲ್ಪಟ್ಟುದರಿಂದ ಅಕ್ಷಮ್ಯವಾದವುಗಳೆಂದೇ ಹೇಳಬೇಕಾಗುವದು. ಶಿವಸನ್ನಿಧಿಯಿಲ್ಲದಾಗ ಮಾಡಿದ ಪಾಪಕರ್ಮಗಳು ಅಜ್ಞಾನದೋಷದಿಂದ ಮಾಡಲ್ಪಟ್ಟುವು. ಶಿವಸನ್ನಿಧಿಯಲ್ಲಿ ಮಾಡಲ್ಪಟ್ಟ ಪಾಪಕರ್ಮಗಳು ಜ್ಞಾನಪೂರ್ವಕವಾಗಿ ಮಾಡಲ್ಪಟ್ಟುವಾದ ಪ್ರಯುಕ್ತ ಲಿಂಗಧಾರಿಯು ಜಾಗ್ರತಸ್ವಪ್ನಸುಷುಪ್ತ್ಯವಸ್ಥೆಗಳಲ್ಲೂ ಸಹ ಶಿವಸಂಬಂಧವಾದ ಪುಣ್ಯಕಾರ್ಯಗಳನ್ನು ಮಾಡಬೇಕಲ್ಲದೆ ಶಿವವಿರೋಧಕರವಾದ ಪಾಪಕರ್ಮಗಳನ್ನು ಮಾಡಲಾಗದು. ಹಾಗೆ ಪಾಪಕಾರ್ಯವನ್ನಾಚರಿಸಿದ ಲಿಂಗಾಂಗಿಯ ಅಪರಾಧವು ಹೆಚ್ಚಿನದೆಂದೇ ಸ್ಪಷ್ಟವಾಗುತ್ತದೆ.

ವೀರಶೈವ ಮತಸ್ಥಾಪಕರಾದ ಶ್ರೀಜಗದ್ಗುರು ಪಂಚಾಚಾರ್ಯರು ಶಿವಲಿಂಗವನ್ನು ಒಂದೆಡೆಯಲ್ಲಿ ಇಟ್ಟು ಪೂಜಿಸುವುದಕ್ಕಿಂತಲೂ ಅನವರತವೂ

ಸಂಸ್ಕರಿಸಿದ ದೇಹದಲ್ಲಿ ಧರಿಸಿರುವುದು ಉತ್ತಮಮಾರ್ಗವೆಂದು ಲಿಂಗಧಾರಣದ ಮಹತ್ವವನ್ನು ವೇದಾಗಮ ಪ್ರಮಾಣಗಳಿಂದ ಸ್ಥಿರಗೊಳಿಸಿರುತ್ತಾರೆ. ಶ್ರೀಪಂಚಾಚಾರ್ಯಸಿದ್ಧಾಂತಾವಲಂಬಿಗಳಾದ ಅನೇಕ ವೀರಶೈವ ಪಂಡಿತರು ಸಹ ಈ ತತ್ವಾರ್ಥವನ್ನು ಚನ್ನಾಗಿ ಶೋಧಿಸಿ.

ಲಿಂಗಧಾರೀ ಸದಾಶುದ್ಧಃ ನಿಜಲಿಂಗಂ ಮನೋಹರಂ ।
ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥

ಎಂದು ಲೇಶಮಾತ್ರವೂ ಪಾಪಕರ್ಮಗಳ ಲೇಪವಿಲ್ಲದೆ ಕಂಠಾದ್ಯುತ್ತಮಾಂಗದಲ್ಲಿ ಧರಿಸಲ್ಪಟ್ಟ ಶಿವಲಿಂಗವನ್ನು ತನ್ನ ಹಸ್ತರೂಪವಾದ ಸಿಂಹಾಸನದಲ್ಲಿಟ್ಟು ಪೂಜಿಸುತ್ತ ಸದಾ ಪರಿಶುದ್ಧನಾಗಲೇಬೇಕೆಂದು ಉಪದೇಶಮಾಡಿರುತ್ತಾರೆ.

ಸತ್ಯಂ ಕ್ಷಮಾ ದಯಾ ಶೌಚಂ ನಿಯಮೋ ಮಾರ್ದವಂ ತಥಾ ।
ತಪಸ್ತ್ಯಾಗೋ ಬ್ರಹ್ಮಚರ್ಯಂ ಸಂತುಷ್ಟಿಶ್ಚಾರ್ಜವಂ ತಥಾ ॥
ಧರ್ಮಾ ಏಕಾದಶ ಪ್ರೋಕ್ತಾಃ ಭಕ್ತಾನಾಂ ಶುಭವಾಂಛನೇ ॥

ಸತ್ಯ, ಕ್ಷಮೆ, ದಯೆ, ಶೌಚ, ನಿಯಮ, ಮಾರ್ದವ, ತಪಸ್ಸು, ತ್ಯಾಗ, ಬ್ರಹ್ಮಚರ್ಯ, ಸಂತುಷ್ಟಿ, ಆರ್ಜವ ಎಂಬ ಹನ್ನೊಂದು ಧರ್ಮಗಳು ಲಿಂಗಾಂಗಿಯಾದ ಮಾನವನಿಂದ ಅವಶ್ಯ ಸಂಗ್ರಹಿಸಲ್ಪಡತಕ್ಕವುಗಳಾಗಿವೆ. ಈ ಧರ್ಮಗಳನ್ನು ಯಾವನು ಆರ್ಜಿಸುವನೋ ಅವನೇ ನಿಜವಾದ ವೀರಶೈವನು. ಇದಕ್ಕೆ ವಿರುದ್ಧವಾದ ಅಸತ್ಯ, ಅಕ್ಷಮೆ, ಮುಂತಾದ ದುರ್ಗುಣಗಳು ಯಾರಲ್ಲಿರುವವೋ ಅವರು ಪವಿತ್ರವಾದೀ ಶೈವಮತಕ್ಕೆ ವಿರೋಧಿಗಳಾಗುತ್ತಾರೆ. ಸತ್ಯ, ಕ್ಷಮೆ, ಮುಂತಾದ ಸದ್ಗುಣಗಳು ಮಾನವಜನ್ಮಧಾರಿಗಳೆಲ್ಲರಿಗೂ ಅವಶ್ಯಕಗಳಾಗಿದ್ದರೂ ಶಿವಲಿಂಗವನ್ನು ತಮ್ಮ ಶರೀರದಲ್ಲಿ ಎಡೆಬಿಡದೆ ಧರಿಸಿದ ಲಿಂಗಾಂಗಿಗಳಿಗಂತೂ ಅತ್ಯವಶ್ಯಕಗಳಾದ ಧರ್ಮಗಳಾಗಿವೆ. ಸುಳ್ಳನ್ನಾಡದಿರುವುದೇ ಸತ್ಯವು, ನಿಂದೆಯನ್ನು ಸಹಿಸಿಕೊಳ್ಳುವುದೇ ಕ್ಷಮೆಯು, ಪರರ ದುಃಖವನ್ನು ಹೋಗಲಾಡಿಸಲಪೇಕ್ಷೆಯೇ ದಯೆಯು, ಅಶುಚಿ ಪದಾರ್ಥಗಳ ಸಂಬಂಧವನ್ನು ಬಿಡುವುದೇ ಶೌಚವು, ತಾನು ಪ್ರಾರಂಭಿಸಿದ ಲಿಂಗಪೂಜಾದಿ ಶುಭಕಾರ್ಯವನ್ನು ಬಿಡದಿರುವುದೇ ನಿಯಮವು, ಮನೋವಾಕ್ಕಾಯಗಳಲ್ಲಿ ಕಾಠಿಣ್ಯಸ್ವಭಾವವನ್ನು ಬಿಡುವುದೇ ಮಾರ್ದವವು, ಶಿವಲಿಂಗ ಪೂಜಾದಿಗಳಿಗಾಗಿ ಹಸಿವು ತೃಷೆಗಳ ಆಶೆಯನ್ನು ಬಿಟ್ಟು ದೈವ

ಗುರುಗಳ ಸೇವೆಮಾಡುವುದೇ ತಪಸ್ಸು, ಉತ್ತಮ ಪಾತ್ರದಲ್ಲಿ ದಾನಮಾಡುವುದೇ ತ್ಯಾಗವು, ಪರಸ್ತ್ರೀಸ್ಮರಣಾದಿಗಳಿಲ್ಲದಿರುವುದೇ ಬ್ರಹ್ಮಚರ್ಯವು, ಶಿವನಿಚ್ಛೆಯಿಂದ ಬಂದದ್ದರಲ್ಲಿಯೇ ಸಂತೋಷಗೊಳ್ಳುವುದೇ ಸಂತುಷ್ಟಿಯು, ವೃಥಾ ಕಾಲಕ್ಷೇಪಮಾಡದೆ ವಕ್ರಮಾರ್ಗದಲ್ಲಿ ಪ್ರವೇಶಿಸದಿರುವುದೇ ಆರ್ಜವವು, ಈ ಧರ್ಮಗಳು ದೈವಸಂಬಂಧವಾದ ಧರ್ಮಗಳೆನಿಸುವವು. ಇವಕ್ಕೆ ವಿರುದ್ಧಗಳಾದ ಅಸತ್ಯಾದಿ ಧರ್ಮಗಳು, ಆಸುರೀಧರ್ಮಗಳೆನಿಸುವವು. ಆಸುರೀಧರ್ಮಗಳು ಯಾವ ಆತ್ಮನಲ್ಲಿ ಸಂಬಂಧಿಸಿಕೊಂಡಿರುವವೋ ಆ ಆತ್ಮವು ಕಲುಷಿತವಾಗುವುದಲ್ಲದೆ ಮುಂದೆ ನಾನಾವಿಧಗಳಾದ ಹೀನಜನ್ಮಗಳಲ್ಲಿ ಪ್ರವೇಶಿಸುವುದು. ಆತ್ಮವಾದರೋ ಅಣುರೂಪವಾಗಿ ಬೆಂಡಿನಂತೆ ಭಾರವಲ್ಲದ ವಸ್ತುವಾದುದರಿಂದಲೂ, ಪರಮಾತ್ಮನ ಅಂಶಭೂತವಾದುದರಿಂದಲೂ ಪರಮಾತ್ಮಾಭಿಮುಖವಾಗಿ ಹೋಗುವ ಸ್ವಭಾವವುಳ್ಳದ್ದಾಗಿದ್ದರೂ ಅಧರ್ಮವೃತ್ತಿಯ ಸಂಬಂಧದಿಂದ ಊರ್ಧ್ವಗತಿಗೆ ಬದಲಾಗಿ ಅಧೋಗಮನವನ್ನು ಹೊಂದುತ್ತದೆ. ಪ್ರಭುತ್ವವನ್ನು ಮಾಡತಕ್ಕವನಿಗೆ ತನ್ನ ಪ್ರಭುತ್ವದ ಸ್ಥಿರತೆಗಾಗಿ ಅಮಾತ್ಯದುರ್ಗಾದಿ ಸಪ್ತಾಂಗಗಳು ಹೇಗೆ ಅವ್ಯಕ್ತಗಳಾಗಿವೆಯೋ ಹಾಗೆ ಈ ಶಿವಲಿಂಗಾಧಾರಕನಾದ ಶಿವಭಕ್ತನಿಗೆ ಸತ್ಯ ಕ್ಷಮಾದಿ ಏಕಾದಶ ಗುಣಗಳು ಅವಶ್ಯಕಗಳಾಗಿರುತ್ತವೆ. ಸಪ್ತಾಂಗಗಳಿಲ್ಲದ ಪ್ರಭುವು ಶತ್ರುರಾಜರಿಂದ ಆಕ್ರಮಿಸಲ್ಪಡುವಂತೆ ಈ ಸತ್ಯ ಕ್ಷಮಾದಿ ಸದ್ಗುಣಗಳಿಲ್ಲದ ಲಿಂಗಧಾರಕನಾದ ಭಕ್ತನು ಕಾಮಾದಿ ಶತ್ರುಗಳಿಂದ ಅಪಹರಿಸಲ್ಪಡುವನು. ಸಪ್ತಾಂಗಗಳನ್ನಿಟ್ಟುಕೊಂಡು ರಾಜ್ಯಭಾರ ಮಾಡುವ ರಾಜನು ನಿರ್ವಿಘ್ನವಾಗಿ ತನ್ನ ಪ್ರಭುತ್ವವನ್ನು ನಿರ್ವಹಿಸಿ ಜಯಲಕ್ಷ್ಮಿಯನ್ನು ಪಡೆಯುವಂತೆ ಸತ್ಯಕ್ಷಮಾದಿಗಳೆಂಬ ಏಕಾದಶ ಧರ್ಮಗಳನ್ನು ಬಿಡದೆ ಶಿವಲಿಂಗವನ್ನು ಯಾವನು ಆರಾಧಿಸುವನೋ ಅವನೇ ಮೋಕ್ಷಲಕ್ಷ್ಮಿಯನ್ನು ಪಡೆಯುವುದು ಮಾನವನ ಪರಮಪುರುಷಾರ್ಥವಾಗಿರುವುದರಿಂದ ಈಶ್ವರನಾಜ್ಞೆಯಿಂದ ಭೂಮಿಗವತರಿಸಿದ ಪ್ರತಿಯೊಬ್ಬ ಮತಾಚಾರ್ಯರೂ ಕೂಡ ಪ್ರಜೆಗಳನ್ನು ಉತ್ತಮಮಾರ್ಗದಲ್ಲಿ ತೆಗೆದುಕೊಂಡು ಹೋಗುವ ರಾಜನಂತೆ ನಿಷಿದ್ಧಮಾರ್ಗದಿಂದಾಗುವ ದುಃಖವನ್ನೂ ವಿಹಿತಮಾರ್ಗದಿಂದಾಗುವ ಸುಖವನ್ನೂ ಬೋಧಿಸಿ ಹಿತಾಹಿತ ಮಾರ್ಗಗಳನ್ನು ಗ್ರಂಥಮೂಲಕ ತಿಳಿಹಿಸಿರುತ್ತಾರೆ. ಅಸತ್ಯ, ಅಕ್ಷಮೆ, ನಿರ್ದಯೆ ಮುಂತಾದವುಗಳೇ ಅಹಿತಮಾರ್ಗಗಳು. ಸತ್ಯ,

ಕ್ಷಮೆ, ದಯೆ ಮುಂತಾದವುಗಳೇ ಹಿತಮಾರ್ಗಗಳು. ಮಾನವನು ಹಿತ ಮಾರ್ಗವನ್ನು ಬಿಟ್ಟು ಕ್ರೂರವಾದ ಅಹಿತಮಾರ್ಗದಲ್ಲಿ ಪ್ರವೇಶ ಮಾಡಿದ್ದಾದರೆ ದಾರಿಯಲ್ಲಿ ಕ್ರೂರವಾದ ಕಾಮಕ್ರೋಧಾದಿಗಳೆಂಬ ಮಹಾ ಚೋರರ ಕೈಗೆ ಶಿಕ್ಕು ಸತ್ವಹೀನನಾಗಿ ಸಂಕಟಪಡುತ್ತ ಅವಸಾನದಲ್ಲಿ ದುರ್ಗತಿಯನ್ನು ಹೊಂದಬೇಕಾಗುವದು. ಆದ್ದರಿಂದ ಬಾಲ್ಯಾದಾರಭ್ಯ ಪರಮಾತ್ಮ ಪ್ರೀತಿ ಸಾಧಕವಾದ ಸತ್ಯ, ಕ್ಷಮೆ, ದಯೆ ಮುಂತಾದ ಗುಣಗಳು ವ್ಯವಹಾರದಲ್ಲಿ ಬರುವಂತೆ ಅಭ್ಯಾಸಮಾಡುತ್ತಾ ಬಂದರೆ ಅವೇ ಗುಣಗಳೇ ಮುಂದಕ್ಕೂ ತಲೆದೋರುವುವಲ್ಲದೆ ವಿರುದ್ಧ ಗುಣಗಳು ಕಾಣಿಸಿಕೊಳ್ಳುವುದಿಲ್ಲ. ಈ ಪರಿಶುದ್ಧ ಧರ್ಮಗಳಲ್ಲಿ ಯಾವನು ಯಾವಾಗಲೂ ವ್ಯವಹರಿಸುತ್ತಾನೆಯೋ ಅವನು ಲೋಕದಲ್ಲಿ ಮಾನ್ಯನಾಗುವುದಲ್ಲದೆ ಆತನ ಜನ್ಮವೂ ಕೃತಾರ್ಥವಾಗುವುದು. ಇಂತಹ ಆತ್ಮೋದ್ಧಾರ ಸಾಧಕಗಳಾದ ಧರ್ಮಗಳಲ್ಲಿ ಒಂದನ್ನೂ ಆರ್ಜಿಸದೆ ಯಾವಾಗಲೂ ಅಸತ್ಯ, ಅಕ್ಷಮೆ, ನಿರ್ದಯೆ ಮುಂತಾದ ದುರ್ಗುಣಗಳಲ್ಲಿಯೇ ವ್ಯವಹರಿಸುತ್ತಿದ್ದರೆ ಇಹದಲ್ಲಿಯೂ, ನಿಂದ್ಯನಾಗುವನಲ್ಲದೆ ಪರಕ್ಕೂ ದೂರನಾಗುವನು. ಈ ಸದ್ಗುಣಗಳನ್ನು ಅಭ್ಯಾಸಮಾಡಿ ವ್ಯವಹರಿಸುತ್ತ ಬಂದರೆ ಇದಕ್ಕಿಂತಲೂ ಬೇರೆ ನೀತಿಗಳು ಜಗತ್ತಿನಲ್ಲಿಲ್ಲ. ಎಲ್ಲಾ ನೀತಿಗಳು ಈ ಧರ್ಮಗಳಲ್ಲಿಯೇ ಅಡಕವಾಗಿರುತ್ತವೆ. ಇಂತಹ ಪವಿತ್ರವಾದ ಸತ್ಯ, ಕ್ಷಮೆ, ಮುಂತಾದ ಧರ್ಮಗಳು ಯಾರಲ್ಲಿ ಪೂರ್ಣವಾಗಿ ನೆಲೆಗೊಂಡಿರುವವೋ ಅವರೇ ಮಹಾತ್ಮರೆಂದೂ ಭಗವತ್ಸ್ವರೂಪರೆಂದೂ ಹೇಳಲ್ಪಡುವರು. ಮೂಲಾಧಾರಗಳಾದ ಈ ಧರ್ಮಗಳನ್ನು ಸಂಗ್ರಹಿಸದೆ ಎಷ್ಟು ಭಗವಂತನ ಸೇವೆ ಮಾಡಿದರೂ, ಎಷ್ಟು ವೈಭವವನ್ನು ಪಡೆದಿದ್ದರೂ ಅವೆಲ್ಲಾ ಹದಿಯಿಲ್ಲದೆ ಮನೆಯನ್ನು ಕಟ್ಟಿದಂತೆ ವ್ಯರ್ಥವಾಗುವುವಲ್ಲದೆ ಫಲಕಾರಿಯಾಗುವುದಿಲ್ಲವು. ಇವುಗಳಲ್ಲಿ ಒಂದೆರಡು ಧರ್ಮಗಳನ್ನಾದರೂ ಪಡೆದು ಇವುಗಳ ಆಧಾರದಲ್ಲಿ ಅಲ್ಪ ಸ್ವಲ್ಪ ದಾನಧರ್ಮಗಳನ್ನು ಮಾಡಲಿ, ಅಲ್ಪ ಸ್ವಲ್ಪ ದೈವಗುರುಗಳ ಉಪಾಸನೆಗಳನ್ನು ಮಾಡಲಿ, ಅವೆಲ್ಲವೂ ತಕ್ಕಷ್ಟು ಫಲವನ್ನು ಕೊಟ್ಟೇ ಕೊಡುವವು. ಆದುದರಿಂದ ಆಸ್ತಿಕ ಪಂಥಾನುಯಾಯಿಗಳಾದ ಮಾನವರು ತಮ್ಮ ತಮ್ಮ ನಿತ್ಯಕರ್ಮಗಳ ಸಂಗಡ ಮೇಲೆ ಹೇಳಿದ ಸತ್ಯ, ಕ್ಷಮೆ, ದಯೆ, ತ್ಯಾಗ, ಬ್ರಹ್ಮಚರ್ಯಾದಿ ಧರ್ಮಗಳನ್ನು ಆರ್ಜಿಸಿ ದೇವರ ಕೃಪೆಗೆ ಪಾತ್ರರಾಗಿ ಧನ್ಯಜೀವಿಗಳಾಗಬೇಕು.

ವೇದಮಾರ್ಗಾವಲಂಬಿಗಳಾದ ಭಾರತೀಯರಿಗೆಲ್ಲ ಋಗಾದಿ ವೇದಗಳೂ ಮನು ಗೌತಮಾದಿಸ್ಮೃತಿಗಳೂ ಸ್ಕಾಂದಲೈಂಗ್ಯಾದಿ ಮಹಾಪುರಾಣಗಳೂ ಪರಮಪ್ರಮಾಣಗಳಾಗಿರುವುದರಿಂದ ಭಾರತೀಯರ ನಡೆನುಡಿಗಳೆಲ್ಲವೂ ಈ ಪ್ರಮಾಣಗ್ರಂಥಗಳನ್ನನುಸರಿಸಿಯೇ ಇರಬೇಕು. ಯಾರ ನಡೆನುಡಿಗಳು ಈ ಶ್ರುತಿಸ್ಮೃತ್ಯಾದಿ ಗ್ರಂಥಗಳಲ್ಲಿ ಹೇಳಿರುವ ನಿಯಮವನ್ನು ಅತಿಕ್ರಮಿಸಿರುತ್ತವೆಯೋ ಅಂಥವರ ನಡೆನುಡಿಗಳಿಂದ ಈಶ್ವರನು ಎಂದಿಗೂ ಪ್ರಸನ್ನನಾಗುವುದಿಲ್ಲ. ಮತ್ತು ಅಂಥವರು ವೈದಿಕರೆನಿಸಿಕೊಳ್ಳಲಾರರು. ವೇದೋಕ್ತವಾಗಿಯೂ ಮತ್ತು ಧರ್ಮಶಾಸ್ತ್ರೋಕ್ತವಾಗಿಯೂ ಇರುವ ವ್ರತವನ್ನು ಪಾಲಿಸದಿದ್ದರೂ ತಾನು ವೈದಿಕಮತಸ್ಥನೆನಿಸಿಕೊಳ್ಳಬೇಕೆಂಬ ಹಂಬಲವುಳ್ಳವನು ದೊರೆತನವಿಲ್ಲದವನು ದೊರೆಯೆನಿಸಿಕೊಂಡಂತೆ ಕೇವಲ ಹಾಸ್ಯಕ್ಕೀಡಾಗಬೇಕಾಗುತ್ತದೆ. ಆದುದರಿಂದ ಯಾರು ವೈದಿಕಮತಾನುಯಾಯಿಗಳೆಂದು ಹೇಳಿಸಿಕೊಳ್ಳಲಿಚ್ಛಿಸುವರೋ ಅವರು ಶ್ರುತಿಸ್ಮೃತಿಪುರಾಣೇತಿಹಾಸಗಳನ್ನು ತಮ್ಮ ಜೀವರತ್ನದಂತೆ ತಿಳಿಯಬೇಕಾಗಿದೆ.

ನಮ್ಮ ವೀರಶೈವಸಿದ್ಧಾಂತವು ಅವೇ ಶ್ರುತಿಸ್ಮೃತ್ಯಾದಿಗಳನ್ನವಲಂಬಿಸಿ ಹೊರಟಿರುವುದಲ್ಲದೆ ಈ ಮತವು ವೈದಿಕಮತಗಳಲ್ಲೆಲ್ಲಾ ಅಗ್ರಸ್ಥಾನವನ್ನು ಹೊಂದಿರುವುದೆಂದು ಸ್ಪಷ್ಟವಾಗಿರುವುದು. ವೀರಶೈವಸಿದ್ಧಾಂತದಲ್ಲಿ ಲಿಂಗಧಾರಣವ್ರತವೇ ಪ್ರಧಾನವಾದುದಾಗಿರುತ್ತದೆ. ಯಾರ ದೇಹದಲ್ಲಿ ಶಿವಲಿಂಗವಿರುತ್ತದೆಯೋ ಅವರೆಲ್ಲರಿಗೂ ಆ ಲಿಂಗವನ್ನು ಧರಿಸಿದ ರೇಣುಕಾದಿ ಪಂಚಾಚಾರ್ಯರೇ ಆದಿಗುರುಗಳಾಗಿರುತ್ತಾರೆ. ಈ ಗುರುಗಳನ್ನು ಪುರಸ್ಕರಿಸದವರು ಲಿಂಗಾಂಗಿಗಳೆನಿಸಲಾರರು. ಅಂಥವರಿಗೆ ವೈದಿಕತ್ವವೆಂಬುವುದು ಸ್ವಪ್ನದಲ್ಲಿ ಕಂಡ ಪದಾರ್ಥದಂತೆ ಮಿಥ್ಯೆಯಾಗುವುದಲ್ಲದೆ ಯಾವ ಕಾಲದಲ್ಲಿಯೂ ಕಾರ್ಯಕಾರಿಯಾಗಲಾರದು. ವೀರಶೈವನೆನಿಸಿಕೊಳ್ಳಲು ಮುಖ್ಯ ಸಾಧನವಾದ ಈ ಶಿವಲಿಂಗಧಾರಣವು ಋಗಾದಿವೇದಗಳಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿರುವಂತೆ ಆ ವೇದಗಳನ್ನು ಅನುಸರಿಸಿದ ಮನ್ವಾದಿಸ್ಮೃತಿಗಳಲ್ಲಿಯೂ, ಲೈಂಗ್ಯಾದಿ ಪುರಾಣಗಳಲ್ಲಿಯೂ, ಭಾರತಾದಿ ಇತಿಹಾಸಗಳಲ್ಲಿಯೂ ವಿಶೇಷವಾಗಿ ವರ್ಣಿಸಲ್ಪಟ್ಟಿರುತ್ತದೆ.

ಕೃತೇತುಮಾನವೋಧರ್ಮಸ್ತ್ರೇತಾಯಾಂ ಗೌತಮಸ್ಮೃತಿಃ ।
ದ್ವಾಪರೇ ಶಂಖಲಿಖಿತಂ ಕಲೌ ಪಾರಾಶರಸ್ಮೃತಿಃ ॥

ಎಂಬ ಪ್ರಮಾಣವಾಕ್ಯದಿಂದ ವೇದಾರ್ಥಗಳನ್ನವಲಂಬಿಸಿ ಅನೇಕ ಮಹರ್ಷಿಗಳು ಅನೇಕ ಸ್ಮೃತಿಗಳನ್ನು ರಚಿಸಿರುತ್ತಾರೆ. ಆ ಸ್ಮೃತಿಗಳಲ್ಲೆಲ್ಲಾ ಮನು, ಗೌತಮ, ಶಂಖಲಿಖಿತ, ಪಾರಾಶರ ಎಂಬ ನಾಲ್ಕು ಸ್ಮೃತಿಗಳು ಪ್ರಧಾನಗಳಾಗಿರುತ್ತವೆ. ಈ ಸ್ಮೃತಿಗಳಲ್ಲಿ ಕೃತಯುಗದಲ್ಲಿ ಮನುಸ್ಮೃತಿಯೂ, ತ್ರೇತಾಯುಗದಲ್ಲಿ ಗೌತಮಸ್ಮೃತಿಯೂ, ದ್ವಾಪರದಲ್ಲಿ ಶಂಖಲಿಖಿತಸ್ಮೃತಿಯೂ, ಕಲಿಯುಗದಲ್ಲಿ ಪಾರಾಶರಸ್ಮೃತಿಯೂ ಹೀಗೆ ಒಂದೊಂದು ಸ್ಮೃತಿಯು ಒಂದೊಂದು ಯುಗದಲ್ಲಿ ಪ್ರಾಮುಖ್ಯವನ್ನು ಹೊಂದಿದ್ದವೆಂದು ಈ ಪ್ರಮಾಣವಾಕ್ಯದಿಂದ ವಿಶದವಾಗುತ್ತದೆ. ಆದರೆ ಶ್ರೀರೇಣುಕಾದ್ಯಾಚಾರ್ಯರಿಂದ ಅನುಗ್ರಹೀತವಾದ ಲಿಂಗಧಾರಣ ವಿಧಾನವು ಈ ನಾಲ್ಕು ಸ್ಮೃತಿಗಳಲ್ಲಿಯೂ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದನ್ನು ಇಲ್ಲಿ ಮಾನವ ಕುಟುಂಬಕ್ಕೆ ತಿಳುಹಿಸಬೇಕಾಗಿದೆ.

ಅಕ್ಷಪಾದಾದಯಸ್ಸರ್ವೇ ಶಕ್ತಯಃ ಪರಯಾ ಮುದಾ ।
ಧಾರಯಂತ್ಯಳಿಕಾಗ್ರೇಷು ಶಿವಲಿಂಗಮಹರ್ನಿಶಂ ॥

ಗೌತಮಾದಿ ಸಮಸ್ತ ಋಷಿಗಳೂ, ಲಕ್ಷ್ಮೀ ಸರಸ್ವತಿ ಮುಂತಾದ ಸಮಸ್ತ ಶಕ್ತಿಯರೂ ಅಹೋರಾತ್ರಿಯಲ್ಲಿಯೂ ತಮ್ಮ ಮಸ್ತಕಗಳಲ್ಲಿ ಶಿವಲಿಂಗವನ್ನು ಧರಿಸಿರುತ್ತಾರೆಂದು ಮನುಸ್ಮೃತಿಯಲ್ಲಿ ಹೇಳಲ್ಪಟ್ಟಿರುತ್ತದೆ.

ಮುಖೇಮಂತ್ರೋ ಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾರುದ್ರಾಕ್ಷಭಸ್ಮಾನಿ ಏತದ್ಬ್ರಾಹ್ಮಣಲಕ್ಷಣಂ ॥

ಅಂತರ್ಧಾರಯಿತುಂ ಲಿಂಗಂ ಅಶಕ್ತಶ್ಶಕ್ತ ಏವವಾ ।
ಬಾಹ್ಯಂಚಧಾರಯೇಲ್ಲಿಂಗಂ ತದ್ರೂಪಮಿತಿನಿಶ್ಚಯಾತ್ ॥

ಮುಖದಲ್ಲಿ ಮಂತ್ರವು, ಹೃದಯದಲ್ಲಿ ಶಿವಧ್ಯಾನವು, ಮಸ್ತಕದಲ್ಲಿ ಲಿಂಗಧಾರಣವು, ಶಿಖಾರುದ್ರಾಕ್ಷಭಸ್ಮಗಳು ಈ ಆರು ಧರ್ಮಗಳು ಯಾರಲ್ಲಿರುತ್ತವೆಯೋ ಅವರೇ ವೀರಶೈವಬ್ರಾಹ್ಮಣರೆನಿಸುವರು. ದಹರಾಕಾಶದಲ್ಲಿ ಜ್ಯೋತಿರ್ಲಿಂಗವನ್ನು ಅನವರತವೂ ಧರಿಸುವ ಶಕ್ತಿಯನ್ನು ಪಡೆದಿರಲಿ, ಪಡೆಯದಿರಲಿ, ಗುರುಮುಖದಿಂದ ದೇಹದಲ್ಲಿ ಧರಿಸಿದ ಹೊರಗಿನ ಇಷ್ಟಲಿಂಗವನ್ನು ಮಾತ್ರ ಬಿಡದೆ ಧರಿಸಿರಲೇಬೇಕು ಎಂದು ಗೌತಮಸ್ಮೃತಿಯಲ್ಲಿ ಹೇಳಲ್ಪಟ್ಟಿರುತ್ತದೆ.

ಕೀಟೋಭ್ರಮರಯೋಗೇನ ಭ್ರಮರೋಭವತಿಧ್ರುವಂ ।
ಮಾನವಶ್ಶಿವಯೋಗೇನ ಶಿವೋಭವತಿ ಸರ್ವದಾ ॥
ವಾಮಹಸ್ತಸ್ಥಿತಂಲಿಂಗಂ ಸಾವಧಾನೇನ ಪೂಜಯೇತ್ ।
ಮಸ್ತಕೇಹೃದಯೇ ಕಂಠೇಧಾರಯೇತ್ಸರ್ವದಾ ದ್ವಿಜಃ ॥

ಭ್ರಮರವು ಕೀಟವನ್ನು ತೆಗೆದುಕೊಂಡು ಬಂದು ಗೂಡಿನಲ್ಲಿ ಇಟ್ಟಿರಲು ಆ ಕೀಟವು ಭ್ರಮರವನ್ನು ನೋಡುತ್ತಲೂ ಧ್ಯಾನಿಸುತ್ತಲೂ ಇರುವುದರಿಂದ ತನ್ನ ಕೀಟದ ಸ್ವರೂಪವನ್ನು ಬಿಟ್ಟು ಭ್ರಮರಾಕೃತಿಯನ್ನು ಹೇಗೆ ಹೊಂದುವುದೋ ಹಾಗೆ ಲಿಂಗಧಾರಿಯಾದ ಮಾನವನು ತಾನು ಧರಿಸಿದ ಶಿವಲಿಂಗದ ಸಂಬಂಧದಿಂದ ತನ್ನ ಜೀವತ್ವವನ್ನು ಕಳೆದುಕೊಂಡು ಸರ್ವಜ್ಞನಾದ ಪರಶಿವಸ್ವರೂಪವನ್ನು ಹೊಂದುವನು. ಗುರುವಿನಿಂದ ಬಂದ ಅಂಥ ಶಿವಲಿಂಗವನ್ನು ಪ್ರಾತರಾದಿ ಸಂಧ್ಯಾಕಾಲಗಳಲ್ಲಿ ತನ್ನ ಎಡಗೈಯಲ್ಲಿರಿಸಿಕೊಂಡು ಷೋಡಶೋಪಚಾರಗಳಿಂದ ಅರ್ಚಿಸುತ್ತ ಮಸ್ತಕದಲ್ಲಾಗಲಿ ಎದೆಯ ಮೇಲಾಗಲಿ ಕಂಠಸ್ಥಾನದಲ್ಲಾಗಲಿ ಯಾವಾಗಲೂ ಧರಿಸುತ್ತಿರುವವನೇ ದ್ವಿಜನೆನಿಸುತ್ತಾನೆ ಎಂದು ಶಂಖಲಿಖಿತ ಸ್ಮೃತಿಯಲ್ಲಿ ಹೇಳಲ್ಪಟ್ಟಿರುತ್ತದೆ.

ಅಯಂಮೇ ಹಸ್ತೋಭಗವಾನಯಂ ಮೇ ಭಗವತ್ತರಃ ।
ಅಯಂಮೇ ವಿಶ್ವಭೇಷಜೋಯಂ ಶಿವಾಭಿಮರ್ಶನಃ ॥
ಅಯಂಮಾತಾ ಅಯಂಪಿತಾ ಅಯಂಜೀವಾತುರಾಗಮಾತ್ ।
ಇದಂತವ ಪ್ರಸರ್ಪಣಂ ಸುಬಂಧವೇಹಿ ನಿರೀಹಿ ॥

ಭಗವಾನ್-ಲಿಂಗರೂಪನಾದ ಶಿವನು, ಮೇಹಸ್ತಃ-ನನ್ನ ಅಂಗೈಯಲ್ಲಿಯೇ ಇರುವನು. ಅಯಂ-ಈ ನನ್ನ ಹಸ್ತದಲ್ಲಿರುವ ಲಿಂಗವು, ಮೇ-ನನಗೆ, ಭಗವತ್ತರಃ-ಸಕಲೈಶ್ವರ್ಯವನ್ನು ಕೊಡುತ್ತದೆ. ಅಯಂ-ಈಲಿಂಗವು, ಮೇ-ನನ್ನ, ವಿಶ್ವಭೇಷಜಃ-ಸಮಸ್ತ ರೋಗಗಳನ್ನು ಪರಿಹರಿಸುವದರಲ್ಲಿ ದಿವ್ಯೌಷಧಸ್ವರೂಪವಾದುದು. ಅಯಂ-ಈ ನನ್ನ ಹಸ್ತಗತವಾದ ಲಿಂಗವು, ಶಿವಾಭಿಮರ್ಶನಃ-ಸಮಸ್ತ ಕಲ್ಯಾಣವನ್ನುಂಟುಮಾಡತಕ್ಕುದು. ಅಯಂ-ಈ ಲಿಂಗವು, ಮಾತಾ-ತಾಯಿಯಂತೆ ಪ್ರೇಮಾಸ್ಪದವಾದುದು. ಅಯಂ-ಈ ಲಿಂಗವು, ಪಿತಾ-ತಂದೆಯಂತೆ ರಕ್ಷಿಸುವದು. ಅಯಂ-ಈ ನನ್ನ ಹಸ್ತಗತವಾದಲಿಂಗವು, ಜೀವಾತುಃ-ಜೀವನೌಷಧರೂಪವಾಗಿದೆ. ಆಗ ಮಾತ್-ಶಾಸ್ತ್ರಾಧಾರದಿಂದ, ಹೇ ಸುಬಂಧೋ-ನಿರುಪಾಧಿಕನಾದ ಜಗದ್ಬಂಧುವೇ?

ಏಹಿ-ಬಾ. ಇದಂ-ನನ್ನ ಹಸ್ತದಲ್ಲಿರುವ ಲಿಂಗವು, ತವ-ನಿನಗೆ, ಪ್ರಸರ್ಪಣಂ-ವಿಹರಿಸುವ ಸ್ಥಾನವಾಗಿದೆ. ನಿರೇಹಿ-ಮತ್ತೊಂದು ಕಡೆಗೆ ಹೋಗದೆ ಈ ಶಿವಲಿಂಗದಲ್ಲಿಯೇ ಸ್ಥಿರವಾಗಿರು ಎಂದು ಋಗ್ವೇದವು ಲಿಂಗಧಾರಣದ ಮಹತ್ವವನ್ನು ಬಹಳವಾಗಿ ಕೊಂಡಾಡಿರುವುದರಿಂದಲೂ,

ಧಾರಯೇದ್ಯಸ್ತು ಹಸ್ತೇನ ಲಿಂಗಾಕಾರಂ ಶಿವಂ ಸದಾ ।
ತಸ್ಯಹಸ್ತಸ್ಥಿತಂ ವಿದ್ಧಿ ಮಪಿದಂ ಸಂಪದಾಂ ಪದಂ ॥

ಲಿಂಗಾಕಾರವಾದ ಪರಶಿವನನ್ನು ಯಾರು ಹಸ್ತದಲ್ಲಿ ಧರಿಸುತ್ತಾರೆಯೋ ಅವರಿಗೆ ಸಕಲಸಂಪತ್ತಿನ ಮೂಲಸ್ಥಾನವಾದ ನನ್ನ ಪದವಿಯು ಹಸ್ತಗತವಾದುದೆಂದು ವಾತುಲಾಗಮದಲ್ಲಿ ಶ್ರೀ ಪರಮೇಶ್ವರನು ಈ ಮಂತ್ರಾರ್ಥವನ್ನು ಸ್ಪಷ್ಟಪಡಿಸಿರುವುದರಿಂದಲೂ,

ಅಯಂಮೇಹಸ್ತೋ ಭಗವಾ ನಿತಿಮಂತ್ರೇಣ ಸರ್ವದಾ।
ಪಾಣಿಲಿಂಗಧೃತಿರ್ವೇದ ಪುರುಷಾಣಾಂ ಸಮೀರಿತಾ ॥

ಎಂದು ಕಾಮಿಕಾಗಮದಲ್ಲಿಯೂ ಸಹ ಇದೇ ಮಂತ್ರವನ್ನೇ ಅನುವಾದಮಾಡಿರುವುದರಿಂದ ಲಿಂಗಧಾರಣವು ವೇದಾಗಮಪುರಾಣ ಪ್ರಸಿದ್ಧವಾದುದೆಂದೂ, ಸಕಲೇಷ್ಟದಾಯಕವೆಂದೂ ಸ್ಪಷ್ಟವಾಗುವುದು.

ಪರಬ್ರಹ್ಮಾಭಿಧಂ ಲಿಂಗಂ ಪಶುಪಾಶವಿಮೋಚಕಂ ।
ಯೋಧಾರಯತಿ ಸದ್ಭಕ್ತ್ಯಾಸ ಪಾಶುಪತ ಉಚ್ಯತೆ ॥

ಇಂಥ ಪರಬ್ರಹ್ಮಸ್ವರೂಪವಾದ ಶಿವಲಿಂಗವು ಮನುಷ್ಯನಿಗೆ ಅಜ್ಞಾನದಿಂದ ಸಂಭವಿಸಿದ ಪಶುಭಾವವನ್ನೂ, ಜೀವವನ್ನು ಅಧೋಗತಿ ಗೀಡು ಮಾಡಿದ ಮಲಪಾಶವನ್ನೂ ನಾಶಮಾಡುತ್ತದೆ. ಇಂಥ ಪವಿತ್ರವಾದ ಲಿಂಗವನ್ನು ಧರಿಸಲು "ಮಸ್ತಕೇ ಕಂದರೇ ಕಕ್ಷೇ ವಕ್ಷಸ್ಯಥ ಕರಸ್ಥಲೇ" ಎಂಬ ಶಿವಾಗಮಪ್ರಮಾಣದಿಂದಲೂ "ಸರ್ವಾನನ ಶಿರೋಗ್ರೀವಃ....ತಸ್ಮಾತ್ಸರ್ವಗತಶ್ಶಿವಃ" ಎಂಬ ಶ್ವೇತಾಶ್ವತರೋಪನಿಷದ್ವಾಕ್ಯದಿಂದಲೂ, ಶಿರಸ್ಸು, ಕಂಠ, ಕಕ್ಷ, ವಕ್ಷಸ್ಥಲ, ಕರ ಇವುಗಳಲ್ಲಿ ಯಾವುದಾದರೊಂದು ತನಗನುಕೂಲವಾದ ಸ್ಥಾನದಲ್ಲಿ ಲಿಂಗವನ್ನು ಧರಿಸಬೇಕು. ಲಿಂಗಕ್ಕೆ ಇವೈದು ಸ್ಥಾನಗಳು ವಿಧಿಸಲ್ಪಟ್ಟಿರುವುವಲ್ಲದೆ ಮಿಕ್ಕ ಸ್ಥಾನಗಳು ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿಲ್ಲವು. ಹೀಗೆ ವೇದಪುರುಷನಿಂದ ಬಹಳವಾಗಿ ಹೊಗಳಲ್ಪಟ್ಟ ಲಿಂಗವನ್ನು ಕಂಠಾದಿ

ಉತ್ತಮಸ್ಥಾನಗಳಲ್ಲಿ ಧರಿಸುವುದಕ್ಕೆ ಬದಲಾಗಿ ನಮ್ಮ ವೀರಶೈವಮತಾವಲಂಬಿಗಳಾದ ಈಗಿನ ಕೆಲ ನವತರುಣರು ಆ ಶಿವಲಿಂಗವನ್ನಿಡುವ ಸಜ್ಜಿಕೆಗೆ ಅಳತೆಯಿಲ್ಲದಂತೆ ತಮ್ಮ ಮನಸ್ವಿಯಾಗಿ ಶಿವಸೂತ್ರ (ಶಿವದಾರ) ವನ್ನು ಪೋಣಿಸಿ ಆತ್ಮನ ನಿತ್ಯಾವಾಸಸ್ಥಾನವಾದ ಹೃದಯಾಬ್ಜವನ್ನು ಬಿಟ್ಟು ನಾಭಿಯ ಕೆಳಭಾಗದಲ್ಲಿ ಧರಿಸಲುಪಕ್ರಮಿಸಿದ್ದಾರೆ. ಇನ್ನು ಕೆಲವರು ಸೊಂಟದಲ್ಲಿ ನಶ್ಯದಡಬ್ಬಿಯನ್ನು ಶಿಕ್ಕಿಸುವಂತೆ ಲಿಂಗಸಜ್ಜಿಕೆಯನ್ನು ಶಿಕ್ಕಿಸುತ್ತಾರೆ. ಕೆಲವರು ಆ ಸಜ್ಜಿಕೆಯನ್ನು ಗಡಿಯಾರ ಹಾಕಿಕೊಳ್ಳುವಂತೆ ಜೇಬಿಗೆ ಇಳಿಬಿಡುತ್ತಾರೆ. ಆಹಾ! ಇದೆಂಥ ಘೋರವಾದ ಪಾಪಕಾರ್ಯವು? ಆಸ್ತಿಕನಾದ ಭಗವದ್ಭಕ್ತನು ಈ ಕ್ರೂರಕೃತಿಯನ್ನು ನೋಡಿದರೆ ಎಷ್ಟು ಸಂಕಟ ಪಡುವನೋ ತಿಳಿಯದಾಗಿದೆ.

ಪ್ರಪಂಚದಲ್ಲಿ ಯಾವುದಾದರೊಂದು ರತ್ನಾದಿ ಪದಾರ್ಥವನ್ನು ಯೋಗ್ಯವಾದ ಸ್ಥಾನದಲ್ಲಿ ಧರಿಸಬೇಕಾಗುವುದು. ಹಾಗಿಲ್ಲದೆ ಕಂಠದಲ್ಲಿ ಹಾಕುವದನ್ನು ಕಾಲಿನಲ್ಲಿ ಹಾಕಿಕೊಳ್ಳುವದೂ, ಕಾಲಿನಲ್ಲಿ ಹಾಕುವುದನ್ನು ಕಂಠದಲ್ಲಿ ಹಾಕಿಕೊಳ್ಳುವುದೂ ಮೂರ್ಖತನವಾಗುವದಲ್ಲದೆ ಇದರಿಂದ ಆಯಾಯ ಪದಾರ್ಥಗಳ ಯೋಗ್ಯತೆಯೂ, ಶೋಭೆಯೂ ಸಹ ನಷ್ಟವಾಗುತ್ತದೆ. ಇಂಥವನನ್ನು ಸದಸದ್ವಿವೇಕಿಗಳು ಹುಚ್ಚನೆಂದು ಕರೆಯದೆ ಬಿಡಲಾರರು. ಹೀಗಿರುವಲ್ಲಿ "ಅಯಂಮಾತಾ ಅಯಂಪಿತಾ ಅಯಂ ಜೀವಾತುಃ" ಈ ಲಿಂಗವೇ ತಾಯಿಯು, ಈ ಲಿಂಗವೇ ತಂದೆಯು, ಈ ಲಿಂಗವೇ ನಮ್ಮನ್ನು ಬದುಕಿಸುವ ಸಂಜೀವಿನಿಯು, ಎಂದು ವೇದಪುರುಷನು ಹೊಗಳಿರುವ ಈ ಪವಿತ್ರವಾದ ಲಿಂಗವನ್ನು ಪವಿತ್ರವಾದ ಸ್ಥಾನದಲ್ಲಿ ಧರಿಸದೆ ದೇಹದ ಅಲಂಕಾರಕ್ಕೆ ಲಿಂಗವು ತೊಂದರೆಮಾಡುವುದೆಂಬ ಭ್ರಮಾತ್ಮಕಜ್ಞಾನದಿಂದ ಕೀಳು ಪ್ರದೇಶದಲ್ಲಿ ಧರಿಸಲು ಹವಣಿಸುವದನ್ನು ನೋಡಿದರೆ ಇಂಥವರು ವೀರಶೈವ ಸಿದ್ಧಾಂತವೆಂಬ ತಂದೆಯು ಇನ್ನೂ ಸ್ವಲ್ಪ ಬದುಕಿರುವಾಗಲೇ ತಿಲಾಂಜಲಿಯನ್ನು ಕೊಡಲು ಹಿಂಜರಿಯರು.

ಪಾಶ್ಚಾತ್ಯಸಂಸರ್ಗ ಪ್ರಭಾವದಿಂದ ಈಗಿನ ಕೆಲ ನವತರುಣರು ನಮ್ಮ ಪೂರ್ವರ್ಷಿಗಳ ವಾಕ್ಯವೆಂದರೆ ಎಣ್ಣೆಯ ಚೀಟಿಯೆಂದು ಬೀಸಾಡುವರು. ಅನುಭವದಿಂದ ನೋಡಿದರೆ ಬ್ರಹ್ಮಾಂಡದಲ್ಲಿ ಸ್ವರ್ಗಲೋಕ, ಮಧ್ಯಮ

ಲೋಕ, ಪಾತಾಳಲೋಕವೆಂದು ಮೂರು ಭಾಗಗಳಿರುವಂತೆ ನಮ್ಮ ದೇಹದಲ್ಲಿಯೂ ಉತ್ತಮ, ಮಧ್ಯಮ, ಅಧಮ ಎಂದು ಮೂರು ಭಾಗಗಳುಂಟು. ಪಾದದಿಂದ ನಾಭಿಯವರೆಗೆ ಅಧಮಲೋಕವು. ನಾಭಿಯಿಂದ ಕಂಠದವರೆಗೆ ಮಧ್ಯಮಲೋಕವು. ಕಂಠದಿಂದ ಶಿರಸ್ಸಿನವರೆವಿಗೆ ಉತ್ತಮಭಾಗವು. ಈ ಉತ್ತಮಭಾಗದಲ್ಲಿ ಪಂಚಜ್ಞಾನೇಂದ್ರಿಯಗಳು ಆಯಾಯ ಗೋಳಕಗಳಲ್ಲಿದ್ದು ಆತ್ಮನಿಗೆ ಸಹಾಯಮಾಡುತ್ತವೆ. ಕಂಠದಿಂದ ನಾಭಿಯವರೆಗೆ ಆತ್ಮಶಕ್ತಿಯೂ, ಬುದ್ಧಿಶಕ್ತಿಯೂ, ಮನಶ್ಶಕ್ತಿಯೂ ಇರುವ ಸ್ಥಾನವಾಗಿರುತ್ತದೆ. ನಮ್ಮ ಆತ್ಮವು ಅನವರತವೂ ಯಾವಸ್ಥಾನದಲ್ಲಿರುತ್ತದೆಯೋ ಆ ಸ್ಥಾನದಲ್ಲಿಯೇ ಇಷ್ಟಲಿಂಗವು ಇರಬೇಕು. ಇದನ್ನು ಬಿಟ್ಟು ಕಣ್ಣಿಗೆ ಗೋಚರವಲ್ಲದ ಮಲಮೂತ್ರಗಳಿಂದ ತುಂಬಿದ ನಾಭಿಯ ಕೆಳಭಾಗದಲ್ಲಿ ಲಿಂಗವನ್ನು ಧರಿಸುವುದಕ್ಕಿಂತಲೂ ಮತ್ತೊಂದು ಹೆಚ್ಚಿನ ಪಾಪವಾವುದು ?

" ನಾಭೇರಧಸ್ಥಾ ಲ್ಲಿಂಗಸ್ಯ ಧಾರಣಂ ಪಾಪಕಾರಣಂ "

ನಾಭಿಯ ಕೆಳಗೆ ಲಿಂಗವನ್ನು ಧರಿಸುವುದು ಪಾಪದಾಯಕವಾದುದೆಂದು ಅಪ್ಪಣೆಕೊಡಿಸಿರುವ ಭಗವತ್ಪಾದ ರೇಣುಕಾಚಾರ್ಯರ ಶಾಸನವನ್ನು ಮೀರಿ ಜಘನ್ಯವಾದ ಪ್ರದೇಶದಲ್ಲಿ ಲಿಂಗವನ್ನು ಯಾರು ಧರಿಸುವರೋ, ಅಂಥವರ ವಿಷಯದಲ್ಲಿ ಲಿಂಗವು ಅಘೋರ ಮೂರ್ತಿಯಾಗಿದ್ದರೂ ರಾಕ್ಷಸನಂತೆ ಭೀಕರಾಕಾರವನ್ನು ಧರಿಸಿ ದುಃಖವನ್ನೀಯುವುದರಲ್ಲಿ ಸಂಶಯವಿಲ್ಲ. ಲೋಕದಲ್ಲಿ ಅಲ್ಪಸ್ವಲ್ಪ ಸಹಾಯಮಾಡಿದ ಧನಿಕನು ಮನೆಗೆ ಬಂದರೆ ಅವನನ್ನು ಉತ್ತಮಸ್ಥಾನದಲ್ಲಿ ಕುಳ್ಳಿರಿಸಿ ತಾಂಬೂಲಾದಿಗಳನ್ನು ಕೊಟ್ಟು ಸತ್ಕರಿಸದಿದ್ದಲ್ಲಿ ಅಂಥವನಿಂದ ಎಷ್ಟೋ ಕಷ್ಟಗಳು ಸಂಭವಿಸುತ್ತಿರುವಾಗ, ಇನ್ನು ಅಖಂಡಸುಖದಾಯಕವಾದ ಈ ಭೌತಿಕ ಶರೀರವನ್ನೂ ಬುದ್ಧಿಶಕ್ತಿಯನ್ನೂ ಅನುಗ್ರಹಿಸಿದ ಸೃಷ್ಟಿಸ್ಥಿತಿಲಯಕರ್ತನಾದ ಪರಶಿವಲಿಂಗವನ್ನು ನಾವುಗಳು ಉತ್ತಮಸ್ಥಾನದಲ್ಲಿಟ್ಟು ಗುರುವಿನ ಅಪ್ಪಣೆಯಂತೆ ಗೌರವಿಸದಿದ್ದಲ್ಲಿ ಅಂಥ ಮಾನವನ ಗತಿಯೇನಾಗುವುದೆಂಬುದನ್ನು ಹೇಳಬೇಕಾಗಿಲ್ಲ. ಇಂಥ ಅಶಾಸ್ತ್ರೀಯವಾದ ಪದ್ಧತಿಗಳು ನಮ್ಮ ಸಮಾಜದಲ್ಲಿ ಕೆಲಕಾಲದಿಂದೀಚೆಗೆ ವಿಶೇಷವಾಗಿ ಅಲ್ಲಲ್ಲಿ ತಲೆದೋರುತ್ತಿರುವವು. ಇದೇನು? ಸಂಸರ್ಗದೋಷವೋ, ಈಗಿನ ವಿದ್ಯಾಭ್ಯಾಸಕೌಶಲವೋ, ಕಲಿಮಹಿಮೆಯೋ ತಿಳಿಯದಾಗಿದೆ. ಆದುದರಿಂದ ಸಂಸರ್ಗದೋಷದಿಂದ ಕಲುಷಿತವಾದ ಇಂಥ

ವಿದ್ಯಾರ್ಥಿಗಳ ಹೃದಯಕ್ಷೇತ್ರದಲ್ಲಿ ಇದುವರೆಗೂ ಬಿತ್ತಲ್ಪಟ್ಟಿರುವ ಈ ವಿಷ ಬೀಜವನ್ನು ಅವರವರ ತಂದೆತಾಯಿಗಳು ತಮ್ಮ ಸದುಪದೇಶವೆಂಬ ಬೆಂಕಿಯಿಂದ ಸುಡುತ್ತ ಬಂದರೆ ತಮ್ಮ ಪವಿತ್ರವಾದ ವಂಶವು ಅಭಿವೃದ್ಧಿಯಾಗುವುದು. ಇಲ್ಲದಿದ್ದರೆ ಈ ವಿಷಬೀಜವು ಅಂಕುರಿಸಿ ಪಲ್ಲವಿಸಿ ಮುಂದೆ ಮರವಾಗಿ ನರಕರೂಪದುಷ್ಫಲವನ್ನು ಕೊಡದಿರದು. ಆದುದರಿಂದ "ಅಯಂಮಾತಾ ಅಯಂ ಪಿತಾ" ಎಂದು ವೇದಪುರುಷನು ಲಿಂಗವನ್ನು ಕಥನಮಾಡಿದಂತೆ ಎಲ್ಲರೂ ಭವನಾಶಕವಾದ ಈ ಲಿಂಗವನ್ನು ಉತ್ತಮಸ್ಥಾನಗಳಲ್ಲಿ ಧರಿಸಿ ಪೂಜಿಸಿ ಶಿವಾನುಗ್ರಹಕ್ಕೆ ಪಾತ್ರರಾಗಬೇಕು.

## ಅಹಿಂಸಾಪಾಲನ

ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ !
ಬ್ರಹ್ಮಚರ್ಯಮಹಿಂಸಾಚ ಶಾರೀರಂ ತಪ ಉಚ್ಯತೇ ॥

ಗುರುದೇವತಾದಿ ಪೂಜೆಯೂ, ಶೌಚವೂ, ಆರ್ಜವವೂ, ಬ್ರಹ್ಮಚರ್ಯವೂ, ಅಹಿಂಸೆಯೂ ಇವೆಲ್ಲವೂ ಶರೀರ ಸಂಬಂಧವಾದ ತಪಸ್ಸೆನಿಸಿಕೊಳ್ಳುವುವೆಂದು ಗೀತೆಯಲ್ಲಿ ಹೇಳಲ್ಪಟ್ಟಿರುವುದು. ಹಿಂಸಾಶಬ್ದವು "ಹನ" ಎಂಬ ಧಾತುವಿನಿಂದ ಹುಟ್ಟಿದ್ದು ಅಹಿಂಸೆಯೆಂದರೆ ಕೊಲ್ಲದಿರುವುದೆಂದೂ ಅರ್ಥವಾಗುತ್ತದೆ. "ಪ್ರಾಣಾಯಥಾತ್ಮನೋಽನ್ಯೇಷಾಂ ಭೂತಾನಾಮಪಿತೇತಥಾ" ಮನುಷ್ಯನು ತನ್ನ ಪ್ರಾಣದಲ್ಲಿ ಎಷ್ಟು ಪ್ರೀತಿಯುಳ್ಳವನಾಗಿರುತ್ತಾನೆಯೋ ಇತರ ಪ್ರಾಣಗಳಲ್ಲಿಯೂ ಸಹ ಅಷ್ಟೇ ಪ್ರೀತಿಯುಳ್ಳವನಾಗಿರಬೇಕೆಂಬ ನೀತಿಗನುಸಾರವಾಗಿ ಜನ್ಮಾಂತರದಲ್ಲಿ ಮಾಡಿದ ಪುಣ್ಯಪಾಪಗಳ ಸಂಸರ್ಗದಿಂದ ಆಯಾಯ ಸಮಸ್ತ ಪ್ರಾಣಿಗಳ ದೇಹದೊಳಗೆ ವಾಸಮಾಡಿರುವ ಜೀವಾತ್ಮರು ಬೆಂಕಿಯಿಂದ ಹೊರಟ ಕಿಡಿಗಳು ಆ ಬೆಂಕಿಯ ಅಂಶಭೂತಗಳಾಗಿರುವಂತೆ ಜಗನ್ನಿಯಾಮಕನಾದ ಶಿವನ ಅಂಶಭೂತಗಳಾಗಿಯೇ ಇರುವರು. ಕಾರಣ ಪಶುಪಕ್ಷಿ ಮೊದಲಾದ ಸಮಸ್ತ ಪ್ರಾಣಿಗಳ ಶರೀರಗಳು ಪರಮಾತ್ಮನ ಅಂಶಗಳಾದ ಜೀವರಿಗೆ ವಾಸಸ್ಥಾನಗಳಾಗಿರುವುದರಿಂದ ಯಾರು ಪ್ರಾಣಿಗಳ ವಧೆಯಲ್ಲಿ ಆಸಕ್ತರಾಗಿರುತ್ತಾರೆಯೋ ಅಂಥವರು ಶಿವನು ಇರುವ ಗುಡಿಯನ್ನು ಕೆಡವಿದ ದೋಷಕ್ಕೆ ಭಾಗಿಗಳಾಗುತ್ತಾರೆ. ಮಾನವನ ಏಳ್ಗೆಗೆ ಕಾರಣಗಳಾದ ಅನಂತ ಧರ್ಮಗಳ ಆಚರಣೆಯಲ್ಲಿ ಈ ಅಹಿಂಸಾವ್ರ

ತವೂ ಸಹ ಒಂದು ಪ್ರಧಾನ ಧರ್ಮವಾಗಿರುವುದರಿಂದ ಇದು ಎಲ್ಲರಿಂದಲೂ ಸಂಗ್ರಹಿಸತಕ್ಕದ್ದಾಗಿರುತ್ತದೆ. ಇದರಿಂದ ಯಾವ ಪ್ರಾಣಿಗಳು ಯಾವ ಪ್ರಾಣಿಯನ್ನೂ ಕೊಲ್ಲಲಾಗದೆಂದು ಸ್ಪಷ್ಟವಾಗುತ್ತಿದ್ದರೂ ಪ್ರಪಂಚದಲ್ಲಿ ವ್ಯಾಘ್ರಾದಿ ಕ್ರೂರಜಂತುಗಳು ಹರಿಣಾದಿ ದುರ್ಬಲ ಜಂತುಗಳನ್ನು ಕೊಲ್ಲು ವವಲ್ಲ. ಎಂಬ ಪ್ರಶ್ನೆಯು ಉತ್ಪನ್ನವಾಗುವುದು. ಆದರೆ ಈ ಪ್ರಾಣಿವಧೆ ಯಿಂದ ಅಂತಹ ಮೂಕ ಪ್ರಾಣಿಗಳಿಗೆ ದೋಷವನ್ನು ಹೇಳಲಾಗುವುದಿಲ್ಲ. ಏಕಂದರೆ; ಆ ಮೂಕಪ್ರಾಣಿಗಳು ಆಹಾರ ನಿದ್ರಾ ಮೈಥುನ ಈ ಮೂರ ರಲ್ಲಿಯೇ ಆಶೆಯುಳ್ಳವುಗಳಾಗಿರುತ್ತವೆ. ಅವುಗಳಿಗೆ ಧರ್ಮಾಧರ್ಮ ವಿಚಾರ ವಾಗಲಿ, ಪಾಪಪುಣ್ಯ ವಿಚಾರವಾಗಲಿ, ಇರುವುದಿಲ್ಲ. ಇಂಥ ವಿಚಾರಗಳೆ ಲ್ಲವೂ ಜ್ಞಾನವುಳ್ಳ ಮಾನವವರ್ಗಕ್ಕೆ ಸಂಬಂಧ ಪಟ್ಟಿರುವುದರಿಂದ "ಮಾ ಹಿಂಸ್ಯಾತ್ ಸರ್ವಭೂತಾನಿ" ಇತ್ಯಾದಿ ಶೃತಿಯಲ್ಲಿ ಹೇಳಲ್ಪಟ್ಟ ಅಹಿಂಸಾ ವಿಧಾಯಕ ವ್ರತಗಳೆಲ್ಲವೂ ಮಾನವರನ್ನೇ ಲಕ್ಷೀಕರಿಸುತ್ತವೆ. ಆದ್ದರಿಂದ ಮಾನವಜನ್ಮಧಾರಿಯಾದ ಪ್ರತಿಯೊಬ್ಬ ಭಾರತೀಯನು ಎಲ್ಲ ವ್ರತಗಳಿ ಗಿಂತಲೂ ಮಿಗಿಲಾದ ಅಹಿಂಸಾವ್ರತವನ್ನು ಅವಶ್ಯವಾಗಿ ಪರಿಪಾಲಿಸ ಬೇಕಾಗಿದೆ. "ತತ್ರಾ ಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ" ಪ್ರಾಣಿಗಳನ್ನು ವಧಿಸದಿರುವುದೂ, ಸುಳ್ಳನ್ನು ಹೇಳದಿರು ವುದೂ, ಕಳ್ಳತನವನ್ನು ಮಾಡದಿರುವುದೂ, ಇಂದ್ರಿಯಗಳನ್ನು ತಡೆಯು ವುದೂ ಮಾನವನ ಧರ್ಮವಾಗಿದೆ ಎಂದು ಯೋಗಸೂತ್ರಕಾರರಾದ ಪತಂಜಲಿ ಮಹರ್ಷಿಗಳು ಅಹಿಂಸಾವ್ರತಕ್ಕೆ ಪ್ರಾಧಾನ್ಯವನ್ನು ಕೊಟ್ಟಿರು ವರು. ಯಾರು ಅಹಿಂಸಾವ್ರತದಿಂದ ದೂರರಾಗಿ ಮಿಕ್ಕ ವ್ರತಗಳನ್ನಾ ಚರಿಸುತ್ತಾರೆಯೋ ಅಂಥವರನ್ನು ಪರಮಾತ್ಮನು ಎಂದಿಗೂ ಕರುಣಿಸು ವುದಿಲ್ಲವು. ಸಕಲ ಪ್ರಾಣಿಗಳಲ್ಲಿ ಅವ್ಯಾಜವಾದ ದಯೆಯನ್ನು ತೋರಿಸು ತ್ತಿರುವುದೇ ಪರಮಾತ್ಮನ ಪೂಜೆಯೆಂದು ಸಾಮಾನ್ಯವಾಗಿ ಹೇಳಬಹು ದಾಗಿದೆ. ಕೃತತ್ರೇತಾಯುಗಗಳಲ್ಲಿ ಈ ಪವಿತ್ರವಾದ ಅಹಿಂಸಾವ್ರತವೇ ವಿಶೇಷವಾಗಿದ್ದು ಕಲಿಯುಗದಲ್ಲಿ ನಾಮಾವಶೇಷವಾಗುತ್ತಿರುವುದನ್ನು ನೋಡಿ ವ್ಯಸನಪಡಬೇಕಾಗಿದೆ.

ಈ ಕಾಲದಲ್ಲಿ ಎಲ್ಲಿನೋಡಿದರೂ ಕುರಿ, ಕೋಣಗಳು ಲೆಕ್ಕವಿಲ್ಲದಷ್ಟು ವಧಿಸಲ್ಪಡುತ್ತಲಿವೆ. ಸಕಲ ದೇವತಾಸ್ವರೂಪವಾದ ಗೋಮಾತೆಯ ವಧೆ

ಯಂತೂ ಹೇರಳವಾಗಿ ನಡೆಯುತ್ತಿದೆ. ಭಾರತೀಯರಲ್ಲಿಯೇ ಅನೇಕರು ದಯಾಶೂನ್ಯರೂ ವಿಚಾರಶೂನ್ಯರೂ ಆಗಿ ಮುದಿಯಾದ ಗೋವುಗಳನ್ನು ತಮ್ಮ ಕೈಗಳಿಂದಲೇ ಕಟುಕರಿಗೆ ಕೊಡುತ್ತಿರುವುದನ್ನು ನೋಡಿ ಸಾಧುಗಳ ಹೃದಯವು ಕುದಿಯುತ್ತಿರುವುದು. ಯಾವ ಪ್ರಾಣಿಯನ್ನೂ ವಧಿಸಕೂಡ ದೆಂದು ವಿಧಿಸುವ ಆರ್ಯಧರ್ಮದ ಅನುಯಾಯಿಗಳೇ ತಮ್ಮಿಂದ ಪೂಜಿ ಸಲ್ಪಡಲು ಯೋಗ್ಯವಾದ ಗೋಮಾತೆಯ ವಿಷಯದಲ್ಲಿ ಇಷ್ಟು ನಿರ್ದಯೆ ಯನ್ನು ತೋರಿಸುತ್ತಿರುವಾಗ, ಇತರ ಕುರಿ ಕೋಣ ಮೊದಲಾದವುಗಳನ್ನು ವಧೆಮಾಡಿಸುವ ವಿಷಯವು ಎಷ್ಟರ ಮಟ್ಟಿಗೆ ನಿರ್ದಯೆಯಿರಬಹುದೆನ್ನು ವುದನ್ನು ಬೇರೆ ಹೇಳಬೇಕಾಗಿಲ್ಲ. ಯಾವುದಾದರೊಂದು ಊರಲ್ಲಿ ಮಾರಿಯ ಜಾತ್ರೆಯಾದರೆ ಸಾಕು ! ಇವರು ತಮ್ಮ ಆರ್ಯಮತದ ಪಾವಿತ್ರ್ಯವನ್ನು ಮರೆತು ಪಶುವಧೆಮೂಲಕ ಮಾರಮ್ಮನು ಸಂತೋಷಪಡುವಳೆಂಬ ಭ್ರಾಂತಿ ಯಿಂದ ದಯಾ ಶೂನ್ಯರಾಗಿ ಅವುಗಳನ್ನು ಕೊಲ್ಲಿಸುತ್ತಾರೆ. ಮಾರಿಯ ಪ್ರೀತಿಗಾಗಿ ಜ್ಞಾನಶೂನ್ಯಗಳಾದ ಮೂಕ ಪ್ರಾಣಿಗಳನ್ನು ಎಳೆದೊಯ್ದು ಮಾರಿಯ ಮುಂದೆ ಕೊಲ್ಲಿಸುವಂತೆ ಅವರು ತಮ್ಮ ಮಕ್ಕಳನ್ನು ಯಾಕೆ ಕೊಲ್ಲಿಸಬಾರದು? ಹೀಗೆ ಪಶುಗಳನ್ನು ಕೊಲ್ಲಿಸುವುದರಿಂದ ದೇವತೆಯು ಪ್ರೀತಳಾಗುವಳೆಂಬ ದೊಡ್ಡ ಪಿಶಾಚಿಯು ಇವರನ್ನು ಹಿಡಿದದ್ದರಿಂದ ಇಂತಹ ನೀಚಕೃತ್ಯಕ್ಕೆ ಮನವೆಳಸಿ ಯಾವ ದೇವತಾ ಪ್ರೀತಿಯೂ ಇಲ್ಲದೆ ಅಂತ್ಯದಲ್ಲಿ ಘೋರವಾದ ಕುಂಭೀಪಾಕ ನರಕವನ್ನು ಅನುಭವಿಸುವದೇ ಇವರ ಜನ್ಮಸಿದ್ಧವಾದ ಹಕ್ಕಾಗಿದೆ ಎಂದು ಹೇಳಬಹುದಾಗಿದೆ. ದೇವತೆಯಲ್ಲಿ ಭಕ್ತಿಯುಳ್ಳವರು ದೇವತೆಯನ್ನು ಕೋಮಲವಾದ ಪತ್ರಪುಷ್ಪಾದಿಗಳಿಂ ದರ್ಚಿಸಿ ಷಡ್ರಸೋಪೇತವಾದ ಪಾಕವನ್ನರ್ಪಿಸಿ ಅತಿಥಿಗಳನ್ನು ತೃಪ್ತಿಗೊಳಿ ಸಿದರೆ ಮಾರಮ್ಮ ಮೊದಲಾದ ಸಮಸ್ತ ದೇವತೆಗಳೂ ತೃಪ್ತರಾಗುವರು. ಈ ನಿಜತತ್ವವನ್ನರಿಯದೆ ನೀತಿವಿರೋಧವೂ ಭಯಂಕರ ನರಕಹೇತುವೂ ಆದ ಕ್ರೂರಕೃತ್ಯಗಳನ್ನಾಚರಿಸಿದರೆ ದೇವತೆಯು ಮೆಚ್ಚುವಳೇ? ಎಂದಿಗೂ ಮೆಚ್ಚಲಾರಳು. ಇದು ವೃಥಾಭ್ರಾಂತಿಯಲ್ಲದೆ ಬೇರೊಂದಿಲ್ಲ. ಕುರಿ, ಕೋಣ ಗೋವು ಮುಂತಾದ ಪಶುಗಳು ನಾವು ದುಡಿದ ಹಣವನ್ನೇನೂ ಅಪೇಕ್ಷಿ ಸುವುದಿಲ್ಲ. ಕಾಡಿನಲ್ಲಿದ್ದ ತೃಣಾದಿಗಳನ್ನೂ ಜಲಾದಿಗಳನ್ನೂ ಸೇವಿಸಿ ಬೆಳೆ ಯುತ್ತವೆ. ಇವುಗಳು ತಮ್ಮ ಪ್ರಯೋಜನವೊಂದೂ ಇಲ್ಲದೆ ಮನುಷ್ಯರಿಗೆ

ಒಂದೊಂದು ರೂಪದಿಂದ ಸಹಾಯ ಮಾಡುತ್ತವೆ. ಗೋವುಗಳು ಅಮೃತ ಸದೃಶಕ್ಷೀರವನ್ನು ಕೊಟ್ಟು ಸರ್ವರನ್ನೂ ಕಾಪಾಡುತ್ತವೆ. ಇದರಂತೆಯೇ ಒಂದೊಂದು ಪ್ರಾಣಿಗಳು ಒಂದೊಂದು ರೀತಿಯಿಂದ ಪ್ರಯೋಜನಕಾರಿಗಳಾಗಿರುತ್ತವೆ. ಇಂತಹ ಮಹೋಪಕಾರಿಗಳಾದ ಗೋವುಗಳನ್ನು ಗಟ್ಟಿಯಾಗಿರುವವರೆಗೂ ಹ್ಯಾಗೊ ದುಡಿಸಿಕೊಂಡು ಅವುಗಳಿಂದ ಸುಖಪಟ್ಟು ಮುದಿತನದಲ್ಲಿ ಕಟುಕರಿಗೆ ಕೊಡುವುದೂ, ಮಾರಮ್ಮನ ಹಬ್ಬದಲ್ಲಿ ಇದ್ದಲ್ಲಿಂದ ಹುಡುಕಿತಂದು ಕರಿ ಕೋಣಗಳನ್ನು ಬಲಿಗೊಡುವುದೂ ಇವೆಲ್ಲ ರಾಕ್ಷಸೀಕೃತ್ಯಗಳಲ್ಲವೆ?

ಪ್ರತ್ಯಕ್ಷಧರ್ಮದೇವತಾಸ್ವರೂಪವಾದ ಗೋವುಗಳನ್ನೇ ಆಗಲಿ ಬಸವಣ್ಣಗಳನ್ನೇ ಆಗಲಿ ಭಾರತೀಯರು ಅತ್ಯಂತ ಪೂಜ್ಯಬುದ್ಧಿಯಿಂದ ಕಂಡು ಪ್ರತಿದಿವಸವೂ ಅರ್ಘ್ಯಪಾದ್ಯಾದಿ ಪೂಜಾಸಾಮಗ್ರಿಯಿಂದ ಪೂಜಿಸಿ ಪ್ರದಕ್ಷಿಣ ನಮಸ್ಕಾರಾದಿಗಳನ್ನು ಮಾಡುತ್ತ ಬಂದಿದ್ದಾದರೆ ಬ್ರಹ್ಮಹತ್ಯಾದಿ ಸಕಲ ಪಾಪಗಳು ನಾಶಹೊಂದುವುವೆಂದು ಧರ್ಮಗ್ರಂಥಗಳು ಸಾರುತ್ತಿರುವವು. ರಾಮಾಯಣ, ಮಹಾಭಾರತಾದಿ ಪ್ರಸಿದ್ಧ ಗ್ರಂಥಗಳಲ್ಲಿ ಅನೇಕ ಜನ ರಾಜಾಧಿರಾಜರು ಗೋಸಂತತಿಯನ್ನು ಅರ್ಚಿಸಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಸಹ ಪಡೆದಿರುತ್ತಾರೆಂದು ಸ್ಪಷ್ಟೋಲ್ಲೇಖವಿರುತ್ತದೆ. ಹಿಂದೆ ಇಕ್ಷ್ವಾಕುಮಹಾರಾಜನ ವಂಶದಲ್ಲಿ ಹುಟ್ಟಿದ ದಿಲೀಪನೆಂಬ ಮಹಾರಾಜನು ತಾನು ಅನಂತಯಾಗಾದಿ ಕ್ರಿಯೆಗಳನ್ನು ಮಾಡಿ ಪವಿತ್ರಾತ್ಮನಾಗಿದ್ದರೂ ಸಹ ಸದ್ಗತಿಯನ್ನೀಯುವ ಪುತ್ರಸಂತಾನವಿಲ್ಲದೆ ಬಹಳವಾಗಿ ದುಃಖಪಡುತ್ತ ತನ್ನ ಸಕಲ ರಾಜ್ಯವೈಭವಗಳನ್ನು ತೊರೆದು ಗೋಸಂತಾನವನ್ನು ತಿರಸ್ಕರಿಸಿದುದರಿಂದ ವಂಧ್ಯತ್ವ ಪ್ರಾಪ್ತವಾಗಿರುವುದೆಂದು ಕುಲಗುರುವಾದ ವಶಿಷ್ಠರುಪದೇಶದಿಂದ ತಿಳಿದು ಗುರುವಿನ ಅಪ್ಪಣೆಯ ಪ್ರಕಾರ ಕಂದಮೂಲಾದಿಗಳನ್ನು ಸೇವಿಸುತ್ತ ಪರ್ಣಕುಟೀರದಲ್ಲಿ ವಾಸಮಾಡುತ್ತ ಅವಿಚ್ಛಿನ್ನಭಕ್ತಿಯಿಂದ ಗೋಪೂಜಾವ್ರತವನ್ನಾಚರಿಸಿದ ಮೇರೆಗೆ ಆತನಿಷ್ಟದಂತೆ ಪುತ್ರಸಂತಾನವುಂಟಾಗಿ ಸುಖವಾಗಿದ್ದನೆಂಬ ಪೂರ್ವೇತಿಹಾಸವು ಎಲ್ಲರಿಗೂ ಗೊತ್ತುಂಟು.

ಗೋಕ್ಷೀರ, ಗೋದಧಿ, ಗೋಘೃತ, ಗೋಮಯ, ಗೋಮೂತ್ರ ಇವುಗಳಿಗೆ ಪಂಚಗವ್ಯಗಳೆಂದೂ ಈ ಪಂಚಗವ್ಯಪ್ರಾಶನವು ಪೂರ್ವಜನ್ಮದ

ಪಾಪಗಳನ್ನು ಹೋಗಲಾಡಿಸುವದೆಂದೂ ಧರ್ಮಶಾಸ್ತ್ರವಿರುವುದು. ಯಾವ ನಿತ್ಯಕರ್ಮಗಳಾಗಲಿ, ಯಜ್ಞಾದಿ ನೈಮಿತ್ತಿಕ ಕರ್ಮಗಳಾಗಲಿ, ಪ್ರಾಯಶ್ಚಿತ್ತ ಕರ್ಮಗಳಾಗಲಿ ಎಲ್ಲವೂ ಗೋವು ಮತ್ತು ಪಂಚಗವ್ಯಗಳು ಇದ್ದರೇನೇ ಆ ಕರ್ಮಗಳು ಪೂರ್ಣಗೊಳ್ಳುವುವು. ಹೀಗೆ ಗೋವಿನಿಂದಾಗುವ ಪಾರಮಾರ್ಥಿಕ ಪ್ರಯೋಜನವನ್ನು ಇಷ್ಟೆಂದು ಹೇಳಲು ಸಾಧ್ಯವಿಲ್ಲ. ಇನ್ನು ಗೋಸಂತತಿಯಿಂದಾಗುವ ಐಹಿಕ ಪ್ರಯೋಜನವನ್ನು ಸ್ವಲ್ಪ ವಿಚಾರಿಸಿ ನೋಡೋಣ! ಗೋವಿನಿಂದ ಹುಟ್ಟುವ ಗೋರೋಜನ ಮತ್ತು ಹಾಲು, ಮೊಸರು, ತುಪ್ಪ, ಗೋಮಯ, ಗೋಮೂತ್ರ ಇವುಗಳು ದೇಹದಲ್ಲಿ ಸಂಭವಿಸಿದ ಭಯಂಕರಗಳಾದ ದೀರ್ಘ ರೋಗಗಳನ್ನು ಎಷ್ಟರಮಟ್ಟಿಗೆ ಹೋಗಲಾಡಿಸುವುವೆಂಬ ವಿಷಯವು ವೈದ್ಯಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುವುದು. ಮತ್ತು ವೈದ್ಯಶಾಸ್ತ್ರಪ್ರಕಾರವಾಗಿ ಮನುಷ್ಯನಿಗೆ ಎಂತಹ ರೋಗಬಂದರೂ ಈ ಗೋಕ್ಷೀರವು ಪಥ್ಯಾಹಾರವಾಗಿರುವುದೆಂಬುದು ಪ್ರತಿಯೊಬ್ಬನಿಗೂ ಅನುಭವದಲ್ಲಿ ಇದ್ದೇ ಇರುತ್ತದೆ. ಆಗ ಹುಟ್ಟಿದ ಶಿಶುಗಳಿಗೂ ಹಣ್ಣುಹಣ್ಣಾದ ಮುದುಕನಿಗೂ ಸಹ ಗೋವಿನ ಹಾಲನ್ನು ಕುಡಿಸುತ್ತಾರೆ. ರೋಗಿಗಳಿಗಂತೂ ಗೋವಿನ ಹಾಲಿಲ್ಲದಿದ್ದರೆ ಅವರ ಪಥ್ಯವೇ ನಡೆಯುವಂತೆ ಇಲ್ಲವು. ಹೀಗೆ ಮನುಷ್ಯನ ಜನ್ಮಾರಭ್ಯ ಮರಣ ಪರ್ಯಂತವೂ ಗೋವಿನ ಉಪಯೋಗವು ಇದ್ದೇ ಇರುತ್ತದೆ. ಗೋವುಗಳು ಮನೆಯಲ್ಲಿ ಕಡ್ಡಿಕಸವನ್ನು ತಿಂದು ಅಮೃತವನ್ನು ಕೊಟ್ಟು ವಂಶವನ್ನೇ ಕಾಪಾಡುತ್ತವೆ. ಇದಲ್ಲದೆ ಕೆಲವೆಡೆಯಲ್ಲಿ ಹಾಲು ತುಪ್ಪಗಳನ್ನು ಕೊಟ್ಟು ವಂಶಾಂಕುರವನ್ನು ಬೆಳೆಯಿಸುವುದಲ್ಲದೆ ಹೊಲದಲ್ಲಿ ಉಳುವುದಕ್ಕೂ ಬಿತ್ತುವುದಕ್ಕೂ ಗಾಡಿಯನ್ನು ಎಳೆಯುವುದಕ್ಕೂ ಗೋವುಗಳನ್ನು ಉಪಯೋಗಿಸುವುದುಂಟು. ಮನುಷ್ಯನ ಸಹಾಯವಿಲ್ಲದೆ ಕಾಡಿನಲ್ಲಿ ಬೆಳೆದ ಹುಲ್ಲನ್ನು ತಿಂದು ಗಿರಿ ನದಿಗಳಲ್ಲಿ ಹರಿಯುವ ನೀರನ್ನು ಕುಡಿದು ಹೊಟ್ಟೆಯನ್ನು ತುಂಬಿಸಿಕೊಂಡು ಒಡೆಯನ ಮನೆಗೆ ಬಂದು ಯಥೇಚ್ಛವಾಗಿ ಹಾಲು ಕರೆದು ಒಡೆಯನ ಪುತ್ರಪೌತ್ರ ಪರಂಪರೆಯನ್ನೆಲ್ಲಾ ಕಾಪಾಡಿ ರಾತ್ರಿವೇಳೆ ಯಜಮಾನನು ಹಾಕಿದ ಕಡ್ಡಿ ಕಸವನ್ನು ತಿಂದು ಪ್ರಾತಃಕಾಲ ಮತ್ತೂ ಬೇಕಾದಷ್ಟು ಹಾಲನ್ನು ಕೊಟ್ಟು ಕಾಡಿಗೆ ಪ್ರಯಾಣಮಾಡುತ್ತವೆ. ಅವುಗಳ ಗೋಮೂತ್ರ ಗೋಮಯವು ಗೊಬ್ಬರವಾಗಿ ಭೂಮಿಯನ್ನು ಫಲವತ್ತಾಗಿ ಮಾಡುತ್ತದೆ. ಒಂದುವೇಳೆ

ಹೊಲವಿಲ್ಲದವನು ಆ ಗೊಬ್ಬರವನ್ನು ಮಾರಿಯಾದರೂ ಜೀವಿಸಬಹುದು. ಆ ಗೋವಿನಲ್ಲಿ ಹುಟ್ಟುವ ಗೋರೋಚನದ ಮಹತ್ವವಂತೂ ಎಲ್ಲರಿಗೂ ತಿಳಿದೇ ಇರುವುದು. ತಾಯಿಯೋಪಾದಿಯಲ್ಲಿ ಎಲ್ಲ ಪ್ರಜೆಗಳನ್ನೂ ಹಾಲಿನಿಂದ ಸಾಕುವುವಲ್ಲದೆ ಅವರವರ ಮನೆಯ ದವಸಧಾನ್ಯಗಳ ಮೂಟೆಯನ್ನು ತುಂಬಿದ ಗಾಡಿಗಳನ್ನು ಎಳೆಯುವ ಉತ್ತಮಗಳಾದ ಎತ್ತುಗಳನ್ನು ಹೆರುತ್ತವೆ. ಆ ಬಸವಣ್ಣಗಳನ್ನು ಒಂದೆರಡು ವರ್ಷ ಪೋಷಿಸಿ ಪ್ರೀತಿಯಿಂದ ಸಾಕಿ ಮಾರುವವರಿಗೆ ಹೇರಳವಾದ ದ್ರವ್ಯಲಾಭವಾಗುತ್ತದೆ. ಇಲ್ಲವಾದರೆ ತಮ್ಮ ಯೌವನದಲ್ಲಿ ಭೂಮಿಯಲ್ಲಿ ದುಡಿದು ಪ್ರತಿವರ್ಷವೂ ಸಾಕಿದ ಒಡೆಯನ ಮನೆಯ ತುಂಬಾ ಧಾನ್ಯವನ್ನು ತುಂಬುತ್ತವೆ. ನಮ್ಮೀ ಭರತಖಂಡದಲ್ಲಿರುವ ಧನಕನಕಾದಿ ಸಕಲ ಸಂಪತ್ತುಗಳು ಒಂದು ಕಾಲದಲ್ಲಿ ನಶಿಸಿಹೋದರೂ ಸಹ ಭೂಮಾತೆಯು ಪೈರುಗಳ ದ್ವಾರಾ ಭಾರತಪುತ್ರರನ್ನು ಎಂದಿನಂತೆ ಐಶ್ವರ್ಯಶಾಲಿಗಳನ್ನಾಗಿಯೇ ಮಾಡುವಳು. ಇಲ್ಲಿ ಭೂವ್ಯವಸಾಯ ಮಾಡ ವವನಾವನುಂಟೋ ಆತನಿಗೆ ಯಾವಾಗಲೂ ದಾರಿದ್ರ್ಯಾವಸ್ಥೆಯು ಬರುವುದೇ ಇಲ್ಲವು. ಭಾರತಮಾತೆಯು ಅಲ್ಪಸ್ವಲ್ಪವಾದರೂ ದವಸವನ್ನು ಕೊಟ್ಟು ಆತನನ್ನು ಅನುಗ್ರಹಿಸೇ ಗ್ರಹಿಸುವಳು. ಈ ಭೂವ್ಯವಸಾಯವಿಲ್ಲದವನು ಇತರ ಎಂಥ ದೊಡ್ಡ ದೊಡ್ಡ ವ್ಯಾಪಾರಗಳನ್ನು ಮಾಡಿದರೂ ನೀರಿನ ಮೇಲೆ ಬರುವ ಗುಳ್ಳೆಗಳಂತೆ ಅವರ ಐಶ್ವರ್ಯವೆಲ್ಲವೂ ತೋರಿ ಅಡಗುತ್ತಲಿದೆ. ಎಂತಹ ವ್ಯಾಪಾರಿಗಳ ಅವಸ್ಥೆಯು ಏನಾಗಿರುತ್ತದೆಯೆಂಬುದನ್ನೂ ಭೂಮಿಯನ್ನು ಇಟ್ಟುಕೊಂಡು ಮನೆಯಲ್ಲಿ ಒಂದು ಗೋವನ್ನು ಎರಡು ಎತ್ತುಗಳನ್ನು ಸಾಕಿದವನ ಸೌಖ್ಯವು ಏಕಪ್ರಕಾರವಾಗಿ ನಡೆಯುತ್ತಿರುವುದನ್ನೂ ನಾವು ನೋಡುತ್ತಲಿದ್ದೇವೆ. ಹೀಗೆ ದನಕರುಗಳನ್ನು ಇಟ್ಟುಕೊಂಡು ಭೂಮಿಯಿಂದ ಜೀವಿಸುವ ಮನುಷ್ಯರು ದರಿದ್ರರಾಗುತ್ತಾರೆಂದು ಈವರೆಗೆ ಯಾರಿಂದಲೂ ಕೇಳಲ್ಪಟ್ಟಿಲ್ಲವು. ಆದ್ದರಿಂದ ಸಕಲರೂ ಗೋಮಾತೆಯನ್ನು ರಕ್ಷಿಸಿ ಆ ಮಾತೆಯ ಕೃಪೆಗೆ ಪಾತ್ರರಾಗಿ ಭಾರತೀಯ ಧರ್ಮವನ್ನು ಉಳಿಸಿ ಧನ್ಯಜೀವಿಗಳಾಗಬೇಕು.

## ವೀರಶೈವ-ವೈಷ್ಣವಮತಗಳ ಸಾಮ್ಯ

ವೀರಶೈವ ಮತಸ್ಥಾಪನಾಚಾರ್ಯರ ಸಿದ್ಧಾಂತವನ್ನೇ ಶ್ರೀರಾಮಾನುಜಾಚಾರ್ಯರ ಅನುಸರಿಸಿ ತಮ್ಮ ಸಿದ್ಧಾಂತವನ್ನು ಭೂತಲದಲ್ಲಿ ಪ್ರಚಾರ ಪಡಿಸಿದರೆಂದು ಬರೆದಿರುವೆವಷ್ಟೆ! ಅದೇ ವಿಷಯವನ್ನು ಸದ್ಯಃ ವಿಶದೀಕರಿಸುತ್ತೇವೆ. ಶ್ರೀಮತ್ಪಂಚಾಚಾರ್ಯರು ಶಿವಸೂತ್ರ ಬ್ರಹ್ಮಸೂತ್ರಗಳಮೇಲೆ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪಿಸಿದರು. ರಾಮಾನುಜಾಚಾರ್ಯರು ಬ್ರಹ್ಮಸೂತ್ರಗಳಮೇಲೆ ವಿಶಿಷ್ಟಾದ್ವೈತಸಿದ್ಧಾಂತವನ್ನು ಬರೆದರು. ಪಂಚಾಚಾರ್ಯರು ಬ್ರಹ್ಮನಲ್ಲಿ ಶಕ್ತಿವೈಶಿಷ್ಟ್ಯವನ್ನು ಬೋಧಿಸಿದರು. ಆದರೆ ರಾಮಾನುಜಾಚಾರ್ಯರು ಜಗದ್ವೈಶಿಷ್ಟ್ಯವನ್ನು ಬೋಧಿಸಿದರು. ಪಂಚಾಚಾರ್ಯರ ಶಕ್ತಿಯು ಸ್ಥೂಲಚಿದಚಿದಾತ್ಮಕ, ಸೂಕ್ಷ್ಮಚಿದಚಿದಾತ್ಮಕವೆಂದು ಎರಡು ಪ್ರಕಾರವಾಗಿರುವುದನ್ನು ಬೋಧಿಸಿದರೆ ರಾಮಾನುಜಾಚಾರ್ಯರು ಜಗತ್ತು ಸ್ಥೂಲಚಿದಚಿದಾತ್ಮಕ, ಸೂಕ್ಷ್ಮಚಿದಚಿದಾತ್ಮಕವೆಂದು ಎರಡು ಪ್ರಕಾರವಾಗಿರುವದೆಂದು ಬೋಧಿಸಿದರು. ಉಭಯರ ಸಿದ್ಧಾಂತವೂ ವಿಶಿಷ್ಟಾದ್ವೈತವಾಗಿದ್ದು ಅಲ್ಪಸ್ವಲ್ಪ ವ್ಯತ್ಯಾಸವಾಗಿರುವದು ಪಂಚಾಚಾರ್ಯರು ಶಿವನೇ ಪರಬ್ರಹ್ಮವೆಂದು ಬೋಧಿಸಿದರೆ ರಾಮಾನುಜಾಚಾರ್ಯರು ವಿಷ್ಣುವೇ ಪರಬ್ರಹ್ಮವೆಂದು ಬೋಧಿಸಿದರು. ಪಂಚಾಚಾರ್ಯರು ಶಿವನಿಂದಲೇ ಸಕಲ ಚರಾಚರಾತ್ಮಕವಾದ ಜಗತ್ತು ನಿರ್ಮಿತವಾಯಿತೆಂದು ಬೋಧಿಸಿದರೆ ರಾಮಾನುಜಾಚಾರ್ಯರು ವಿಷ್ಣುವಿನಿಂದಲೇ ನಿರ್ಮಿತವಾಯಿತೆಂದು ಬೋಧಿಸಿದರು. ಈ ಉಭಯ ಮತಾಚಾರ್ಯರು ಜಗತ್ಸತ್ಯವನ್ನು ಒಪ್ಪಿಕೊಳ್ಳುವರು. ಅಧ್ಯಾಸವಾದವನ್ನು ಖಂಡಿಸುವರು. ಪಂಚಾಚಾರ್ಯರು ಪಾರ್ವತೀ ಸಹಿತನಾದ ಪರಮೇಶ್ವರನನ್ನು ಪೂಜಿಸಬೇಕೆಂದು ಬೋಧಿಸಿದರೆ ರಾಮಾನುಜಾಚಾರ್ಯರು ಲಕ್ಷ್ಮೀಸಹಿತನಾದ ನಾರಾಯಣನನ್ನು ಪೂಜಿಸಬೇಕೆಂದು ಬೋಧಿಸಿದರು. ಪಂಚಾಚಾರ್ಯರು ಪರಶಿವರೂಪಿಯಾದ ಇಷ್ಟಲಿಂಗ ಮೂರ್ತಿಯನ್ನು ಕ್ಷಣಕಾಲದಲ್ಲಿಯಾದರೂ ಅಗಲಿಸದೆ ಸದಾ ಶರೀರದಲ್ಲಿ ಧಾರಣಮಾಡಿಕೊಂಡಿರಬೇಕೆಂದು ಬೋಧಿಸಿದರೆ ಅದಕ್ಕೆ ಬದಲಾಗಿ ರಾಮಾನುಜಾಚಾರ್ಯರು ವಿಷ್ಣುವಿನ ಆಯುಧರೂಪಗಳಾದ ಶಂಖ ಚಕ್ರಾದಿಗಳನ್ನು ಶರೀರದಲ್ಲಿ ಎಡಬಿಡದೆ ಸದಾ ಧರಿಸಬೇಕೆಂದು ತಪ್ತಮುದ್ರಾಂಕನ

ಪದ್ಧತಿಯನ್ನು ನೆಲೆಗೊಳಿಸಿದರು. ಪಂಚಾಚಾರ್ಯರು ಗೋಮಯದಿಂದ ಸಿದ್ಧವಾದ ಭಸ್ಮವನ್ನು ತಿರ್ಯಕ್ತ್ರಿಪುಂಡ್ರವನ್ನಾಗಿ ಧರಿಸಬೇಕೆಂದು ಬೋಧಿಸಿದರೆ ರಾಮಾನುಜಾಚಾರ್ಯರು ವೃತ್ತಿಕೆಯಿಂದ ಸಿದ್ಧನಾದ ನಾಮವನ್ನು ಊರ್ಧ್ವತ್ರಿಪುಂಡ್ರವನ್ನಾಗಿ ಧರಿಸಬೇಕೆಂದು ಬೋಧಿಸಿದರು. ಪಂಚಾಚಾರ್ಯರು ರುದ್ರಾಕ್ಷಮಣಿಗಳನ್ನು ಧರಿಸಬೇಕೆಂದು ಬೋಧಿಸಿದರೆ ರಾಮಾನುಜಾಚಾರ್ಯರು ತುಲಸೀಮಣಿಗಳನ್ನು ಧರಿಸಬೇಕೆಂದು ಬೋಧಿಸಿದರು. ಪಂಚಾಚಾರ್ಯರು ಪೂಜೆಗಾಗಿ ಬಿಲ್ವಪತ್ರಗಳನ್ನು ಪ್ರಧಾನವನ್ನಾಗಿಟ್ಟುಕೊಂಡು ಧರಿಸಬೇಕೆಂದು ಬೋಧಿಸಿದರೆ ರಾಮಾನುಜಾಚಾರ್ಯರು ತುಲಸೀಪತ್ರಗಳನ್ನು ಧರಿಸಬೇಕೆಂದು ಬೋಧಿಸಿದರು. ಪಂಚಾಚಾರ್ಯರು ಶಿವಪಂಚಾಕ್ಷರೀಮಂತ್ರವನ್ನು ಜಪಿಸಬೇಕೆಂದು ಬೋಧಿಸಿದರೆ ರಾಮಾನುಜಾಚಾರ್ಯರು ನಾರಾಯಣಾಷ್ಟಾಕ್ಷರೀಮಂತ್ರವನ್ನು ಜಪಿಸಬೇಕೆಂದು ಬೋಧಿಸಿದರು. ಪಂಚಾಚಾರ್ಯರು ಜನಿಸಿದ ಶಿಶುವಿಗೆ ಶಿವನಸಂಬಂಧವಿರಬೇಕೆಂದೂ ಲಿಂಗಧಾರಣ, ಪಂಚಾಕ್ಷರೀಮಂತ್ರೋಪದೇಶಗಳನ್ನು ಮಾಡಬೇಕೆಂದೂ ಬೋಧಿಸಿದರೆ ರಾಮಾನುಜಾಚಾರ್ಯರು ಶಿಶುವಿಗೆ ಶೀತ ಶಂಖಚಕ್ರಧಾರಣ ನಾರಾಯಣಾಷ್ಟಾಕ್ಷರೀಮಂತ್ರೋಪದೇಶವನ್ನು ಮಾಡಬೇಕೆಂದು ಬೋಧಿಸಿದರು. ಪಂಚಾಚಾರ್ಯರು ೮ನೆಯ ವರ್ಷದಲ್ಲಿ ಜಾತಿಸಂಸ್ಕಾರರೂಪವಾದ ಉಪನಯನವನ್ನೂ ಮತಸಂಸ್ಕಾರ ರೂಪವಾದ ದೀಕ್ಷೆಯನ್ನೂ ಬೋಧಿಸಿದಂತೆಯೇ ರಾಮಾನುಜಾಚಾರ್ಯರಾದರೂ ಈ ಉಭಯಸಂಸ್ಕಾರಗಳನ್ನೂ ಬೋಧಿಸಿದರು. ಪಂಚಾಚಾರ್ಯರು ಬ್ರಾಹ್ಮಣಾದಿ ಚಂಡಾಲಪರ್ಯಂತವಾಗಿ ಸರ್ವರೂ ತಮ್ಮ ತಮ್ಮ ಜಾತಿಗಳಿಗನುಸಾರವಾಗಿ ಲಿಂಗಧಾರಣ ಭಸ್ಮ ರುದ್ರಾಕ್ಷಧಾರಣಾದಿಗಳಿಂದ ಯುಕ್ತರಾಗಿ ವರ್ಣಾಶ್ರಮಧರ್ಮಗಳಂತೆ ವರ್ತಿಸಬೇಕೆಂದು ಬೋಧಿಸಿದಂತೆ ರಾಮಾನುಜಾಚಾರ್ಯರಾದರೂ ಬ್ರಾಹ್ಮಣಾದಿ ಚಂಡಾಲಪರ್ಯಂತವಾಗಿ ಸರ್ವರೂ ಶಂಖ ಚಕ್ರ ಊರ್ಧ್ವಪುಂಡ್ರಾದಿಗಳಿಂದ ಯುಕ್ತರಾಗಿ ವರ್ಣಾಶ್ರಮಧರ್ಮಗಳಂತೆ ವರ್ತಿಸಬೇಕೆಂದು ಬೋಧಿಸಿರುವರು. ಪಂಚಾಚಾರ್ಯರು ತಮ್ಮ ಮತಕ್ಕೆ "ವೀರಶೈವ"ವೆಂಬ ನಾಮವನ್ನಿಟ್ಟರೆ ರಾಮಾನುಜಾಚಾರ್ಯರು ತಮ್ಮ ಮತಕ್ಕೆ "ವೀರವೈಷ್ಣವ ಅಥವಾ ಶ್ರೀವೈಷ್ಣವ" ಎಂಬ ನಾಮವನ್ನಿಟ್ಟರು. ಪಂಚಾಚಾರ್ಯರು ಶಿವಾಗಮಗಳೇ ಪರಮ ಪ್ರಮಾಣೀಭೂತಗಳಾದ ಗ್ರಂಥಗಳೆಂದು ಬೋಧಿ-

ಸಿವರೆ ರಾಮಾನುಜಾಚಾರ್ಯರು ಪಾಂಚರಾತ್ರಾಗಮಗಳೇ ಪರಮ ಪ್ರಮಾಣೀಭೂತಗ್ರಂಥಗಳೆಂದು ಬೋಧಿಸಿದರು. ಪಂಚಾಚಾರ್ಯರು ವಿಧವಾ ಸ್ತ್ರೀಯರು ಕೇಶಗಳನ್ನು ತೆಗೆಯಿಸಕೂಡದೆಂದೂ, ಒಪ್ಪತ್ತೇ ಭೋಜನವನ್ನು ಮಾಡಬೇಕೆಂದೂ, ಕಾಷಾಯವಸ್ತ್ರವನ್ನು ಧರಿಸಬೇಕೆಂದೂ, ಪತಿವಿಯೋಗಾನಂತರ ಪರಶಿವನೇ ಪತಿಯೆಂದು ಭಾವಿಸಿ ವರ್ತಿಸಬೇಕೆಂದೂ ಬೋಧಿಸಿದಂತೆ ರಾಮಾನುಜಾಚಾರ್ಯರಾದರೂ ವಿಧವಾಸ್ತ್ರೀಯರು ಕೇಶಗಳನ್ನು ತೆಗೆಯಿಸಕೂಡದೆಂದೂ, ಒಪ್ಪತ್ತೇ ಭೋಜನಮಾಡಬೇಕೆಂದೂ, ಕೆಂಪುಬಟ್ಟೆಗಳನ್ನು ಧರಿಸಬೇಕೆಂದೂ, ಪತಿವಿಯೋಗಾನಂತರ ನಾರಾಯಣನೇ ಪತಿಯೆಂದು ಭಾವಿಸಿ ವರ್ತಿಸಬೇಕೆಂದೂ ಬೋಧಿಸಿದರು. ಪಂಚಾಚಾರ್ಯರು ಗುರುಮನೆತನದವರಿಗೆ (ಆಚಾರ್ಯಸಾಂಪ್ರದಾಯಕರಿಗೆ) ಮಹತ್ವವನ್ನು ಕೊಟ್ಟಂತೆ ರಾಮಾನುಜಾಚಾರ್ಯರಾದರೂ ಗುರುಮನೆತನದವರಿಗೆ ಮಹತ್ವವನ್ನು ಕೊಟ್ಟರು. ಇವೇ ಮೊದಲಾದ ವಿಷಯಗಳನ್ನು ಪರ್ಯಾಲೋಚಿಸಿ ನೋಡಿದರೆ ಪಂಚಾಚಾರ್ಯರು ಜಗತ್ತಿನಲ್ಲಿ ಶಿವಭಕ್ತಿಯನ್ನು ಪ್ರಸಾರಮಾಡಬೇಕೆಂಬ ಉದ್ದೇಶವನ್ನಿಟ್ಟುಕೊಂಡಂತೆ, ರಾಮಾನುಜಾಚಾರ್ಯರೂ ಸಹ ಜಗತ್ತಿನಲ್ಲಿ ವಿಷ್ಣುಭಕ್ತಿಯನ್ನು ಪ್ರಚಾರಪಡಿಸಬೇಕೆಂಬ ಉದ್ದೇಶದಿಂದ ವೀರಶೈವಮತದ ಸಿದ್ಧಾಂತಾಚಾರಾದಿಗಳನ್ನೇ ರೂಪಾಂತರಗಳನ್ನಾಗಿ ಮಾಡಿ ತಮ್ಮ ಸಿದ್ಧಾಂತವನ್ನು ನೆಲೆಗೊಳಿಸಿದರೆಂದು ತೋರಿಬರುತ್ತದೆ.

## ಭಾರತೀಯ ಮಹಿಳೆಯರು

ಯತ್ರನಾರ್ಯಸ್ತು ಪೂಜ್ಯಂತೇ ರಮಂತೇತತ್ರದೇವತಾಃ।

ಯಾವ ಮನೆಯಲ್ಲಿ ಭಾರತನಾರೀಮಣಿಗಳು ಸಂತುಷ್ಟಚಿತ್ತವುಳ್ಳವರಾಗಿ ಸತ್ಕಾರವನ್ನು ಪಡೆಯುತ್ತಿರುವರೋ ಆ ಮನೆಯಲ್ಲಿ ದೇವತೆಗಳು ಸಂತೋಷದಿಂದ ತಾಂಡವ ಮಾಡುತ್ತಿರುವರೆಂದು ಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟ ವಾಕ್ಯವನ್ನು ವಿಚಾರಮಾಡಿನೋಡಿದರೆ ಭಾರತೀಯ ಸ್ತ್ರೀಯರಿಗೆ ಪುರುಷರಿಗಿಂತಲೂ ವಿಶೇಷವಾದ ಗೌರವಸ್ಥಾನವು ದೊರೆತಿರುವುದೆಂದು ಸ್ಪಷ್ಟವಾಗುತ್ತದೆ. ಇದನ್ನರಿಯದೆ ಈಗಿನ ಕೆಲ ನವೀನ ವಿದ್ಯಾಧಿಕಾರದ

ಭಾರತೀಯಸ್ತ್ರೀಯರು, ಪುರುಷರು ನಮ್ಮನ್ನು ಅಸ್ವಾತಂತ್ರ್ಯವೆಂಬ ನಿಗಳ ದಿಂದ ಬಂಧಿಸಿ ಕೇವಲ ದಾಸ್ಯವೃತ್ತಿಯಲ್ಲಿಟ್ಟುಕೊಂಡಿರುವುದರಿಂದ ಈ ನಿಗಳ ವನ್ನು ಭೇದಿಸಿ ಸ್ವಾತಂತ್ರ್ಯವೆಂಬ ವಿಹಾರಸ್ಥಾನವನ್ನು ಸ್ವಾಧೀನಪಡಿಸಿ ಕೊಳ್ಳಬೇಕೆಂದು ವಾದಿಸುತ್ತಿರುವರು. ಇದು ಅವರ ಭ್ರಮಾತ್ಮಕಜ್ಞಾನ ವಲ್ಲದೆ ಯಥಾರ್ಥ ಜ್ಞಾನವಲ್ಲ. ಮಹಿಳೆಯರ ಸಹಾಯವಿಲ್ಲದಿದ್ದರೆ ಪುರು ಷರು ಐಹಿಕಸೌಖ್ಯಕ್ಕಾಗಲಿ, ಪಾರಲೌಕಿಕಸೌಖ್ಯಕ್ಕಾಗಲಿ ಅರ್ಹರಾಗುವುದಿಲ್ಲ. ಪ್ರಪಂಚವೆಂಬ ಮಹಾರಥಕ್ಕೆ ಮಹಿಳೆಯರು ಒಂದು ಚಕ್ರದಂತೆಯೂ ಪುರುಷರು ಮತ್ತೊಂದು ಚಕ್ರದಂತೆಯೂ ಇರುವುದರಿಂದ ಈ ಆರ್ಯಮಹಿಳೆ ಯರ ಸಹಾಯವಿಲ್ಲದಿದ್ದರೆ ಸಂಸಾರರಥವು ಒಂದು ಹೆಜ್ಜೆಯೂ ಮುಂದು ಹೋಗದೆ ಹದಗೆಟ್ಟುಹೋಗುತ್ತದೆ. ಆದ್ದರಿಂದ ಅನಾದಿಕಾಲದಿಂದ ಪುರುಷ ರಿಗೆ ಎಷ್ಟರಮಟ್ಟಿಗೆ ಸ್ವಾತಂತ್ರ್ಯವೂ ಅಸ್ವಾತಂತ್ರ್ಯವೂ ಇರುತ್ತದೆಯೋ ಅಷ್ಟು ಸ್ವಾತಂತ್ರ್ಯಾಸ್ವಾತಂತ್ರ್ಯಗಳು ಸ್ತ್ರೀಯರಿಗೂ ಸ್ವತಸ್ಸಿದ್ಧವಾಗಿರುತ್ತವೆ. ಸ್ವಾತಂತ್ರ್ಯವೆಂಬುದು ಪುರುಷನಲ್ಲಿ ಮಾತ್ರ ನಿಯತವಾಗಿರುವುದೆಂದೂ ಅಸ್ವಾತಂತ್ರ್ಯವೆಂಬುದು ಸ್ತ್ರೀಯರಲ್ಲಿ ಮಾತ್ರ ನಿಯತವಾಗಿರುವುದೆಂದೂ ಹೇಳಲು ಯಾರಿಂದಲೂ ಸಾಧ್ಯವಾಗಲಾರದು. ಕಾಲಮಾನಗಳಿಗನು ಸಾರವಾಗಿ ಈ ಸ್ವಾತಂತ್ರ್ಯಾಸ್ವಾತಂತ್ರ್ಯಗಳೆರಡೂ ಉಭಯರಲ್ಲಿಯೂ ವರ್ತಿಸುತ್ತವೆ. ಸ್ತ್ರೀಯರು ಕೆಲವು ಭಾಗದಲ್ಲಿ ಅಸ್ವತಂತ್ರರಾಗಿದ್ದರೆ ಕೆಲವು ಭಾಗದಲ್ಲಿ ಸ್ವತಂತ್ರರಾಗಿಯೂ, ಪುರುಷರು ಕೆಲವು ಭಾಗದಲ್ಲಿ ಸ್ವತಂತ್ರ ರಾಗಿದ್ದರೆ ಕೆಲವು ಭಾಗದಲ್ಲಿ ಅಸ್ವತಂತ್ರರಾಗಿಯೂ ಇರುವದು ಲೋಕಾನು ಭವಸಿದ್ಧವಾಗಿದೆ. ಈ ಸ್ವಾತಂತ್ರ್ಯಾಸ್ವಾತಂತ್ರ್ಯಗಳೆರಡರಲ್ಲಿ ಪುರುಷನಿಗೆ ಸ್ವಾತಂತ್ರ್ಯವೆಂತಲೂ, ಸ್ತ್ರೀಯರಿಗೆ ಅಸ್ವಾತಂತ್ರ್ಯವೆಂತಲೂ ವಿಭಾಗ ಮಾಡುವದು ಸರ್ವಥಾ ಉಚಿತವಲ್ಲ. ಪುರುಷನು ಸರ್ವಪ್ರಕಾರದಿಂದ ಸ್ವತಂತ್ರನಾದರೆ ಆತನ ಮನೋವೃತ್ತಿಯು ಎಂದೂ ಪರಿಶುದ್ಧವಾಗಲಾರದು. ಸ್ತ್ರೀಯಳು ಸಹ ಸರ್ವಾತ್ಮನಾ ಸ್ವತಂತ್ರಳಾದರೆ ಆಕೆಯ ಮನೋವೃತ್ತಿಯೂ ಸಹ ಪರಿಶುದ್ಧವಾಗಿರಲಾರದು. ಸತಿಪತಿಗಳೀರ್ವರೂ ಒಂದು ದೇಹದಂತಿರು ವುದರಿಂದ ಒಬ್ಬರಿಗೆ ವ್ಯಥೆಯುಂಟಾದರೆ ಇನ್ನೊಬ್ಬರು ವ್ಯಥೆಪಡುವರು. ಪತಿಯು ಐಶ್ವರ್ಯವುಳ್ಳವನಾದರೆ ಸತಿಯು ಐಶ್ವರ್ಯಾನುಭವಮಾಡುವಳು. ಪತಿಯು ಸುಶೀಲೆಯಾದ ಹೆಂಡತಿಯನ್ನು ಪ್ರತ್ಯಕ್ಷ ಭಾಗ್ಯಲಕ್ಷ್ಮಿಯನ್ನಾಗಿ

ತಿಳಿದಿರುತ್ತಾನೆ. ಸತಿಯು ಸುಶೀಲನಾದ ಪತಿಯನ್ನು ತನ್ನ ಮನೋದೇವತೆ ಯನ್ನಾಗಿ ತಿಳಿದಿರುತ್ತಾಳೆ. ಹೀಗೆ ಲೋಕವ್ಯವಹಾರವೂ ಶಾಸ್ತ್ರಾನುಭವವೂ ಇರುವುದರಿಂದ ಇವರೀರ್ವರಲ್ಲಿ ಪರಸ್ಪರವಾಗಿ ಸ್ವಾತಂತ್ರ್ಯಾಸ್ವಾತಂತ್ರ್ಯಗಳಿ ರುತ್ತವೆಯೇ ಹೊರತು ಒಬ್ಬರು ಸ್ವತಂತ್ರರು, ಇನ್ನೊಬ್ಬರು ಅಸ್ವತಂತ್ರ ರೆಂದು ಹೇಳಲು ಆಗುವುದಿಲ್ಲ. ಸತಿಪತಿಗಳು ಜಗಜ್ಜನನೀಜನಕರಾದ ಪಾರ್ವತೀಪರಮೇಶ್ವರರಂತಿರುವುದರಿಂದ ಆ ಪಾರ್ವತೀ ಪರಮೇಶ್ವರರಲ್ಲಿ ಪಾರ್ವತಿಯು (ಶಕ್ತಿ) ಇಲ್ಲದಿದ್ದರೆ ಜಗದುತ್ಪತ್ತಿಯೇ ಇಲ್ಲದಂತಾಗುವುದು. ಪರಮೇಶ್ವರನಿಲ್ಲದಿದ್ದರೆ ಆ ಶಕ್ತಿಯು ನಿರಾಶ್ರಯಳಾಗುವಳು. ಇವರೀರ್ವರೂ ಅದ್ವೈತಭಾವದಿಂದಿರುವುದರಿಂದಲೇ ಉತ್ಪತ್ತಿ, ಸ್ಥಿತಿ, ಲಯಾದಿ ಪ್ರಪಂಚ ಕಾರ್ಯಗಳು ಅವ್ಯಾಹತವಾಗಿ ನಡೆಯುತ್ತಿರುವವು. ಯಾವಾಗ ಅವರೀರ್ವರಲ್ಲಿ ದ್ವೈತಭಾವವು ಉದಯಿಸುವುದೋ ಅಂದೇ ಮಹಾಪ್ರಳಯವಾಗಿ ಹೋಗು ತ್ತದೆ. ಅದರಂತೆ ವಂಶೋದ್ಧಾರಕಳೂ, ಸಹಧರ್ಮಚಾರಿಣಿಯೂ, ಭಾಗ್ಯ ದೇವತಾಸ್ವರೂಪಿಣಿಯೂ ಆಗಿರುವ ಧರ್ಮಪತ್ನಿಗೂ, ಪತಿಗೂ ಎಂದು ಭಿನ್ನಭಾವವು ಹುಟ್ಟುವುದೋ ಅಂದೇ ದಾಂಪತ್ಯಾನುಕೂಲವು ಕೆಟ್ಟು ಹೋಗಿ ವಂಶೋದ್ಧಾರಕ್ಕೆ ಬದಲಾಗಿ ವಂಶಚ್ಛೇದವಾಗಬೇಕಾಗುತ್ತದೆ. ಆದ್ದರಿಂದ ದಾಂಪತ್ಯಪ್ರೇಮ ಬೀಜವೆನಿಸಿದ ವಿವಾಹಸಮಯದಲ್ಲಿ ಸತಿ ಪತಿಗಳೀರ್ವರೂ ಸೇರಿ "ಧರ್ಮೇಚ ಅರ್ಥೇಚ ಕಾಮೇಚ ನಾತಿಚರಿತವ್ಯಂ" ಎಂದು ದೃಢಪ್ರತಿಜ್ಞೆ ಮಾಡಿರುವುದರಿಂದ ಮಾನವಜನ್ಮದಲ್ಲಿ ಸಾಧಿಸಬೇಕಾದ ಸಕಲ ಪುರುಷಾರ್ಥಗಳಿಗೂ ಉಭಯರೂ ಸಮಭಾಗಿಗಳಾಗಿರುತ್ತಾರೆಂಬು ವದು ನಿರ್ವಿವಾದವಾದ ವಿಷಯವಾಗಿದೆ. ಹೀಗಿದ್ದರೂ ಆರ್ಯಮಹಿಳೆ ಯರು ಸ್ವಭಾವಸಿದ್ಧವಾದ ತಮ್ಮ ಸ್ವಾತಂತ್ರ್ಯವನ್ನು ಮರೆತು ಇಲ್ಲದ ಸಲ್ಲದ ಅಸ್ವಾತಂತ್ರ್ಯವನ್ನು ಆರೋಪಿಸಿಕೊಂಡು ಯಾವುದೋ ಒಂದು ಅಂಶದಲ್ಲಿ ದೃಷ್ಟಿಭೇದದಿಂದ ಹೇಳಲ್ಪಟ್ಟ "ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ ವೆಂಬ" ಧರ್ಮಶಾಸ್ತ್ರದ ಮೇಲೆ ಗದಾಪ್ರವಾಹವನ್ನು ಮಾಡುತ್ತಿರುವುದಾ ಗಲಿ, ಧರ್ಮಶಾಸ್ತ್ರವನ್ನು ಮೀರಿ ನಡೆಯುವುದಾಗಲಿ ಯಾರಿಗೂ ಶ್ರೇಯ ಸ್ಕರವಲ್ಲ. "ಸಂತುಷ್ಟೋ ಭಾರ್ಯಯಾಭರ್ತಾ ಭರ್ತ್ರಾ ಭಾರ್ಯಾ ತಥೈವಚ। ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರವೈಧ್ರುವಂ" ಯಾವ ಕುಲದಲ್ಲಿ ಹೆಂಡತಿಯಿಂದ ಗಂಡನು ಸಂತೋಷಪಡುತ್ತಲೂ, ಗಂಡನಿಂದ ಹೆಂಡತಿಯು

ಸಂತೋಷಪಡುತ್ತಲೂ ಅನ್ಯೋನ್ಯ ಪ್ರೇಮಿಗಳಾಗಿರುತ್ತಾರೆಯೋ ಅಂಥ ಕುಲವು ಲೋಕಪ್ರಸಿದ್ಧವೂ, ಗಣ್ಯವೂ ಆಗಿ ಕೀರ್ತಿಪ್ರತಿಷ್ಠೆಗಳನ್ನು ಪಡೆಯುವುದೆಂದು ಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಆದ್ದರಿಂದ ಸತಿಯು ಪತಿಗಧೀನಳಾಗಿಯೂ, ಪತಿಯು ಸತಿಗಧೀನನಾಗಿಯೂ ಇದ್ದು ಎಲ್ಲಾ ಆಶ್ರಮಗಳಿಗೂ ಮೂಲಾಧಾರವಾದ ತಮ್ಮ ಗೃಹಸ್ಥಾಶ್ರಮವನ್ನು ನೆರವೇರಿಸಿಕೊಂಡು ದೇವದ್ವಿಜಾರಾಧನೆಯನ್ನು ಮಾಡುತ್ತ ಸಂಸಾರಯಾತ್ರೆಯನ್ನು ಮಾಡುವವರೇ ಧನ್ಯಾತ್ಮರು. ಅಂಥವರ ಯೋಗಕ್ಷೇಮದ ಭಾರವನ್ನು ಈಶ್ವರನು ವಹಿಸಿರುವುದಲ್ಲದೆ ಉಭಯರಿಗೂ ಭೋಗಮೋಕ್ಷಗಳು ಸಹ ಸಿದ್ಧಿಸುವುವು. ಸ್ತ್ರೀಪುರುಷರಲ್ಲಿ ಸಾಮಾನ್ಯವಾಗಿ ಕೆಲವು ಧರ್ಮಗಳು ಒಂದೇವಿಧವಾಗಿದ್ದರೂ ವಿಶೇಷಾಕಾರದಿಂದ ಕೆಲವು ಧರ್ಮಗಳಲ್ಲಿ ಮಾತ್ರ ಸ್ತ್ರೀಧರ್ಮವೇ ಬೇರೆ, ಪುರುಷಧರ್ಮವೇ ಬೇರೆಯಾಗಿರುತ್ತದೆ. ತಮ್ಮ ತಮ್ಮ ಧರ್ಮವನ್ನು ಸ್ತ್ರೀಯರಾಗಲಿ ಪುರುಷರಾಗಲಿ ಬಿಡದೆ ಕಾಪಾಡಲೇ ಬೇಕಾಗಿರುತ್ತದೆ. ಕೆಲವು ಸಂದರ್ಭಗಳಲ್ಲಿ ಪುರುಷರು ಮಾಡುವ ಕೆಲಸವು ಸ್ತ್ರೀಯರಿಂದಾಗುವುದಿಲ್ಲ. ಸ್ತ್ರೀಯರು ಮಾಡುವ ಕೆಲಸವು ಪುರುಷರಿಂದಾಗುವುದಿಲ್ಲ. ಪರಸ್ಪರ ಅನುಕೂಲರಾಗಿ ಅವರವರ ಕೆಲಸಗಳನ್ನು ನಡೆಯಿಸುತ್ತ ಬಂದರೆ ಸತಿಪತಿಗಳಿಗೆ ಇರುವ ಭಾವಬಂಧವು ಮತ್ತಷ್ಟು ವಜ್ರಲೇಪದಂತೆ ಗಟ್ಟಿಗೊಳ್ಳುತ್ತದೆ. ದಂಪತಿಗಳಿಗಿರುವ ಇಂಥ ಪರಸ್ಪರ ಭಾವಬಂಧದ ವೈಖರಿಯನ್ನು ನಮ್ಮ ಸನಾತನ ಇತಿಹಾಸಗಳಿಂದ ತಿಳಿದುಕೊಳ್ಳಬೇಕಲ್ಲದೆ ಪಾಶ್ಚಾತ್ಯರ ಇತಿಹಾಸಗಳನ್ನು ಅನುಕರಿಸಬಾರದು. ಪಾಶ್ಚಾತ್ಯರಲ್ಲಿರುವ ದಾಂಪತ್ಯಪ್ರೇಮವು ನೀರಿನಮೇಲೆ ಕಾಣುವ ಗುಳ್ಳೆಯಂತೆ ಅಸ್ಥಿರವಾದುದು. ಮೊದಲಿನ ಗಂಡನನ್ನು ಬಿಡುವುದಕ್ಕೂ ಅವನಿಗಿಂತಲೂ ಸಮರ್ಥನಾದ ಇನ್ನೊಬ್ಬನನ್ನು ಮಾಡಿಕೊಳ್ಳುವದಕ್ಕೂ ಆಕೆಯೇ ಸ್ವತಂತ್ರಳಾಗಿರುತ್ತಾಳೆ. ಮತ್ತು ಮೊದಲಿನ ಗಂಡನು ಮೃತನಾದರೆ ಆಕೆಯು ವೈಧವ್ಯವನ್ನಂತೂ ಅನುಭವಿಸುವುದೇ ಇಲ್ಲವು. ಇಂಥ ಧರ್ಮವನ್ನು ಪವಿತ್ರ ವೇದಧರ್ಮದಲ್ಲಿ ಮಿಶ್ರಮಾಡುವುದು ಸರ್ವಥಾ ಉಚಿತವಲ್ಲವು. ಹಿಂದೆ ಮಹಾಪತಿವ್ರತೆಯಾದ ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡು ಹೋದ ಕಾಲದಲ್ಲಿ ಶ್ರೀರಾಮನು ಆ ಸೀತೆಗಾಗಿಯೂ ಸೀತೆಯು ರಾಮನಿಗಾಗಿಯೂ ಎಷ್ಟು ಕಷ್ಟಪಟ್ಟರೆಂಬುದು ಸರ್ವರಿಗೂ ತಿಳಿದೇ ಇದೆ. ರಾಮನು

ಒಂದು ಸಮಯದಲ್ಲಿ ಸೀತಾದೇವಿಯ ನಡೆನುಡಿಗಳನ್ನು ಸ್ಮರಿಸಿ ಕಣ್ಣೀರು ಸುರಿಸುತ್ತ—

"ಆದೌ ಪಿದ್ಧೌಷಧಿರಿವ ಹಿತಾ ಕೇಳಿಕಾಲೇ ವಯಸ್ಯಾ,ಪತ್ನೀ ತ್ರೇತಾಯು ಜನಸಮಯೇ ಕ್ಷತ್ರಿಯಾಣ್ಯೇವ ಯುದ್ಧೇ । ಶಿಷ್ಯಾ ದೇವದ್ವಿಜಪಿತೃಸಮಾರಾಧನೇ ಬಂಧುರಾರ್ತೌ ಸೀತಾ ಸಾಮೇ ಶಿಶಿರಿತ ಮಹಾಕಾನನೇ ಕಾನಜಾತಾ ॥"

ರೋಗರುಜಿನಗಳುಂಟಾದರೆ ಸಂಜೀವನೌಷಧಿಯಂತೆ ಅನುಕೂಲಳಾಗಿಯೂ, ವಿನೋದಕಾಲದಲ್ಲಿ ಸ್ನೇಹಿತಳಾಗಿಯೂ, ಯಜ್ಞಸಮಯದಲ್ಲಿ ಧರ್ಮಪತ್ನೀಸ್ವರೂಪಿಣಿಯಾಗಿಯೂ, ಶತ್ರುಗಳು ಯುದ್ಧಕ್ಕೆ ಬಂದ ಸಮಯದಲ್ಲಿ ಖಡ್ಗಧಾರಿಣಿಯಾದ ಮಹಾವೀರಳಾಗಿಯೂ ಗುರುದೇವರ ಪೂಜಾಸಮಯದಲ್ಲಿ ಭೃತ್ಯಳಾಗಿಯೂ ವ್ಯಥೆಯುಂಟಾದ ಕಾಲದಲ್ಲಿ ಬಂಧುವಾಗಿಯೂ, ಹೀಗೆ ಒಬ್ಬಳೇ ಅನಂತರೂಪವನ್ನು ಧರಿಸುತ್ತ ನನಗೆ ಅನುಕೂಲಳಾಗಿದ್ದ ಎಲೌ ಸೀತಾದೇವಿಯೇ? ನೀನು ಈ ಭಯಂಕರ ಕಾಡಿನಲ್ಲಿ ಯಾವುದೊಂದೂ ಪ್ರಯೋಜನಕ್ಕೆ ಬರಲಿಲ್ಲವಲ್ಲ? ಹಾ! ಎಂದು ತನ್ನ ಹೆಂಡತಿಯ ವಿಷಯದಲ್ಲಿ ಎಷ್ಟು ದುಃಖಪಟ್ಟಿರುತ್ತಾನೆ. ರಾವಣನು ತನ್ನ ಸಾಮ್ರಾಜ್ಯವನ್ನೇ ಒಪ್ಪಿಸಿ ಮುಖ್ಯ ಪಟ್ಟಮಹಿಷಿಯನ್ನಾಗಿ ಮಾಡಿಕೊಳ್ಳುತ್ತೇನೆಂದು ಹೇಳಿದರೂ ಆ ಸೀತಾದೇವಿಯು ಮನಗೊಡದೆ ರಾಮನಲ್ಲಿಯೇ ನಟ್ಟ ಮನಸ್ಸುಳ್ಳವಳಾಗಿ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಂಡಿರುತ್ತಾಳೆ. ಈ ದಾಂಪತ್ಯಭಾವವು ನಮ್ಮ ಸನಾತನ ಧರ್ಮದಲ್ಲಿ ಒಂದು ಧರ್ಮವಾಗಿರುವಾಗ ಇಂಥ ಪವಿತ್ರಧರ್ಮಮೇಘಮಂಡಲವನ್ನು ಈಗಿನ ಪಾಶ್ಚಾತ್ಯ ಜಂಝಾಮಾರುತವು ಛಿದ್ರಿಸುವುದಕ್ಕೆ ಹತ್ತಿರುವುದನ್ನು ನೋಡಿದರೆ ಯಾರಿಗೆ ತಾನೇ ವ್ಯಸನವೆನಿಸಲಿಕ್ಕಿಲ್ಲ? ಆದ್ದರಿಂದ ಐಹಿಕಪರಸುಖಸಾಧಕವಾದ ನಮ್ಮ ವೇದಧರ್ಮವನ್ನು ಭಾರತೀಯ ಸ್ತ್ರೀಪುರುಷರು ಬಿಡದೆ "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂಬ ಗೀತಾವಾಕ್ಯವನ್ನು ಪದೇ ಪದೇ ಸ್ಮರಿಸುತ್ತ ಆಪಾತ ರಮಣೀಯವಾಗಿ ತೋರುವ ಪಾಶ್ಚಾತ್ಯ ಧರ್ಮಕ್ಕೆ ಶರಣುಹೊಡೆದು ಅನೂಚಾನವಾಗಿ ಬಂದ ಭಾರತಧರ್ಮದಲ್ಲಿಯೇ ಆಸಕ್ತರಾಗಿ ನಮ್ಮ ದೀರ್ಘವಾದ ಸಂಸಾರ ರಥವನ್ನು ಸಾಗಿಸುತ್ತ ಸೀತಾಸಾವಿತ್ರ್ಯಾದಿ ಮಹಾಪತಿವ್ರತೆಯರ ಮೇಲ್ಪಂಕ್ತಿಯನ್ನು ಅನುಸರಿಸಿ ಭಾರತೀಯ ಮಹಿಳೆಯರೆಂಬ ಶಬ್ದವನ್ನು ಅನ್ವರ್ಥಪಡಿಸಲಿ.

## ಭಾರತೀಯ ವಿವಾಹ ಪದ್ಧತಿ

ಎಂಟು ವರ್ಷ ಮೊದಲ್ಗೊಂಡು ಋತುಮತಿಯಾಗುವುದರೊಳಗಾಗಿ ಮಾಡಲ್ಪಡುವ ವಿವಾಹವು ಬಾಲ್ಯವಿವಾಹವೆನಿಸಿಕೊಳ್ಳುವುದು. ಎಂಟು ವರ್ಷಗಳಾಗುವುದಕ್ಕಿಂತ ಪೂರ್ವವಯಸ್ಸಿನಲ್ಲಿಯೇ ವಿವಾಹ ಕರ್ಮವು ಧರ್ಮಶಾಸ್ತ್ರದಲ್ಲಿ ಹೇಳಲ್ಪಟ್ಟಿಲ್ಲವು. ಎಂಟು ವರ್ಷಗಳ ಪೂರ್ವದಲ್ಲಿ ಕನ್ಯೆ ಎಂಬ ಹೆಸರೇ ಬರುವುದಿಲ್ಲ. ಈ ಹೆಸರು ಎಂಟುವರ್ಷಗಳು ಕಳೆದ ಮೇಲೆಯೇ ಹೊರತು ಮೊದಲು ಬರುವುದಿಲ್ಲ. ಅನೇಕ ಕಡೆಗಳಲ್ಲಿ ಸಣ್ಣ ಸಣ್ಣ ಕೂಸುಗಳನ್ನು ಮದುವೆ ಮಾಡುವ ಪದ್ಧತಿಯು ಬಂದಿರುತ್ತದೆ. ಈ ಪದ್ಧತಿಯು ಅತ್ಯಂತ ಹೇಯಾಸ್ಪದವಾದುದೂ ಶಾಸ್ತ್ರಪದ್ಧತಿಗೆ ವಿರೋಧವಾದುದೂ ಆಗಿದೆ. ಇಂಥ ಪದ್ಧತಿಯನ್ನು ಮಾತ್ರ ನಿರೋಧಿಸಬೇಕಲ್ಲದೆ, ಸಾಮಾನ್ಯವಾಗಿ ಶಾಸ್ತ್ರೀಯವಾದ ವಿವಾಹವನ್ನೇ ನಿರೋಧಿಸಲು ಪ್ರಯತ್ನಪಡುವುದು ಸನಾತನಧರ್ಮಕ್ಕೆ ವಿರೋಧವಾಗುತ್ತದೆ. ಕೆಲ ಲೌಕಿಕರು ಋತುಮತಿಯಾಗುವುದಕ್ಕಿಂತ ಮೊದಲು ವಿವಾಹವನ್ನು ನಡೆಯಿಸಿದ್ದಾದರೆ ಅಂಥವರಲ್ಲಿ ಹುಟ್ಟುವ ಪ್ರಜೆಗಳು ದುರ್ಬಲರಾಗಿಯೂ, ಅಲ್ಪಾಯುಸ್ಸುಳ್ಳವರಾಗಿಯೂ ಆಗುತ್ತಾರೆಂಬ ಕಾರಣವನ್ನು ಮುಂದಿಟ್ಟುಕೊಂಡು ಈ ಬಾಲ್ಯವಿವಾಹವನ್ನು ನಿಷೇಧಿಸಿ ಪ್ರೌಢವಿವಾಹವನ್ನು ಜಾರಿಯಲ್ಲಿ ತರಬೇಕೆಂದು ಪ್ರಯತ್ನಪಡುತ್ತಲಿದ್ದಾರೆ. ಹುಟ್ಟುವ ಪೀಳಿಗೆಗಳು ಬಲಿಷ್ಠಗಳಾಗಿಯೂ ಆರೋಗ್ಯಭಾಗ್ಯವುಳ್ಳವುಗಳಾಗಿಯೂ, ದೀರ್ಘಾಯುಸ್ಸುಳ್ಳವುಗಳಾಗಿಯೂ ಇರಬೇಕೆಂಬ ಇವರ ಸಂಕಲ್ಪವನ್ನು ನಾವು ಬಹಳವಾಗಿ ಶ್ಲಾಘಿಸುತ್ತೇವೆ. ಏಕೆಂದರೆ—ಬಲಹೀನರಾಗಿಯೂ ರೋಗಿಗಳಾಗಿಯೂ ಅಲ್ಪವಯಸ್ಸಿನವರಾಗಿಯೂ ಹುಟ್ಟುವ ಪ್ರಜೆಗಳು ಯಾವ ಧಾರ್ಮಿಕ ಕಾರ್ಯಾಂಗಣದಲ್ಲಾಗಲಿ, ರಾಜಕೀಯ ಕಾರ್ಯಾಂಗಣದಲ್ಲಿಯಾಗಲಿ ಪ್ರವೇಶಿಸಲು ಶಕ್ತಿಯಿಲ್ಲದೆ ಕ್ರಿಮಿಕೀಟಾದಿಗಳಂತೆ ವ್ಯರ್ಥಜೀವಿಗಳಾಗಬೇಕಾಗುವುದು. ಆದ್ದರಿಂದ ಭಾವಿ ಪ್ರಜೆಗಳಾಗುವ ಪೀಳಿಗೆಗಳನ್ನು ಬಲಿಷ್ಠರನ್ನಾಗಿಯೂ ಮೇಧಾವಿಗಳನ್ನಾಗಿಯೂ ದೀರ್ಘಾಯುಗಳನ್ನಾಗಿಯೂ ಮಾಡುವಂತೆ ಪ್ರಯತ್ನಿಸುವುದು ಲೌಕಿಕ ವೈದಿಕರಾದ ಸಕಲ ಭಾರತೀಯರಿಗೂ ಅವಶ್ಯವೇ ಆಗಿದೆ. ಆದರೆ ಸಂತತಿಯು ಬಲಹೀನವಾಗಿ ಹುಟ್ಟುವುದಕ್ಕೂ ರೋಗಿಗಳಾಗಿ ಹುಟ್ಟುವು

ದಕ್ಕೂ ಅಲ್ಪಾಯುಸ್ಸಿನವರಾಗಿ ಹುಟ್ಟುವುದಕ್ಕೂ ಋತುಮತಿಯಾಗುವು ದಕ್ಕಿಂತ ಪೂರ್ವದಲ್ಲಿ ಮಾಡುವ ವಿವಾಹವೇ ಕಾರಣವೆಂದು ಹೇಳುವ ಈ ಕಾರ್ಯಾಕಾರಣಭಾವವನ್ನು ಮಾತ್ರ ಯಾರೂ ಒಪ್ಪುವುದಿಲ್ಲ. ವಿವಾಹಕ್ಕೂ, ಬಲಹೀನತೆ ರೋಗ ಅಲ್ಪಾಯುಸ್ಸಾದಿಗಳಿಗೂ ಕಾರ್ಯಕಾರಣಭಾವವು ಸುತರಾಂಸಂಘಟಿಸುವುದಿಲ್ಲ. ವಿವಾಹವೆಂಬುದು ಸತಿಪತಿಗಳ ಹೃದಯಕ್ಷೇತ್ರ ದಲ್ಲಿ ಅನುರಾಗವೆಂಬ ಬೀಜಾಂಕುರವನ್ನು ಬಿತ್ತುವುದಕ್ಕೆ ಸಾಧಕವಾದ ಒಂದು ವಿಧವಾದ ಸಂಸ್ಕಾರವೆನಿಸಿಕೊಳ್ಳುತ್ತದೆ. ಈ ವಿವಾಹಸಂಸ್ಕಾರದಿಂದ ಉಭಯರ ಹೃದಯಕ್ಷೇತ್ರದಲ್ಲಿ ಊರಿದ ಪರಸ್ಪರ ಅನುರಾಗಬೀಜವು ಬೆಳೆದು ಮಹಾವೃಕ್ಷವಾಗಿ ಫಲೋನ್ಮುಖವಾಗಲೆಂಬ ಸಂಕಲ್ಪದಿಂದ ನಮ್ಮ ಸನಾ ತನಧರ್ಮಾವಲಂಬಿಗಳು ವಿವಾಹವಾದನಂತರ ಹಬ್ಬ ಮೊದಲಾದ ದಿನಗಳಲ್ಲಿ ಆ ನೂತನ ಪತಿಯನ್ನು ಕರೆಯಿಸುವದೂ, ಹಸೆ ಮೇಲೆ ಉಭಯರನ್ನು ಕುಳ್ಳಿರಿಸುವದೂ ಮುಂತಾದ ವೃದ್ಧಾಚಾರಗಳನ್ನು ನಡೆಯಿಸುತ್ತಾರೆ. ಇದ ರಿಂದ ಬಾಲ್ಯದಲ್ಲಿಯೇ ಪತಿಗೆ ಸತಿಯಲ್ಲಿಯೂ, ಸತಿಗೆ ಪತಿಯಲ್ಲಿಯೂ ದೃಢ ತರವಾದ ಭಾವಬಂಧವು ಹೆಚ್ಚಿ ದಾಂಪತ್ಯಪ್ರೇಮಲತೆಯು ಸರ್ವತೋಮುಖ ವಾಗಿ ಹಬ್ಬುತ್ತದೆ. ವಿದ್ಯಾರ್ಥಿಗಳಿಗೆ ಬಾಲ್ಯಾವಸ್ಥೆಯಲ್ಲಿ ಅಭ್ಯಾಸಮಾಡಿದ ವಿದ್ಯೆಯು ದೃಢಗೊಳ್ಳುವಂತೆ ಬಾಲ್ಯದಿಂದಲೂ ಅಭ್ಯಾಸಮಾಡಲ್ಪಟ್ಟ ದಾಂಪತ್ಯದ ಅನುರಾಗವು ದೃಢಗೊಳ್ಳುತ್ತ ಹೋಗುತ್ತದೆ. ಇದರಿಂದ ವಿವಾಹ ವೆಂಬೀ ಸಂಸ್ಕಾರವು ಉತ್ತರೋತ್ತರ ಅನುಭಾವ ವಿಭಾವಾದಿ ಸಾತ್ವಿಕಭಾವ ಗಳ ಅಭಿವೃದ್ಧಿದ್ಯೋತಕವಾದ ಅನುರಾಗವೆಂಬ ಬೀಜಾವಾಪನೆಗೆ ಸಾಧಕ ವಾಯಿತಲ್ಲದೆ ವಿವಾಹವಾದ ಮಾತ್ರದಿಂದ ಆ ನೂತನ ಸತೀಪತಿಗಳು ಒಂದೆಡೆ ಯಲ್ಲಿ ಕೂಡಿದ ಹಾಗಾಗಲಿಲ್ಲ. ವಿವಾಹವಾದ ಎಷ್ಟೋ ದಿವಸಗಳ ಮೇಲೆ ತಮ್ಮ ತಮ್ಮ ಇಚ್ಛಾನುಸಾರವಾಗಿ ಸತೀಪತಿಗಳನ್ನು ಒಂದೆಡೆಯಲ್ಲಿ ಕೂಡಿ ಸಲು ಗರ್ಭಾದಾನವೆಂಬುದೊಂದು ಸಂಸ್ಕಾರವು ಧರ್ಮಶಾಸ್ತ್ರದಲ್ಲಿ ಹೇಳ ಲ್ಪಟ್ಟಿರುತ್ತದೆ. ಇಂಥ ಗರ್ಭಾದಾನವೆಂಬ ಸಂಸ್ಕಾರವನ್ನು ಮಾಡುವುದಕ್ಕೆ ಮಾತ್ರದಂಪತಿಗಳಿಗೆ ಪ್ರೌಢವಯಸ್ಸೇ ಬೇಕಾಗಿರುವದು. ಇದಕ್ಕೆ ಧರ್ಮ ಶಾಸ್ತ್ರದಲ್ಲಿ ಕಾಲನಿರ್ಣಯವನ್ನು ಮಾಡಿಲ್ಲವು. ಆದ್ದರಿಂದ ಹೆಂಡತಿಯರು ಹದಿನಾಲ್ಕುವರ್ಷಗಳಿಂದ ಹದಿನೆಂಟು ವರ್ಷಗಳವರೆಗಾದರೂ ಬ್ರಹ್ಮಚಾ ರಿಣಿಯರಾಗಿರಬಹುದು. ಗಂಡಂದಿರು ಸಹ ತಮ್ಮ ಇಚ್ಛಾನುಸಾರವಾಗಿ

ಜಿತೇಂದ್ರಿಯರಾಗಿರಬಹುದು. ಉಭಯರಿಗೂ ಅತ್ಯಂತ ಪ್ರೌಢವಯಸ್ಸುಂಟಾ ದಾಗ ಈ ಸಂಸ್ಕಾರವನ್ನು ಮಾಡಿಕೊಳ್ಳಲೂಬಹುದು. ಹೆಚ್ಚು ಹೆಚ್ಚಾಗಿ ಉಭಯರು ಎಷ್ಟು ದಿವಸ ಜಿತೇಂದ್ರಿಯರಾಗಿ ಇರುತ್ತಾರೆಯೋ ಅಷ್ಟು ದಿವಸ ಹೃದಯದಲ್ಲಿ ನಾಟಿದ ಅನುರಾಗಾಂಕುರವು ಹೆಚ್ಚುತ್ತ ಸರ್ವಾವಸ್ಥೆಗ ಳಲ್ಲಿಯೂ ಅನ್ಯೋನ್ಯವಾಗಿ ಕಾಯವಾಕ್ ಮನಸ್ಸುಗಳಲ್ಲಿಯೂ ಉಭಯರ ಆಕಾರವೂ ಮೂರ್ತೀಭವಿಸುತ್ತ ಹೋಗುವದು. ಇದರಿಂದ ವಿವಾಹವೆಂಬುದು ಧರ್ಮಸಾಧಕವಾದ ಗ್ರಹಸ್ಥಾಶ್ರಮವನ್ನು ಸೂಚಿಸುವ ಒಂದು ಚಿಹ್ನೆ ವಾಯಿತೇ ಹೊರ್ತು ಬಲಹೀನರಾದ ಪ್ರಜೆಗಳುತ್ಪತ್ತಿಗೆ ಕಾರಣವಾಗಲಿಲ್ಲ ವೆಂದು ಸ್ಪಷ್ಟವಾಗುತ್ತದೆ. ಗರ್ಭಾದಾನವೆಂಬ ಸಂಸ್ಕಾರಕ್ಕೂ ಪ್ರಜೋ ತ್ಪಾದನೆಗೂ ಕಾರ್ಯಕಾರಣಭಾವವಿರುವುದರಿಂದ ಅಂಥ ವಯಸ್ಸಿನಲ್ಲಿ ಗರ್ಭಾ ದಾನವನ್ನು ಮಾಡುವುದಾದರೆ ಅಂಥವರ ಹೊಟ್ಟೆಯಲ್ಲಿ ದುರ್ಬಲರಾಗಿಯೂ, ರೋಗಿಗಳಾಗಿಯೂ, ಅಲ್ಪವಯಸ್ಸಿನವರಾಗಿಯೂ ಇರುವ ಪ್ರಜೆಗಳು ಹುಟ್ಟಿ ದೇಶವು ಸತ್ವಶೂನ್ಯವಾಗಬಹುದೆಂದು ಹೇಳಿದರೂ ಹೇಳಬಹುದು. ಇಂಥ ಯುಕ್ತಿವಾದವನ್ನು ಅಂಗೀಕರಿಸಿ ಪ್ರಜೋತ್ಪತ್ತಿಗೆ ಕಾರಣವಾದ ಗರ್ಭಾದಾನ ವನ್ನು ಎಷ್ಟು ಕಾಲ ಬೇಕಾದರೂ ಮುಂದಕ್ಕೆ ತಳ್ಳಬಹುದಾಗಿದೆ. ಇದರಿಂದ ಸನಾತನ ಧರ್ಮಕ್ಕೇನೂ ಹಾನಿತಟ್ಟುವುದಿಲ್ಲ. ಹಾಗಿಲ್ಲದೆ ಏನೂ ಸಂಬಂಧ ವಿಲ್ಲದ ಬಾಲ್ಯವಿವಾಹದ ಮೇಲೆ ಇಂಥ ಅಪಾದನೆ ಮಾಡಿ ಸನಾತನ ಧರ್ಮ ವನ್ನು ಬಿಡುವುದರಲ್ಲಿ ಔಚಿತ್ಯವೇ ತೋರುವುದಿಲ್ಲ. ಮತ್ತು ಕನ್ಯೆಯೆಂಬ ಹೆಸರುಳ್ಳ ಎಂಟು ವರ್ಷದ ವಧುವನ್ನು ದಾನಮಾಡುವುದರಿಂದ ಒಂದು ಫಲವೂ, ರೋಹಿಣಿಯೆಂಬ ಹೆಸರುಳ್ಳ ಒಂಭತ್ತು ವರ್ಷದ ವಧುವನ್ನು ದಾನ ಮಾಡುವುದರಿಂದ ಒಂದು ಫಲವೂ, ಗೌರಿಯೆಂಬ ಹೆಸರುಳ್ಳ ಹತ್ತು ವರ್ಷದ ವಧುವನ್ನು ದಾನಮಾಡುವುದರಿಂದ ಒಂದು ಫಲವೂ ಹೀಗೆ ಋತುಮತಿ ಯಾಗುವವರೆಗೂ ವಿವಾಹದ ಅವಧಿಯನ್ನು ತೋರಿಸಿರುವ ಧರ್ಮಶಾಸ್ತ್ರಕ್ಕೆ ತರ್ಪಣವನ್ನೇ ಕೊಟ್ಟು ಪ್ರೌಢವಿವಾಹವನ್ನು ರೂಢಿಯಲ್ಲಿ ತಂದರೆ ಅದರಿಂದ ಗುಣಗಳಿಗೆ ಪ್ರತಿಯಾಗಿ ದೋಷಗಳುದಯಿಸಿದರೂ ಉದಯಿಸಬಹುದು. ಬಾಲ್ಯವಿವಾಹದಲ್ಲಿ ಆಗುವಷ್ಟು ಭಾವಬಂಧವು ಪ್ರೌಢವಿವಾಹದಲ್ಲಿ ಆಗುತ್ತ ದೆಂದು ಖಂಡಿತವಾಗಿ ಹೇಳಲು ಸಾಧ್ಯವಿಲ್ಲ. ನಮ್ಮ ಸನಾತನಧರ್ಮರೀತಿ ಯಾಗಿ ವಿವಾಹಕ್ಕೆ ಪ್ರಜೋತ್ಪತ್ತಿಯೊಂದೇ ಮುಖ್ಯಫಲವಲ್ಲವು. ಪತಿಯು

ಧರ್ಮಕ್ಕಾಗಿಯೂ ಸಂತಾನಾರ್ಥವಾಗಿಯೂ ಈ ವಧುವನ್ನು ಪರಿಗ್ರಹ ಮಾಡಿರುವೆನೆಂದು ಪ್ರತಿಜ್ಞೆಮಾಡಿರುವುದರಿಂದ ಈ ವಿವಾಹಸಂಸ್ಕಾರವು ಧರ್ಮ ಮತ್ತು ಸಂತತಿ ಇವೆರಡನ್ನೂ ಉಂಟುಮಾಡುವುದರಿಂದ ಇಂಥ ವಿವಾಹಸಂಸ್ಕಾರದ ಕಾಲವನ್ನು ಬದಲಾಯಿಸಲು ಶಕ್ಯವಿಲ್ಲ. ಹಿಂದೆ ಒಂದು ಕಾಲದಲ್ಲಿ ಇಂತಹ ಬಾಲ್ಯವಿವಾಹ ನಿಷೇಧದ ಬಿಲ್ಲು ತಂದಾಗ್ಗೆ ಲೋಕಮಾನ್ಯ ತಿಲಕರವರು ಇದು ಕೇವಲ ಧಾರ್ಮಿಕ ವಿಷಯವಾದ್ದರಿಂದ ಇದನ್ನು ತೀರ್ಮಾನಿಸಲು ಶಕ್ಯವಿಲ್ಲವೆಂದು ಸೂಚಿಸಿರುತ್ತಾರೆ. ಮಹಾತ್ಮಗಾಂಧಿಯವರು ಸಹ ಒಂದು ಸಂದರ್ಭದಲ್ಲಿ ಬಾಲ್ಯವಿವಾಹವು ಪರಸ್ಪರ ದಾಂಪತ್ಯಾಭಿವೃದ್ಧಿಗೆ ಸಾಧಕವಾದುದೆಂದೂ ಒಪ್ಪಿಗೆಯನ್ನು ಕೊಟ್ಟಿರುತ್ತಾರೆ. ಸ್ವಾಮಿ ವಿವೇಕಾನಂದರು ಸಹ "ನಮ್ಮ ಭಾರತಭೂಮಿಯು ವಿಧವೆಯರ ಕಣ್ಣೀರಿನಿಂದ ನೆನೆಯುತ್ತಿದ್ದರೆ ಪಾಶ್ಚಾತ್ಯಭೂಮಿಯಲ್ಲಿ ಅವಿವಾಹಿತ ಸ್ತ್ರೀಯರ ನಿಟ್ಟುಸಿರಿನಿಂದ ಅಲ್ಲಿಯ ವಾತಾವರಣವೇ ಕಲುಷಿತವಾಗಿ ಹೋಗಿದೆ" ಎಂಬುದನ್ನು ಸ್ಪಷ್ಟಪಡಿಸಿ ಹೀಗೆ ಒಂದೊಂದು ತರಹದ ಕಷ್ಟಗಳು ಒಂದೊಂದು ದೇಶದಲ್ಲಿ ರೂಢಮೂಲವಾಗಿರುವುದರಿಂದ ಇದನ್ನು ಪರಿವರ್ತನೆ ಮಾಡಲು ಯಾರಿಂದಲೂ ಸಾಧ್ಯವಿಲ್ಲವೆಂದು ಹೇಳಿರುವರು. ಆದ್ದರಿಂದ ನಮ್ಮ ಭಾರತೀಯರು ಪಾಶ್ಚಾತ್ಯ ದೇಶೀಯರ ಅನುಕರಣ ಮಾಡಿಕೊಂಡು ಬಾಲ್ಯವಿವಾಹವನ್ನು ಬಿಟ್ಟು ಪ್ರೌಢವಿವಾಹದಲ್ಲಿ ಪ್ರವೃತ್ತರಾದರೆ ಇದಕ್ಕಿಂತಲೂ ಹೆಚ್ಚಾದ ಕಷ್ಟಗಳಿಗೆ ಗುರಿಯಾಗಬೇಕಾಗುವುದು. ಆದ್ದರಿಂದ ನಮ್ಮ ಪ್ರಾಚೀನ ಪದ್ಧತಿಯನ್ನು ತೆಗೆದುಹಾಕಲು ಯಾರೂ ಪ್ರಯತ್ನಪಡದೆ ರೂಢಮೂಲವಾಗಿಯೂ ಧರ್ಮಶಾಸ್ತ್ರೋಕ್ತವಾಗಿಯೂ ಬಂದಿರುವ ಪದ್ಧತಿಯನ್ನೇ ನಡೆಯಿಸುತ್ತ ಹೋಗುವುದು ಶ್ರೇಯಸ್ಕರವಾಗಿರುವುದು.

ಸ್ತ್ರೀಯರು ತಾವು ವಿಧ್ಯುಕ್ತವಾಗಿ ಪಾಣಿಗ್ರಹಣ ಮಾಡಿಕೊಂಡ ಪತಿಯು ಮೃತಿಯನ್ನು ಹೊಂದಿದ ಪಕ್ಷದಲ್ಲಿ ಪುನಃ ಮತ್ತೊಬ್ಬ ಪುರುಷನನ್ನು ವಿವಾಹ ಮಾಡಿಕೊಳ್ಳುವದು ಶೃತಿಸ್ಮೃತ್ಯಾದಿಗಳನ್ನವಲಂಬಿಸಿರುವ ಆರ್ಯಧರ್ಮಾವಲಂಬಿಗಳಿಗೆ ಅತ್ಯಂತ ನಿಷಿದ್ಧವಾದುದಾಗಿದೆ. ಗಂಡನು ಸತ್ತಮೇಲೆ ಮತ್ತೊಬ್ಬನನ್ನು ಧರಿಸಿದ ಸ್ತ್ರೀಯಳು ವ್ಯಭಿಚಾರಿಣಿಯೆಂತಲೂ, ಅಂಥ ಸ್ತ್ರೀಯಳ ಹೊಟ್ಟೆಯಲ್ಲಿ ಹುಟ್ಟಿದವನು ಗೋಳಕನೆಂತಲೂ ಕರೆಯ

ಲ್ಪಡುತ್ತಾರೆ. ಇಂಥ ಪುನರ್ವಿವಾಹವನ್ನು ಹೊಂದಿದವಳಿಗಾಗಲಿ, ಇವಳ
ಹೊಟ್ಟೆಯಲ್ಲಿ ಹುಟ್ಟಿದ ಮಗನಿಗಾಗಲಿ ಯಾವ ಕರ್ಮಾಧಿಕಾರವೂ ಬರ
ಲಾರದು. ವೇದಧರ್ಮವನ್ನವಲಂಬಿಸಿದ ಸ್ತ್ರೀಯಳು ಒಬ್ಬನನ್ನು ಅಗ್ನಿಸಾಕ್ಷಿ
ಯಾಗಿ ಎಂದು ಪರಿಗ್ರಹಿಸುತ್ತಾಳೆಯೋ ಅಂದಿನಿಂದಲೂ ಆ ಪತಿಯನ್ನೇ
ಸಾಕ್ಷಾತ್ ಪರಮೇಶ್ವರನೆಂದು ತಿಳಿದು ಪತಿಸೇವೆಯಲ್ಲಿ ನಿರತಳಾಗಿರ
ಬೇಕು. ಒಂದು ವೇಳೆ ತನ್ನ ದೈವದುರ್ವಿಲಾಸದಿಂದ ಪತಿವಿಯೋಗವಾದರೆ
ಮತ್ತೊಬ್ಬ ಪತಿಯನ್ನು ಪರಿಗ್ರಹಣಮಾಡದೆ ಬ್ರಹ್ಮಚಾರಿಣಿಯಾಗಿರುವುದೇ
ಪಾತಿವ್ರತ್ಯಧರ್ಮದ ಲಕ್ಷಣವಾಗಿದೆ. ಪುರುಷರಾಗಲಿ ಸ್ತ್ರೀಯರಾಗಲಿ ಪ್ರತಿ
ಯೊಬ್ಬರೂ ಅವರವರ ಪುಣ್ಯ ಪಾಪಕರ್ಮಾನುಸಾರವಾಗಿ ಸುಖದುಃಖ
ಗಳನ್ನನುಭವಿಸಲೇಬೇಕಾಗಿದೆ. “ಲಲಾಟಲಿಖಿತಾರೇಖಾ ಪರಿಮಾರ್ಷ್ಟುಂ
ನಶಕ್ಯತೆ” ಎಂಬುಕ್ತಿಯಂತೆ ಹರಿಬ್ರಹ್ಮಾದಿಗಳೂ ಸಹ ಒದಗುವ ಸುಖದುಃಖ
ಪರಂಪರೆಯನ್ನು ತಪ್ಪಿಸಿಕೊಳ್ಳಲಾರರು. ಕೆಲವು ಸ್ತ್ರೀಯರು ದುಃಖವನ್ನನು
ಭವಿಸುತ್ತಿದ್ದರೆ ಕೆಲವರು ಸುಖವನ್ನನುಭವಿಸುತ್ತಲಿರುವರು. ದುಃಖಕರ
ವಾದ ವೈಧವ್ಯವೆಂಬುದು ದೈವಾಯತ್ತವಾದುದರಿಂದ ಹಿಂದಣಜನ್ಮದ
ಪಾಪಶೇಷದಿಂದೊದಗಿದ ಈ ವೈಧವ್ಯವು ಮತ್ತೊಬ್ಬನನ್ನು ವರಿಸುವುದರಿಂದ
ಪರಿಹಾರವಾಗಲಾರದು. ದೇಹವಿರುವವರೆಗೂ ವೈಧವ್ಯವು ಇದ್ದೇ ಇರುತ್ತದೆ.
ಒಂದುವೇಳೆ ಮತ್ತೊಬ್ಬಪುರುಷನ ಸಂಬಂಧದಿಂದ ವೈಧವ್ಯವು ಪರಿಹಾರ
ವಾಗುವುದಾದರೆ ಆತನೂ ಅಕಸ್ಮಾತ್ ಮರಣಹೊಂದಿದಲ್ಲಿ ಪುನಶ್ಚ ವೈಧ
ವ್ಯವು ಪ್ರಾಪ್ತವಾಗುವುದು. ಅದನ್ನು ಪರಿಹರಿಸಿಕೊಳ್ಳಲು ಮೂರನೆಯ
ವನನ್ನು ವರಿಸಬೇಕಾಗುವುದು. ಹೀಗೆ ಒಬ್ಬ ಸ್ತ್ರೀಯಳು ಅನಂತಪುರುಷ
ರನ್ನು ಪರಿಗ್ರಹಿಸುವ ಸಮಯವು ಒದಗಬಹುದಾದುದರಿಂದ ಆಗ ಪಾತಿ
ವ್ರತ್ಯಕ್ಕೂ ಹಿಂದೂಧರ್ಮಶಾಸ್ತ್ರಕ್ಕೂ ತಿಲಾಂಜಲಿಯು ಕೊಡಲ್ಪಡಬೇಕಾಗು
ವುದು. ನಮ್ಮ ವೇದಧರ್ಮವೆಂಬುದು ಪ್ರಾಯಶಃ ಹೆಚ್ಚಾಗಿ ಸ್ತ್ರೀಯರನ್ನೇ
ಅವಲಂಬಿಸಿರುತ್ತದೆ. ಯಾವ ಸ್ತ್ರೀಯರು ಆರ್ಯಧರ್ಮವನ್ನು ದೂರೀಕರಿಸಿ
ಪಾರಮಾರ್ಥಿಕ ಸುಖವನ್ನು ಮರೆತು ಐಹಿಕಸುಖಕ್ಕಾಗಿ ಪಾತಿವ್ರತ್ಯವನ್ನು
ಹಾಳುಮಾಡಿಕೊಳ್ಳುತ್ತಾರೆಯೋ ಅಂಥ ಸ್ತ್ರೀಯರಿಂದ ಆ ವಂಶವೇ ಕಲು
ಷಿತವಾಗಿ ಹೋಗುವುದು. ಆದರೆ ಈಗಿನ ನವೀನ ನಾಗರೀಕತೆಯ ಪರಾಕಾಷ್ಠ
ದಶೆಯಲ್ಲಿರುವ ಕೆಲ ಜನ ಸ್ತ್ರೀಯರು ಅನ್ಯದೇಶೀಯಸ್ತ್ರೀಯರ ಸಂಸರ್ಗದಿಂದ

ಪುರುಷರಂತೆ ಎಲ್ಲ ಭಾಗಗಳಲ್ಲಿಯೂ ಸ್ವಾತಂತ್ರ್ಯವನ್ನು ಬಯಸಲುಪಕ್ರಮಿಸಿರುತ್ತಾರೆ. ಹೆಂಡರು ಸತ್ತರೆ ಗಂಡಸರು ಬೇಕುಬೇಕಾದಹಾಗೆಲ್ಲ ಹೆಂಡರನ್ನು ಮಾಡಿಕೊಳ್ಳಬಹುದಂತೆ! ಅದರಂತೆ ಗಂಡಂದಿರು ಸತ್ತರೆ ಬೇರೆ ಬೇರೆ ಗಂಡಂಡಿರನ್ನು ಏಕೆ ಮದುವೆ ಮಾಡಿಕೊಳ್ಳಬಾರದೆಂದು ನೂತನ ಸುಧಾರಣೆಯ ಸ್ತ್ರೀಯರು ಆಕ್ಷೇಪಿಸಹತ್ತಿದ್ದಾರೆ. ಇದು ಈಗಿನ ವಿದ್ಯೆಯ ಪ್ರಭಾವವೆಂದು ಹೇಳಬೇಕಲ್ಲದೆ ಅವರ ದೋಷವೆಂದು ಹೇಳಲಾಗುವುದಿಲ್ಲ.

ಉತ್ಸೃಜ್ಯಾಪಿ ಹಿ ಮಾಮಾರ್ಯ ಪ್ರಾಪ್ಸ್ಯಸ್ಯನ್ಯಾಮಪಿಸ್ತ್ರಿಯಂ।
ತತಃ ಪ್ರತಿಷ್ಠಿತೋ ಧರ್ಮೋ ಭವಿಷ್ಯತಿ ಪುನಸ್ತವ॥
ನ ಚಾಪ್ಯಧರ್ಮಃ ಕಲ್ಯಾಣಬಹುಪತ್ನೀಕತಾಂ ನೃಣಾಂ॥
ಸ್ತ್ರೀಣಾಮಧರ್ಮಸ್ಸುಮಹಾನ್ ಭರ್ತುಃ ಪೂರ್ವಸ್ಯ ಲಂಘನೆ॥

ಪಾಂಡವರು ವನವಾಸಕ್ಕೆ ಹೋಗಿ ಒಂದು ಗ್ರಾಮದಲ್ಲಿ ವಾಸಮಾಡಿರಲು ಅಲ್ಲಿಯ ಜನರು ಮಹಾಕ್ರೂರನಾದ ಬಕಾಸುರನಿಗೆ ಕ್ರಮ ಪ್ರಕಾರ ಒಬ್ಬೊಬ್ಬ ಪುರುಷರನ್ನು ಬಲಿಯಾಗಿ ಒಪ್ಪಿಸುತ್ತಿರಲು ಒಂದು ದಿವಸ ಒಬ್ಬ ಬ್ರಾಹ್ಮಣನ ಪಾಲಿಗೆ ಬಂದಿತು. ಆಗ ಆ ರಾಕ್ಷಸನಿಗೆ ಬಲಿಯಾಗಲು ಸಿದ್ಧನಾದ ಬ್ರಾಹ್ಮಣನನ್ನು ಕುರಿತು ಆತನ ಪತ್ನಿಯು, ಪೂಜ್ಯನೇ? ನಿನ್ನ ದೇಹಕ್ಕೆ ಪ್ರತಿಯಾಗಿ ಆ ರಾಕ್ಷಸನಿಗೆ ನನ್ನ ದೇಹವನ್ನೇ ಅರ್ಪಿಸುತ್ತೇನೆ, ನಾನಿಲ್ಲದಿದ್ದರೂ ನೀನು ಇನ್ನೊಬ್ಬಳನ್ನು ಪರಿಗ್ರಹಿಸಿ ನಿನ್ನ ಗೃಹಸ್ಥಾಶ್ರಮ ಧರ್ಮವನ್ನು ಪೂರೈಸಬಹುದಾಗಿದೆ. ಪುರುಷರು ಬಹು ಪತ್ನಿಯರನ್ನು ಸ್ವೀಕರಿಸಿದರೆ ಪಾಪವಿಲ್ಲವು. ಸತಿಯು ಗಂಡನನ್ನು ಕಳೆದುಕೊಂಡ ಮೇಲೆ ಮತ್ತೊಬ್ಬನನ್ನು ವರಿಸಲಾಗದೆಂದು ಹೇಳಿದುದಾಗಿ ಮಹಾಭಾರತದ ಅರ್ವನೆ ೨೦ ಅಧ್ಯಾಯದಲ್ಲಿ ಸ್ತ್ರೀಯರಿಗೆ ಪುನರ್ವಿವಾಹ ಕೂಡದೆಂಬ ಅಭಿಪ್ರಾಯವು ಸ್ಪಷ್ಟವಾಗುತ್ತದೆ. ಹೀಗೆ ಪವಿತ್ರಗಳಾದ ಇಂಥ ಉಪಾಖ್ಯಾನಗಳನ್ನು ಅನೇಕವಾಗಿ ನೋಡುತ್ತ ಕೇಳುತ್ತ ಇದ್ದರೂ ಇವುಗಳನ್ನು ಅತಿಕ್ರಮಿಸಿ ಅಮಾರ್ಗದಲ್ಲಿ ಕಾಲಿಡುತ್ತ ಬಂದರೆ ಭಾರತಧರ್ಮವು ಬದುಕುವ ಬಗೆಯೆಂತು? ತಮ್ಮ ತಮ್ಮ ಧರ್ಮದಲ್ಲಿ ನಿರತರಾಗಿರುವುದು ಪ್ರತಿಯೊಬ್ಬ ಸ್ತ್ರೀಪುರುಷರ ಆದ್ಯಕರ್ತವ್ಯವಾಗಿದೆ. ಇದನ್ನು ತಿಳಿಯದೆ ಭಾರತಧರ್ಮವನ್ನುಲ್ಲಂಘನಮಾಡಿ ಒಬ್ಬ ಸ್ತ್ರೀಯಳು ಅನೇಕ ಪತಿಗಳನ್ನು ಅಂಗೀಕಾರ

ಮಾಡುತ್ತ ಹೋಗಿ ಎಲ್ಲ ಸ್ತ್ರೀಯರು ದುಷ್ಟರಾದರೆ, ಅಲ್ಲಿ ಹುಟ್ಟುವ ಸಂತತಿಯೂ ದುಷ್ಟವಾಗುವುದು. "ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣ ಸಂಕರಃ" ಎಂಬ ಗೀತಾವಾಕ್ಯಕ್ಕನುಗುಣವಾಗಿ ಸಾಂಕರ್ಯಕ್ಕೆ ಸ್ತ್ರೀಯರೇ ಮೂಲಕಾರಣರೆಂದು ಹೇಳುವಲ್ಲಿ ಅಭ್ಯಂತರವಿಲ್ಲ. ಹೀಗೆ ಸಾಮಾನ್ಯವಾಗಿ ಪುನರ್ವಿವಾಹವು ಭಾರತಧರ್ಮಕ್ಕೆ ವಿರೋಧವಾಗಿರುವುದಲ್ಲದೆ. ವೇದಾವಲಂಬಿಗಳಾದ ವೀರಶೈವರಿಗಂತೂ ಈ ವಿಧವಾವಿವಾಹವು ಅತ್ಯಂತ ವಿರೋಧವಾದುದು. ಲಿಂಗಾಂಗಿಯಾದ ಸ್ತ್ರೀಯರು ತಾವು ವರಿಸಿರುವ ಪತಿಯನ್ನೇ ಸಾಕ್ಷಾತ್ ಶಿವನನ್ನಾಗಿ ತಿಳಿದಿರಬೇಕು. ದುರ್ದೈವದಿಂದ ತನ್ನ ಗಂಡನು ಕಾಲವಶನಾದರೆ, ಆ ಸ್ಥಾನದಲ್ಲಿ ಮತ್ತೊಬ್ಬನನ್ನು ವರಿಸದೆ "ಸತೀಚಾಹಂ ಪತಿರ್ಲಿಂಗಂ" ಎಂಬುಕ್ತಿಯಂತೆ ತಾನು ಧರಿಸಿರುವ ಲಿಂಗವೇ ಪತಿಯೆಂದು ಭಾವಿಸಿ ಧ್ಯಾನಿಸುತ್ತಿರಬೇಕು.

ಮೃತೇ ಭರ್ತರಿ ಸಾ ಸಾಧ್ವೀ ಶಿವಚಿಂತಾಪರಾಯಣಾ ।
ಭೂಶಯ್ಯಾ ನಕ್ತಭೋಜೀಚ ಹ್ಯೇಕಾಹಾರೀ ಜಿತೇಂದ್ರಿಯಾ ।
ನಿತ್ಯಸ್ನಾನಾಽಚ್ಛಿನ್ನಕೇಶೀ ತ್ಯಕ್ತತಾಂಬೂಲಭೂಷಣಾ ।
ಮಿತನಿದ್ರಾ ಮಿತಾಹಾರೀ ಗಂಭೀರಾ ಮಿತಭಾಷಿಣೀ ।
ಇಂದುವಾರೇತು ವಿಧಿವದುಪವಾಸಂ ಶಿವಾರ್ಚನಂ ।
ಏವಂವಿಧೇನ ಶೀಲೇನ ನಯೇದಾಯುರನಾಕುಲಾ ।
ಪತಿಮನ್ಯಂ ನಗಚ್ಛೇತ ಗತಾಚೇನ್ನರಕಂ ವ್ರಜೇತ್ ॥

ಲಿಂಗಧಾರಿಣಿಯಾದ ಸ್ತ್ರೀಯಳು ತನ್ನ ಗಂಡನು ವಿಧಿವಶದಿಂದ ಮೃತನಾದರೆ ಮತ್ತೊಬ್ಬ ಪತಿಯನ್ನು ವರಿಸದೆ ಶಿವಧ್ಯಾನನಿರತಳಾಗಿಯೂ, ಜಿತೇಂದ್ರಿಯಳಾಗಿಯೂ, ಆಭರಣತಾಂಬೂಲಗಂಧಪುಷ್ಪ ಮೊದಲಾದ ಉತ್ತೇಜಕಪದಾರ್ಥಗಳಲ್ಲಿ ಉಪೇಕ್ಷೆಯುಳ್ಳವಳಾಗಿಯೂ, ರಾತ್ರಿ ಒಂದು ವೇಳೆ ಸಾತ್ವಿಕಭೋಜನವನ್ನು ಮಾಡುವವಳಾಗಿಯೂ, ಪ್ರತಿ ಸೋಮವಾರ ಶುದ್ಧೋಪವಾಸವನ್ನು ಮಾಡುವವಳಾಗಿಯೂ ಕೆಂಪು ಶೀರೆಯನ್ನುಟ್ಟು ತನ್ನ ಜೀವಯಾತ್ರೆಯನ್ನು ಕಳೆಯಬೇಕು. ಇದಕ್ಕೆ ವಿರುದ್ಧವಾಗಿ ಐಹಿಕೇಚ್ಛೆಯಿಂದ ಮತ್ತೊಬ್ಬನನ್ನು ವರಿಸಿದರೆ ಆಕೆಯು ಖಂಡಿತವಾಗಿಯೂ ನರಕವನ್ನು ಹೊಂದುವಳು. ಎಂದು ಶಿವಪ್ರಸಂಗರತ್ನಾಕರದಲ್ಲಿ ವೀರಶೈವವಿಧವಾಸ್ತ್ರೀಯಳ ಧರ್ಮವು ಸ್ಪಷ್ಟವಾಗಿ ಪ್ರತಿಪಾದಿಸಲ್ಪಟ್ಟಿದೆ.

ಹೀಗೆ ಅನೇಕ ಧರ್ಮಶಾಸ್ತ್ರಗಳು ವಿಧವಾವಿವಾಹವನ್ನು ನಿಷೇಧಿಸುತ್ತಿದ್ದರೂ, ಕೆಲವರು ತಾವು ಧರ್ಮಪ್ರಚಾರಕರೆಂಬ ನೆವದಿಂದ ಕೋಮಲವಾದ ವೀರಶೈವಸಮಾಜವೆಂಬ ಉಪವನದಲ್ಲಿ ಲಿಂಗಾಂಗಸಾಮರಸ್ಯ ಮುಕ್ತಿ ಘಾತುಕವಾದ ವಿಧವಾವಿವಾಹವೆಂಬ ಪಿಶಾಚಿಯನ್ನು ಅಟ್ಟಲು ಆತುರಪಡುತ್ತಿರುವುದನ್ನು ನೋಡಿದರೆ ಕಲಿಪ್ರಭಾವವನ್ನು ಎಷ್ಟು ವರ್ಣಿಸಿದರೂ ತೀರದಾಗಿದೆ.

## ದೇಶ ಪ್ರೇಮ

ನಮ್ಮ ಭಾರತಭೂಮಿಯು ವೇದಾಗಮೋಪನಿಷತ್ತುಗಳಿಗೆ ಸ್ಥಾನವೂ ಸ್ಮೃತಿ ಪುರಾಣೇತಿಹಾಸಗಳ, ಶಿಕ್ಷಾ ವ್ಯಾಕರಣಾದಿ ವೇದಾಂಗಗಳ, ಯೋಗ ಸಾಂಖ್ಯ ನ್ಯಾಯ ವೈಶೇಷಿಕ ಪೂರ್ವಮೀಮಾಂಸಾ ಉತ್ತರಮೀಮಾಂಸಾದಿ ಶಾಸ್ತ್ರಗಳ, ಆಯುರ್ವೇದ ಧನುರ್ವೇದಾದಿಗಳ, ಅನೇಕ ವಿಧವಾದ ಕಲೆಗಳ, ಯಾಗಾದಿ ಪುಣ್ಯಕರ್ಮಗಳ, ನಾನಾತರದ ಪುಣ್ಯಕ್ಷೇತ್ರಗಳ ಉತ್ಪತ್ತಿಗೆ ಸ್ಥಾನವೂ ಆಗಿರುತ್ತದೆಯಲ್ಲದೆ, ಅನೇಕವಿಧಗಳಾದ ವಸ್ತುಗಳಿಂದಲೂ, ಗಿರಿ ನದೀ ನದ ಸರೋವರಗಳಿಂದಲೂ, ಅರಣ್ಯಗಳಿಂದಲೂ, ಸಸ್ಯಗಳಿಂದಲೂ ಸಮೃದ್ಧವಾಗಿ ತನಗಿಂತ ಬೇರೆಯಾದ ಭೂಖಂಡಗಳಲ್ಲಿರುವ ಜನರ ಕಣ್ಮನಗಳನ್ನು ಆಕರ್ಷಿಸತಕ್ಕುದಾಗಿದೆ.

ನಮ್ಮ ಆರ್ಯರೆಲ್ಲರೂ ಪೂರ್ವಕಾಲದಲ್ಲಿ ಪುರುಷಾರ್ಥಗಳಿಗೋಸ್ಕರವೇ ಶೈವ, ವೈಷ್ಣವ ಮೊದಲಾದ ವೈದಿಕ ಮತಗಳನ್ನು ಆಶ್ರಯಿಸಿ, ವೇದವೇದಾಂಗಾದಿ ವಿದ್ಯೆಗಳನ್ನು ಅಭ್ಯಾಸಮಾಡುತ್ತ, ಪೂರ್ವಾಚಾರ್ಯರಿಂದ ಹೇಳಲ್ಪಟ್ಟಿರುವ ಸಿದ್ಧಾಂತಗಳಲ್ಲಿ ಶ್ರದ್ಧೆಯುಳ್ಳವರಾಗಿ, ಸ್ವಧರ್ಮಗಳನ್ನು ರಕ್ಷಿಸಿಕೊಳ್ಳುತ್ತ, ಅನ್ಯಧರ್ಮಗಳ ಗೋಜಿಗೆ ಹೋಗದೆ ಇರುತ್ತಿದ್ದರಲ್ಲದೆ, ಲೌಕಿಕ ಕಲಾಕೌಶಲ್ಯವುಳ್ಳವರೂ ಆರ್ಯರಿಗೆ ಯೋಗ್ಯಗಳೆನಿಸಿದ ವೇಷಭಾಷಾದಿಗಳುಳ್ಳವರೂ ಆಗಿ, ತಮ್ಮನ್ನು ಹಡೆದ ಭೂಮಾತೆಯಲ್ಲಿ ಭಕ್ತಿಶ್ರದ್ಧೆಗಳನ್ನು ವ್ಯಕ್ತಗೊಳಿಸುತ್ತ ಲೋಕಪ್ರಸಿದ್ಧರಾಗಿದ್ದರು.

ಈ ಕಾಲದಲ್ಲಾದರೂ ನಮ್ಮ ಆರ್ಯರಲ್ಲಿ ಕೆಲವರು ಪೂರ್ವಕಾಲದಲ್ಲಿದ್ದ ಆರ್ಯರಂತೆ ಇದ್ದೇ ಇರುವರು. ಆ ಮಹನೀಯರಿಂದಲೇ ಈವರೆಗೂ

ವೇದಶಾಸ್ತ್ರಪುರಾಣಾದಿಗಳೂ ಭಾರತ ಭೂಮಾತೆಯ ಕೀರ್ತಿಪ್ರತಿಷ್ಠೆಗಳೂ ರಕ್ಷಿಸಲ್ಪಡುತ್ತಿರುವವವೆಂದು ಹೇಳಿದರೆ ಅತಿಶಯೋಕ್ತಿಯಾಗುವುದಿಲ್ಲವು. ಆದರೆ ಕೆಲವರು ಈಗಿನ ರಾಜಭಾಷೆಯಾದ ಇಂಗ್ಲೀಷ್‌ನ ಅಭ್ಯಾಸ ಮೂಲಕ ವೇದವೇದಾಂಗಾದಿ ವಿದ್ಯೆಗಳಲ್ಲೂ, ತಮ್ಮ ಧರ್ಮಗಳಲ್ಲೂ, ಆರ್ಯರಿಗೆ ಯೋಗ್ಯಗಳಾದ ವೇಷಭಾಷೆ ಮೊದಲಾದವುಗಳಲ್ಲಿಯೂ ಜುಗುಪ್ಸೆಯುಳ್ಳವ ರಾಗಿ ಯಾವ ಸಮಯಗಳಲ್ಲಾದರೂ ಅನ್ಯಭಾಷೆಯನ್ನೇ ಬಳಸುತ್ತ, ಆರ್ಯರ ಕರ್ಮಾಂಗವೆನಿಸಿದ ಶಿಖೆಯನ್ನು ತೆಗೆದುಬಿಟ್ಟು; ತಲೆತುಂಬ ಮೊಟಗಾದ ಕೇಶಗಳನ್ನು ಬಿಟ್ಟು; ಸ್ತ್ರೀಯರಂತೆ ಬೈತಲೆಯನ್ನು ತೆಗೆದುಕೊಳ್ಳುತ್ತ, ಮುಖಕ್ಷೌರ ಪ್ರಿಯರಾಗಿ ತಮಗೆ ತಾವೇ ಕ್ಷೌರಮಾಡಿಕೊಳ್ಳುತ್ತ, ಕ್ಷೌರ ದಲ್ಲಾದರೂ ತಿಥಿವಾರಾದಿಗಳನ್ನು ದೂರೀಕರಿಸಿ, ಪವಿತ್ರತಮವಾದ ಯಜ್ಞೋಪವೀತಧಾರಣವನ್ನೂ ಲಿಂಗಧಾರಣವನ್ನೂ ಉಪೇಕ್ಷಿಸುತ್ತ, ಹಣೆಯಲ್ಲಿ ನಾಮ, ಮುದ್ರೆ, ಭಸ್ಮ, ಗಂಧಾಕ್ಷತ ಮೊದಲಾದವುಗಳನ್ನು ಧಾರಣೆಮಾಡಿಕೊಳ್ಳುವುದರಿಂದಅವಮಾನವುಂಟಾಗುವುದೆಂದು ಭಾವಿಸುತ್ತ ಸ್ವದೇಶೀಯ ವಸ್ತುಗಳ ಉಪಯೋಗದಲ್ಲಿ ಇಚ್ಛೆಯುಳ್ಳವರಾಗದೆ, ಪಾಶ್ಚಿ ಮಾತ್ಯರಿಂದ ರಚಿಸಲ್ಪಟ್ಟಿರುವ ಪದಾರ್ಥಗಳ ಉಪಯೋಗದಲ್ಲೇ ಕುತುಕಿ ಗಳಾಗಿ, ಸಂಧ್ಯಾವಂದನ ಶಿವಪೂಜಾದಿ ಕರ್ಮಗಳಿಗೆ ತಿಲಾಂಜಲಿಯನ್ನಿತ್ತು ಸ್ವೇಚ್ಛಾಚಾರಶೀಲರಾಗುತ್ತಿರುವರು. ಇದರಿಂದ ಮುಂದಣವರು ಈ ನಡವಳಿ ಕೆಗಳನ್ನು ಅನುಸರಿಸಲು ಅವಕಾಶವು ದೊರೆತು, ಕ್ರಮದಿಂದ ಆರ್ಯಧರ್ಮ ಗಳು ಕಳೆಗುಂದಿ ತಮ್ಮ ಜನನಿಯಾದ ಭಾರತಭೂದೇವಿಯಲ್ಲಿ ತಿರಸ್ಕಾರ ವನ್ನು ತೋರಿಸಿದಂತೆ ಆಗುವುದು.

ನಮ್ಮ ಆರ್ಯರಲ್ಲಿ ಯಾರು, ತಮ್ಮ ರಕ್ತಪ್ರವಾಹ ಗುಣವನ್ನು ಮರೆತು, ಯಾವ ಪಾಶ್ಚಿಮಾತ್ಯರ ನಡವಳಿಕೆಗಳನ್ನು ಅನುಕರಿಸುತ್ತಿರುವರೋ ಆ ಪಾಶ್ಚಿಮಾತ್ಯರಲ್ಲನೇಕರು ಈ ಭಾರತಭೂಮಿಗೆ ಬಂದು ಇಲ್ಲಿ ಸ್ಥಿರ ಕುಟುಂಬಿಗಳಾಗಿ ವಾಸಮಾಡುತ್ತಿದ್ದಾಗ್ಯೂ ಅವರು ನಮ್ಮ ಭಾಷೆಯನ್ನೂ, ವೇಷವನ್ನೂ, ಧರ್ಮಗಳನ್ನೂ ಅನುಸರಿಸಿ ಭಾರತಭೂಮಿಯ ಮಕ್ಕಳೆನಿಸಿ ಕೊಳ್ಳಲಿಲ್ಲವು. ಆರ್ಯಪುರುಷನಂತೆ ಪಂಚೆಯನ್ನುಡುವ, ರುಮಾಲನ್ನು ಧರಿ ಸುವ, ಯಜ್ಞೋಪವೀತಾದಿಗಳನ್ನು ಹಾಕುವ, ನಾಮ ಭಸ್ಮಾದಿಗಳನ್ನು

ಹಣೆಯಲ್ಲಿ ಹಚ್ಚುವ, ಯಾವ ಪಾಶ್ಚಿಮಾತ್ಯಪುರುಷನನ್ನಾದರೂ ಆರ್ಯಸ್ತ್ರೀಯಂತೆ ಶೀರೆಯನ್ನುಟ್ಟು ಕುಪ್ಪಸವನ್ನು ತೊಟ್ಟು, ಹರಿದ್ರಾದಿ ಮಂಗಲದ್ರವ್ಯವನ್ನು ಲೇಪಿಸಿಕೊಳ್ಳುವ ಯಾವ ಪಾಶ್ಚಿಮಾತ್ಯಸ್ತ್ರೀಯನ್ನಾದರೂ ನಾವು ನೋಡಿರುತ್ತೇವೆಯೋ? ಪಾಶ್ಚಿಮಾತ್ಯರು ಯಾವ ದೇಶಕ್ಕೆ ಹೋಗಿ ಅಲ್ಲಿ ವಾಸಮಾಡುತ್ತಿದ್ದಾಗ್ಯೂ ತಮ್ಮ ಭಾಷೆ, ವೇಷ ಮೊದಲಾದ ನಡವಳಿಕೆಗಳನ್ನು ರಕ್ಷಿಸಿಕೊಳ್ಳುವರಲ್ಲದೆ, ಅನ್ಯರ ಭಾಷೆ, ವೇಷ ಮೊದಲಾದವುಗಳನ್ನು ತಾವು ಹೊಂದುವುದಿಲ್ಲ. ಈ ಭಾರತ ಭೂಗರ್ಭದಲ್ಲೇ ಜನಿಸಿ ಇಲ್ಲೇ ವಾಸಿಸುತ್ತಿರುವ ನಮ್ಮ ಜನರಲ್ಲಿ ಕೆಲವರು ಪಶ್ಚಿಮ ದೇಶಗಳಿಂದ ಇಲ್ಲಿಗೆ ಬರುತ್ತಿರುವ ಜನರ ನಡೆನುಡಿ ಮೊದಲಾದವುಗಳನ್ನು ಅನುಸರಿಸುತ್ತಿರುವುದು ಸರ್ವೇದಾಶ್ಚರ್ಯಕರವಾಗಿದೆ. ನಮ್ಮಾ ಭಾರತಭೂಮಿಯಲ್ಲಿ ಬಹುಕಾಲ ವಾಸಿಸುತ್ತಿರುವ ಪರಮ್ಮರ್ದೀಯರ ಸ್ವಧರ್ಮಗಳನ್ನು ಕಾಪಾಡಿಕೊಳ್ಳುತ್ತಿರುವುದಿಲ್ಲವೆ? ನಮ್ಮ ಮನೆಯ ಸ್ವತ್ತು ಅಗ್ನಿಯಿಂದ ಅಥವಾ ಚೋರಾದಿಗಳಿಂದ ನಾಶಗೊಳಿಸಲ್ಪಟ್ಟರೂ, ಅಪಹರಿಸಲ್ಪಟ್ಟರೂ ಆ ವಿಪತ್ತನ್ನು ದೈವಿಕವೆನ್ನಬಹುದು. ನಮ್ಮ ಧರ್ಮಸ್ವತ್ತನ್ನು ನಾವೇ ಕಳೆದುಕೊಂಡರೆ ಏನನ್ನಬಹುದು? ಆದುದರಿಂದ ಅಂಥವರು ಸಕಲ ಧರ್ಮೋತ್ತಮಗಳೆನಿಸಿರುವ ನಮ್ಮ ಆರ್ಯಧರ್ಮಗಳೇ ನಮಗೆ ಸ್ವಧರ್ಮಗಳೆಂದೂ, ಆರ್ಯ ವೇಷಭಾಷೆಗಳೇ ಸ್ವವೇಷ ಭಾಷೆಗಳೆಂದೂ ಅವನ್ನು ರಕ್ಷಿಸಿಕೊಳ್ಳುವುದರಲ್ಲಿ ಪ್ರಯತ್ನಶೀಲರಾಗುತ್ತ ಭಗವತ್ಕೃಪೆಗೂ, ನಮ್ಮ ಭಾರತಮಾತೆಯ ಕೃಪೆಗೂ ಪಾತ್ರರಾಗಿ ನಿಜದೇಶಪ್ರೇಮಶಾಲಿಗಳೆಂದು ಖ್ಯಾತರಾಗಿ ಬಾಳಲಿ.

## ಸಂಪದ್ವಿನಿಯೋಗ

ಪ್ರಪಂಚದಲ್ಲಿ ಅನರ್ಘ್ಯಗಳಾದ ವಜ್ರ, ವೈಢೂರ್ಯ ಮುಂತಾದ ಐಶ್ವರ್ಯಗಳು ಹೇರಳವಾಗಿದ್ದರೂ ಸದುಪಯೋಗವಿಲ್ಲದ ಅವುಗಳೆಲ್ಲವೂ ದುಃಖ ಸಾಧನಗಳಾಗಿಯೇ ಪರಿಣಮಿಸುವುವಲ್ಲದೆ ಆತ್ಮೋದ್ಧಾರ ಸಾಧಕಗಳಾಗಿ ಪರಿಣಮಿಸಲಾರವು. ವಿವೇಕವಿಲ್ಲದೆ ಭೋಗ್ಯ ಪದಾರ್ಥಗಳನ್ನು ಎಷ್ಟೆಷ್ಟು ಅಪೇಕ್ಷಿಸುತ್ತ ಹೋಗುತ್ತೇವೆಯೋ ಅಷ್ಟಷ್ಟು ಆಶಾಪಾಶವು ಭದ್ರವಾಗುತ್ತ ಹೋಗುತ್ತದೆ. ‘ಬೇಕಾದಷ್ಟು ನಿಧಿಯು ನಮ್ಮಲ್ಲಿ ಶೇರಿರುವದು ಇನ್ನೇನೂ

ಶೇರಬೇಕಾಗಿಲ್ಲವು' ಎಂಬ ನಿರಾಶಾಬುದ್ಧಿಯನ್ನು ಮಾತ್ರ ಅವು ಎಂದೂ ಹುಟ್ಟಿಸಲಾರವು. ಇದರಿಂದ ರೋಗಿಗಳಿಗೆ ರೋಗವು ಹೆಚ್ಚಿದ ಹಾಗೆಲ್ಲಾ ದಾಹವು ಹೆಚ್ಚುವಂತೆ ಐಶ್ವರ್ಯವು ಹೆಚ್ಚುತ್ತಹೋದಹಾಗೆಲ್ಲಾ ಆಶೆಯೆಂಬ ಹುಚ್ಚು ದಾಹವು ಎದ್ದು ಉಚ್ಚಸ್ಥಿತಿಯಲ್ಲಿರುವ ಮನುಷ್ಯನನ್ನು ನೀಚಸ್ಥಿತಿ ಗೊಯ್ಯುತ್ತದೆ. ವಿವೇಕಿಗಳು ಇಂಥ ಐಶ್ವರ್ಯವನ್ನು ಅಸ್ಥಿರವೆಂದು ತಿಳಿದು ಇದರ ತಾಪಕ್ಕೆ ಸಿಕ್ಕದೆ ವಿವೇಕದಿಂದ ಆ ದ್ರವ್ಯವನ್ನು ಸಾಧುಸತ್ಪುರುಷರ ಸೇವೆಗೂ, ವಿದ್ಯಾಲಯಗಳಿಗೂ, ಔಷಧಾಲಯಗಳಿಗೂ, ಬಡಬಗ್ಗರಿಗನು ಕೂಲವಾಗುವಂತೆ ವಾಪೀಕೂಪತಟಾಕಗಳ ರಚನೆಗೂ ಉಪಯೋಗಿಸುತ್ತ ತಾವು ಆರ್ಜಿಸಿದ ಆ ದ್ರವ್ಯದಿಂದ ಸ್ಥಿರವಾದ ಕೀರ್ತಿಯನ್ನು ಪಡೆದಿರುತ್ತಾರೆ. ಇನ್ನು ಕೆಲವರು ಯಾವಾಗಲೂ ಲಕ್ಷ್ಮಿಯು ತಮ್ಮಾಧೀನದಲ್ಲಿಯೇ ಇರುವ ಳೆಂದು ಭ್ರಮಿಸಿ ಲೋಭಬುದ್ಧಿಯಿಂದ ಅದನ್ನು ಯಾವುದೊಂದು ಪುಣ್ಯ ಕಾರ್ಯಗಳಿಗೂ ಉಪಯೋಗಿಸದೆ ತಾವೂ ಸುಖಾನುಭವಮಾಡದೆ ಇರು ತ್ತಾರೆ. ಒಂದಾನೊಂದು ಸಮಯದಲ್ಲಿ ಆ ಲಕ್ಷ್ಮಿಯು ಜುಗುಪ್ಸೆಗೊಂಡು ಅವರನ್ನು ಬಿಟ್ಟುಹೋಗುವುದರಿಂದ ಎಂದಿನಂತೆ ದರಿದ್ರರಾಗಿ ಹೋಗಿರು ತ್ತಾರೆ. ಈಗ ಐಶ್ವರ್ಯವಂತನಾದವನು ನಾಳೆ ದರಿದ್ರನಾಗಬಹುದು. ಇಂದು ದರಿದ್ರನಾದವನು ನಾಳೆ ಐಶ್ವರ್ಯವಂತನಾಗಬಹುದು. ಐಶ್ವರ್ಯ ದಾರಿದ್ರ್ಯ ಗಳೆಂಬವುಗಳು ಯಾರಲ್ಲಿಯೂ ಸ್ಥಿರಗೊಂಡಿರಲಾರವು. ಪೂರ್ವಪುಣ್ಯ ವಿಶೇಷ ದಿಂದ ಲಕ್ಷ್ಮೀಕಟಾಕ್ಷವನ್ನು ಪಡೆದ ವಿವೇಕಿಗಳಾದ ಧನಿಕರು ತಮ್ಮಲ್ಲಿರುವ ದ್ರವ್ಯದಲ್ಲಿ ಕೆಲವು ಅಂಶಗಳನ್ನು ಪುಣ್ಯಕಾರ್ಯಗಳಲ್ಲಿ ವಿನಿಯೋಗಿಸಿದ್ದಾದರೆ ಅವರ ಯಶಃಕಾಯವು ಪ್ರಪಂಚವಿರುವವರಿವಿಗೂ ಸ್ಥಿರವಾಗಿದ್ದು ಭಗ ವಂತನು ಅಂಥ ಪುಣ್ಯಾತ್ಮರಿಗೆ ಭೋಗಮೋಕ್ಷಗಳನ್ನು ದಯಪಾಲಿಸುವನು.

ದಾನಂ ಭೋಗೋನಾಶಸ್ತಿ ಸ್ರೋಗತಯೋ ಭವಂತಿ ವಿತ್ತಸ್ಯ ।
ಯೋನದದಾತಿ ನ ಭುಂಕ್ತೇ ತಸ್ಯ ತೃತೀಯಾಗತಿರ್ಭವತಿ ॥

ಪೌರ್ವಿಕರಿಂದ ದಾನ-ಭೋಗ-ನಾಶ-ಎಂದು ದ್ರವ್ಯಕ್ಕೆ ಮೂರು ಗತಿ ಗಳು ಕಲ್ಪಿಸಲ್ಪಟ್ಟಿವೆ. ಇವುಗಳಲ್ಲಿ ಮೊದಲನೆಯದು ಉತ್ತಮವು, ಎರಡನೆ ಯದು ಮಧ್ಯಮವು. ಮೂರನೆಯದು ಅಧಮವು. ವಿವೇಕಮತಿಗಳಾದ ಆಸ್ತಿಕರು ತಮ್ಮ ದ್ರವ್ಯವನ್ನು ಬಹಳ ಮಾಡಿ ಪುಣ್ಯಕಾರ್ಯಕ್ಕೆ ವಿನಿಯೋಗಿ

ಸುವರು. ಕೇವಲ ಐಹಿಕಾಪೇಕ್ಷಿಗಳು ತಮ್ಮ ದ್ರವ್ಯವನ್ನು ತಮ್ಮ ಭೋಗಕ್ಕಾಗಿ ಉಪಯೋಗಿಸುವರು. ಐಹಿಕಾಮುಷ್ಮಿಕಾಪೇಕ್ಷಿಗಳಲ್ಲದ ಲೋಭಿಗಳಲ್ಲಿರುವ ದ್ರವ್ಯವು ಎಷ್ಟು ಭದ್ರವಾಗಿ ಇಡಲ್ಪಟ್ಟಿದ್ದರೂ ಒಂದಾನೊಂದು ಕಾಲದಲ್ಲಿ ಇದ್ದೆಡೆಯಲ್ಲಿಯೇ ನಾಶವಾಗಿಹೋಗುವುದು. ವಿವೇಕಿಗಳಾದ ಮಾನವರ ಸ್ವಾಧೀನದಲ್ಲಿದ್ದ ದ್ರವ್ಯವು ಪರೋಪಕಾರಕ್ಕೂ ಆತ್ಮಭೋಗಕ್ಕೂ ಉಪಯೋಗವಾಗುವುದರಲ್ಲಿ ಸಂಶಯವಿಲ್ಲ. ಪುಣ್ಯಕಾರ್ಯಕ್ಕೂ ಆತ್ಮಸುಖಕ್ಕೂ ದ್ರವ್ಯವನ್ನು ಉಪಯೋಗಮಾಡದ ಲೋಭಿಯನ್ನು ನೀತಿಗಾರರು ನಪುಂಸಕನಿಗೆ ಹೋಲಿಸುತ್ತಾರೆ. ನಪುಂಸಕನಾದ ಮನುಷ್ಯನು ತನ್ನಲ್ಲಿರುವ ಭೋಗ್ಯವಸ್ತುವನ್ನು ತಾನು ಉಪಯೋಗಿಸುವುದಿಲ್ಲ. ಇನ್ನೊಬ್ಬರಿಗೆ ಕೊಡಲು ಇಷ್ಟಪಡುವುದಿಲ್ಲ. ತನ್ನದೆಂಬ ಅಭಿಮಾನದಿಂದ ಸುಮ್ಮನೆ ನೋಡುತ್ತಿರುವಲ್ಲಿ ಆ ಭೋಗ್ಯವಸ್ತುವು ಯಾರಿಂದಲೋ ಅಪಹರಿಸಲ್ಪಡುವಂತೆ, ಲೋಭಿಯು ಸಹ ಪೆಟ್ಟಿಗೆಯೊಳಗಿರುವ ಲಕ್ಷ್ಮಿಯ ಸೌಂದರ್ಯವನ್ನು ಮಾತ್ರ ನೋಡುತ್ತಿರುವನಲ್ಲದೆ ಅದನ್ನು ತೆಗೆದು ಪುಣ್ಯಕಾರ್ಯಕ್ಕಾಗಲಿ ಆತ್ಮಭೋಗಕ್ಕಾಗಲಿ ಉಪಯೋಗಿಸಲು ಶಕ್ತಿಯನ್ನು ಪಡೆಯದೆ ಇದ್ದೆಡೆಯಲ್ಲಿಯೇ ಆ ಲಕ್ಷ್ಮಿ ಯಾರಿಂದಲೋ ಅಪಹೃತವಾಗಿ ಹೋಗುತ್ತದೆ. ಮುಖ್ಯವಾಗಿ ತಾವು ಗಳಿಸಿದ ಸಂಪತ್ತನ್ನು ಹೇಗೆ ಉಪಯೋಗಿಸಬೇಕೆಂಬುದು ಗೊತ್ತಿಲ್ಲದೆ ಹೋದರೆ ಸುಖಕ್ಕೆ ಸಾಧನವೆಂದು ತಿಳಿದುಕೊಂಡ ಐಶ್ವರ್ಯವು ದುಃಖಕ್ಕೂ ಸಾಧನವಾಗದಿರದು. ಇದಕ್ಕೆ ಒಂದು ಇತಿಹಾಸವುಂಟು. ಗ್ರಿಕ್ ದೇಶದ ಒಬ್ಬ ಮಹರಾಜನು ತನ್ನಲ್ಲಿರುವ ಸಂಪತ್ತಿಗೆ ತೃಪ್ತಿಪಡದೆ ಪ್ರಪಂಚದಲ್ಲಿ ತನಗೆ ಸಮಾನರಾದ ಶ್ರೀಮಂತರೇ ಇಲ್ಲವೆನಿಸಿಕೊಳ್ಳಬೇಕೆಂಬ ದುರಾಶೆಯಿಂದೊಡಗೂಡಿ ಗಿರಿಗುಹೆಗಳನ್ನು ಪ್ರವೇಶಿಸಿ ತಪಸ್ಸನ್ನು ಮಾಡಿ ದೇವರನ್ನು ಪ್ರತ್ಯಕ್ಷಮಾಡಿಕೊಂಡು ತಾನು ಕೈಯಿಂದ ಏನನ್ನು ಮುಟ್ಟುವನೋ ಅದೆಲ್ಲವೂ ಭಂಗಾರವೇ ಆಗಿಹೋಗುವಂತೆ ಆ ದೇವರಿಂದ ವರವನ್ನು ಪಡೆದನು. ಮುಟ್ಟಿದ ಪದಾರ್ಥವೆಲ್ಲವೂ ಭಂಗರವಾಗುವುದೆಂಬ ಸಂತೋಷದಿಂದ ತನ್ನ ಅರಮನೆಗೆ ಬಂದು ಮೇಲಕ್ಕೆ ಹತ್ತುವಾಗ ಹಂತಗಳ ಎರಡುಪಾರ್ಶ್ವಗಳಲ್ಲಿ ನಿಲ್ಲಿಸಿದ್ದ ಕಬ್ಬಿಣದ ಸಲಾಕಿಗಳಮೇಲೆ ಕೈಯಿಡಲು ಎರಡು ಸಲಾಕಿಗಳೂ ಈತನ ಹಸ್ತಸ್ಪರ್ಶದಿಂದ ಬಂಗಾರದ ಸಲಾಕಿಗಳಾದವು. ಆತನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಮಹಡಿಮೇಲೆ

ಅಲಂಕರಿಸಿದ್ದ ಕಬ್ಬಿಣದ ಮಂಚದಮೇಲೆ ಕೈಯಿಟ್ಟು ಕುಳಿತುಕೊಳ್ಳುವುದ ರೊಳಗಾಗಿ ಆ ಮಂಚವೆಲ್ಲವೂ ಬಂಗಾರವಾಗಿಹೋಯಿತು. ತಾನು ವಿಹರಿಸುವ ಉದ್ಯಾನವನಕ್ಕೆ ಹೋಗಿ ಒಂದು ಗುಲಾಬಿಯ ಹೂವನ್ನು ಕೈಯಲ್ಲಿ ತೆಗೆದುಕೊಂಡನು. ಅದು ಸಹ ಆತನ ಹಸ್ತಸ್ಪರ್ಶದಿಂದ ಭಂಗಾರವಾಯಿತು. ನೋಡುವುದಕ್ಕೆ ಮನೋಹರವಾದರೂ ಮೊದಲಿದ್ದ ವಾಸನೆಯೆಲ್ಲವೂ ಹೊರಟುಹೋಗಿ ನಿರ್ಗಂಧಕುಸುಮವಾಗಿ ಪರಿಣಮಿಸಿದುದರಿಂದ ಸ್ವಲ್ಪ ಖೇದವೆನಿಸಿತು. ಅಷ್ಟರಲ್ಲಿಯೇ ಬಹಳವಾಗಿ ಹಸಿವು ಉಂಟಾಗಿ ಸಮೀಪದಲ್ಲಿರುವ ತನ್ನ ಪುತ್ರಿಯನ್ನು ಕುರಿತು ಸೇವಕರಿಗೆ ಫಲಾಹಾರವನ್ನು ತರಹೇಳಿದನು. ತನ್ನೆದುರಿಗೆ ತಂದಿಟ್ಟ ಫಲಾಹಾರವನ್ನು ಕೈಯಿಂದ ಮುಟ್ಟಿದ ಕ್ಷಣದಲ್ಲಿಯೇ ಆ ಫಲಾಹಾರಗಳೆಲ್ಲವೂ ಚಿನ್ನದ ಗಟ್ಟಿಗಳಾದವು. ಸ್ವಲ್ಪ ನೀರನ್ನಾದರೂ ಕುಡಿದು ಹಸಿವನ್ನು ನೀಗಿಸಿಕೊಳ್ಳೋಣವೆಂದು ನೀರಿನ ತಂಬಿಗೆಯನ್ನು ಕೈಗೆ ತೆಗೆದುಕೊಳ್ಳಲಾಗಿ ಆ ತಂಬಿಗೆಯೂ ಮತ್ತು ನೀರೂ ಚಿನ್ನದ ಮುದ್ದೆಯಾದವು. ಅನಂತರ ತನ್ನ ಸಮೀಪದಲ್ಲಿರುವ ಪ್ರೇಮ ಪುತ್ರಿಯನ್ನಾದರೂ ಆಲಿಂಗಿಸಿ ಸ್ವಲ್ಪ ಸಂತೋಷಗೊಳ್ಳೋಣವೆಂದು ಪುತ್ರಿಯನ್ನಾಲಿಂಗಿಸಹೋದನು. ಆಗಲೇ ಆಕೆಯ ಶರೀರವೆಲ್ಲ ಭಂಗಾರದ ಮೂರ್ತಿಯಾಗಿ ಪರಿಣಮಿಸಿತು. ಹೀಗೆ ಮುಟ್ಟಿದುದೆಲ್ಲವೂ ಚಿನ್ನವಾದುದರಿಂದ ಹೊಟ್ಟೆಗೆ ಅನ್ನೋದಕವೂ ಸಹ ಇಲ್ಲದಂತಾಗಿ ಬಹಳವಾಗಿ ಪರಿತಪಿಸುತ್ತ ದೇವರಿಗೆ ಮರೆಹೊಕ್ಕು ತನ್ನ ಕಷ್ಟವನ್ನು ಪರಿಹರಿಸಿಕೊಂಡನು.

ಆದುದರಿಂದ ತನ್ನಲ್ಲಿ ದ್ರವ್ಯವು ಎಷ್ಟು ಹೆಚ್ಚಿದ್ದರೂ ವಿನಿಯೋಗ ಕೌಶಲವನ್ನು ಪಡೆಯದಿದ್ದರೆ ಅದೇ ದ್ರವ್ಯವು ತನಗೆ ದುಃಖವನ್ನುಂಟು ಮಾಡದಿರಲಾರದೆಂಬುದಕ್ಕೆ ಈ ಕಥೆಯು ಒಂದು ದೊಡ್ಡ ಉದಾಹರಣೆಯಾಗಿದೆ.

ಜನಯಂತ್ಯಾರ್ಜನೇ ದುಃಖಂ ತಾಪಯಂತಿ ವಿಪತ್ತಿಷು ।
ಮೋಹಯಂತಿ ಸಮೃದ್ಧೌ ಚ ಕಥಮರ್ಥಾಸ್ಸುಖಾವಹಾಃ ॥

ದ್ರವ್ಯವು ಗಳಿಸುವಾಗ ದುಃಖವನ್ನುಂಟುಮಾಡುತ್ತದೆ. ಗಳಿಸಿದ ದ್ರವ್ಯವು ಕಳೆದುಹೋದರೆ ಸಂತಾಪವನ್ನುಂಟುಮಾಡುತ್ತದೆ. ಆ ದ್ರವ್ಯವು ಹೆಚ್ಚುತ್ತ ಹೋದಹಾಗೆಲ್ಲ ಮನುಷ್ಯರನ್ನು ಕರ್ತವ್ಯಾಕರ್ತವ್ಯ ವಿಮುಖ

ರನ್ನಾಗಿ ಮಾಡುತ್ತದೆ. ಆದುದರಿಂದ ಆದ್ಯಂತದಲ್ಲಿಯೂ ದ್ರವ್ಯದಿಂದ ಸುಖ ವೆಂಬುವುದು ಎಷ್ಟು ಮಾತ್ರವೂ ಇಲ್ಲವೆಂದು ನೀತಿಗಾರನು ಹೇಳುತ್ತಾನೆ. ಇವನ್ನೆಲ್ಲಾ ಪರ್ಯಾಲೋಚಿಸಿದರೆ ಐಶ್ವರ್ಯವೇನೋ ಸೌಖ್ಯಸಾಧನವಾಗಿದ್ದರೂ ಅದೊಂದೇ ಜೀವಿತದ ಮುಖ್ಯ ಧ್ಯೇಯವೆಂದು ತಿಳಿಯುವುದು ವಿವೇಕಿಗಳ ಕರ್ತವ್ಯವಲ್ಲ. ದ್ರವ್ಯವನ್ನಾರ್ಜಿಸಿ ಅದರಲ್ಲಿ ಕೆಲವು ಭಾಗವನ್ನು ಲೋಕ ಕಲ್ಯಾಣ ಕಾರ್ಯಕ್ಕೂ ಕೆಲವನ್ನು ತನ್ನ ಸುಖಾನುಭವಕ್ಕೂ ಉಪಯೋಗಿ ಸುತ್ತ ಲೋಕದಲ್ಲಿ ಪ್ರತಿಷ್ಠೆಯನ್ನು ಪಡೆಯುವದರ ದ್ವಾರಾ ಭಗವಂತನ ಪ್ರೇಮಕ್ಕೆ ಪಾತ್ರರಾಗುವಂತೆ ಮಾಡಿಕೊಳ್ಳುವುದೇ ಸಂಪತ್ತಿನ ಫಲವಾಗಿದೆ. ಇದಿಲ್ಲದೆ ತನ್ನ ಹೊಟ್ಟೆಗೂ ಬಟ್ಟೆಗೂ ಭಗವತ್ಸಂಬಂಧಿಯಾದ ಪುಣ್ಯಕಾರ್ಯ ಗಳಿಗೂ ಯಾವುದೊಂದಕ್ಕೂ ಉಪಯೋಗಿಸದೆ ಹಗಲಿರುಳೂ ಕೇವಲ ಸಂಗ್ರ ಹದಲ್ಲಿ ಮಾತ್ರ ಲೋಲನಾಗಿದ್ದರೆ ಅಂಥವನು ಮಧ್ಯಪಾನದ ಅಭ್ಯಾಸವನ್ನು ಮಾಡಿದವನು ಎಷ್ಟು ಮದ್ಯವನ್ನು ಪಾನಮಾಡಿದರೂ ಪುನಃ ಪುನಃ ಪಾನಾ ಸಕ್ತಿಯೇ ಹೆಚ್ಚುತ್ತ ಆ ಮಿತಿಮೀರಿದ ಮದ್ಯಪಾನದಿಂದ ಬುದ್ಧಿವಿವೇಕಾದಿ ಗಳು ಹಾಳಾಗಿಹೋಗಿ ದುಃಖಕ್ಕೀಡಾಗುವಂತೆ ದ್ರವ್ಯದ ಅಮಲಿನಲ್ಲಿರುವ ಲೋಭಿಯು ಸಹ ಒಂದುದಿವಸ ಲಕ್ಷ್ಮೀಕಟಾಕ್ಷದಿಂದ ದೂರನಾಗಿ ಕಷ್ಟ ಕ್ಕೀಡಾಗದಿರಲಾರನು. ಆದುದರಿಂದ ದ್ರವ್ಯವನ್ನಾರ್ಜಿಸುವ ಶಕ್ತಿಯನ್ನು ಪಡೆದಿದ್ದರೂ ಆರ್ಜಿಸಿದ ದ್ರವ್ಯವನ್ನು ವಿನಿಯೋಗಿಸುವ ಪ್ರೌಢಿಮೆಯನ್ನು ಪಡೆಯದವನು ನಿಜವಾಗಿಯೂ ಮೋಸಹೋಗುವನು.

## ಗುರುಪ್ರಭಾವ

ಈ ಪ್ರಪಂಚಲ್ಲಿ ಅನೇಕಾನೇಕಮತಗಳು ಬಹುಕಾಲದಿಂದ ಸ್ಥಾಪಿತ ಗಳಾಗಿದ್ದು ಒಂದೊಂದು ಮತವನ್ನು ಒಬ್ಬೊಬ್ಬ ಮಹನೀಯರು ಸ್ಥಾಪಿಸಿರು ತ್ತಾರೆ. ಆ ಮಹನೀಯರು ನೆಲೆಗೊಳಿಸಿದ ಸಿದ್ಧಾಂತದಂತೆ ವರ್ತಿಸುವದು ಆಯಾ ಮತಾನುಯಾಯಿಗಳ ಪ್ರಥಮಕರ್ತವ್ಯವಾಗಿರುವಂತೆ, ಪ್ರತಿಯೊಂದು ಮತದವರು ತಮ್ಮ ತಮ್ಮ ಮೂಲಾಚಾರ್ಯರು ಸ್ಥಿರಗೊಳಿಸಿರುವ ಧರ್ಮ ನಿಯಮಗಳನ್ನು ಅಕ್ಷರಶಃ ಪಾಲಿಸುತ್ತ ಅಸಾಧಾರಣವಾದ ಗುರುಭಕ್ತಿಯಿಂ ದೊಡಗೂಡಿ ಮೆರೆಯುತ್ತಿದ್ದಾರೆ. ಇವರೀ ಪ್ರಜ್ವಲತೆಗೆ ಗುರುಭಕ್ತಿಯೇ

ಮೂಲಕಾರಣವಾಗಿದೆ. ಗುರುವು ಸಾಮಾನ್ಯವಾದ ವ್ಯಕ್ತಿಯಲ್ಲ. ಸಂಸಾರ ಸಮುದ್ರದಲ್ಲಿ ಬಿದ್ದು ತೇಲುತ್ತ ಮುಳುಗುತ್ತ ದುಃಖಪಡುತ್ತಿರುವ ಮಾನವ ಪ್ರಾಣಿಗಳನ್ನು ತನ್ನ ಉಪದೇಶವೆಂಬ ನೌಕೆಯಿಂದ ದಾಟಿಸತಕ್ಕ ಮಹಾ ನಾವಿಕನಾಗಿದ್ದಾನೆ. ಇಂಥ ಅದ್ಭುತಸಾಮರ್ಥ್ಯವು ಶ್ರೀಗುರುವನ್ನು ಬಿಟ್ಟು ಇನ್ನಾರಲ್ಲಿಯೂ ವಾಸವಾಗಿರುವುದಿಲ್ಲವೆಂದು ಘಂಟಾಘೋಷವಾಗಿ ಹೇಳ ಬಹುದಾಗಿದೆ. ಆದುದರಿಂದಲೇ ಶ್ರುತಿದೇವಿಯು "ನಗುರೋರಧಿಕಂ" "ನಾಸ್ತಿತತ್ತ್ವಂಗುರೋಃಪರಂ" ಇತ್ಯಾದಿ ವಾಕ್ಯಗಳಿಂದ ಗುರುವಿನ ಸರ್ವೋ ತ್ಕೃಷ್ಟತೆಯನ್ನು ಕೈಯೆತ್ತಿ ಸಾರಿದ್ದಾಳೆ. ಈ ಶ್ರುತಿಜನನಿಯ ಅಭಿಪ್ರಾಯ ದಂತೆ ಪ್ರತಿಯೊಬ್ಬ ವೈದಿಕಮತೀಯರು ತಮ್ಮ ತಮ್ಮ ಗುರುಗಳಲ್ಲಿ ಅಸಾಧಾರಣವಾದ ಭಕ್ತಿಯನ್ನಿಟ್ಟು ವರ್ತಿಸಿ ತದ್ದ್ವಾರಾ ಪರಮಪುರುಷಾರ್ಥ ವಾದ ಮೋಕ್ಷವನ್ನು ಪಡೆಯಬೇಕಾಗಿದೆಯೆಂದು ಹೇಳಲು ಕಾರಣವೇ ಇಲ್ಲ. ಸದ್ಯಃ ಭರತಖಂಡದಲ್ಲಿರುವ ಯಾವತ್ತು ಮತದವರು ಅಸದೃಶ ಗುರುಭಕ್ತಿಯಿಂದ ವರ್ತಿಸುತ್ತಿದ್ದರೂ, ವೀರಶೈವರು ಮಾತ್ರ ಅದಕ್ಕೆ ತಿಲಾಂಜಲಿಯನ್ನು ಕೊಡಹತ್ತಿರುವದು ನೋಡಿದರೆ ಅತ್ಯಂತ ವ್ಯಸನ ವೆನಿಸುತ್ತದೆ. ತನ್ನ ಅದ್ಭುತವಾದ ಯೋಗಸಾಮರ್ಥ್ಯದಿಂದ ಸಪ್ತಸಮುದ್ರ ಗಳನ್ನೇ ಒಂದು ಹನಿಯಂತೆ ಪಾನಮಾಡಿ ಲೋಕೋತ್ತರಕೀರ್ತಿಶಾಲಿ ಯಾಗಿರುವ ಅಗಸ್ತ್ಯಮಹರ್ಷಿಯು, ರಾಕ್ಷಸಸಮೂಹಕ್ಕೆಲ್ಲಾ ಒಡೆಯನಾಗಿ ಲೋಕಚಕ್ರವರ್ತಿಯೆನಿಸಿಕೊಂಡ ವಿಭೀಷಣನು, ಯಾವತ್ತು ಪ್ರಪಂಚದ ಶಕಪುರುಷರಲ್ಲಿ ಅದ್ವಿತೀಯ ಶಕಪುರುಷನೆಂದು ಭರತಖಂಡದಲ್ಲಿ ಈಹೊತ್ತಿನ ವರೆಗೆ ತನ್ನ ಮಂಗಲನಾಮದಿಂದ ಪ್ರತಿಯೊಬ್ಬರ ಮುಖಕಮಲದಲ್ಲಿ ನರ್ತನ ಮಾಡುತ್ತಿರುವ ವಿಕ್ರಮಮಹಾರಾಜನು, ತನ್ನ ಅದ್ಭುತವಾದ ವಿದ್ವತ್ಪ್ರಭಾವ ದಿಂದ ಜಗತ್ತಿನ ಜನರನ್ನೆಲ್ಲಾ ಬೆರಗುಮಾಡಿ ದಶದಿಕ್ಕುಗಳಲ್ಲಿ ತನ್ನ ಯಶೋದುಂದುಭಿಯ ನಾದವನ್ನು ಪಸರಿಸಿದ ಶಂಕರಾಚಾರ್ಯನು, ನಾರಕಿಗಳ ಸಮುದಾಯದಿಂದ ತುಂಬಿ ತುಳುಕುತ್ತಿದ್ದ ಯಮಲೋಕವನ್ನು ಲೋಕ ಪಾವನವಾದ ಪಂಚಾಕ್ಷರೀ ಮಂತ್ರದ ಸಾಮರ್ಥ್ಯದಿಂದ ಹಾಳುಮಾಡಿ, ಅಲ್ಲಿದ್ದ ಸಮಸ್ತ ನಾರಕಿಗಳನ್ನುದ್ಧರಿಸಿ ದಿಗಂತವಿಶ್ರಾಂತಕೀರ್ತಿಶಾಲಿಯಾದ ಸಾನಂದಮಹರ್ಷಿಯು, ತನ್ನ ಪ್ರಭಾವದಿಂದ ಇಂದ್ರನ ಚತುರ್ದಶಸಂಪತ್ತು ಗಳನ್ನು ಸಮುದ್ರ ಪಾಲುಮಾಡಿ ಸಮಸ್ತ ದೇವದಾನವರನ್ನು ಕಷ್ಟಕ್ಕೀಡು

ಮಾಡಿ ಪರಮಾತ್ಮನಿಗೆ ವಿಷವನ್ನುಣಿಸಿ ಅವನನ್ನು ನೀಲಕಂಠನೆಂಬ ಪದವಿಯಿಂದ ಜಗದ್ವಿಖ್ಯಾತನನ್ನಾಗಿ ಮಾಡಿದ ಮಹರ್ಷಿಪುಂಗವನಾದ ದೂರ್ವಾಸನು ಹಾಗೂ ಹದಿನೆಂಟು ಪುರಾಣಗಳನ್ನೂ, ಬ್ರಹ್ಮಸೂತ್ರಗಳನ್ನೂ ರಚಿಸಿ ಸನಾತನಧರ್ಮಕ್ಕೆ ಅಸಾಧಾರಣವಾದ ಮಹೋಪಕಾರವನ್ನು ಮಾಡಿ ಜಗದ್ವಿಖ್ಯಾತಕೀರ್ತಿಶಾಲಿಯಾಗಿರುವ ವ್ಯಾಸಮಹರ್ಷಿಯು ಇವರೇ ಮೊದಲಾದ ಪ್ರಸಿದ್ಧ ಪುರುಷರು ಯಾವ ಮಹಾತ್ಮರ ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಧನ್ಯರಾದರೋ ಅಂಥ ಶ್ರೀರೇಣುಕಾದಿ ಪಂಚಾಚಾರ್ಯರ ನಾಮಸ್ಮರಣ ಕೀರ್ತನಾದಿಗಳನ್ನು ಮಾಡಿ ಧನ್ಯರಾಗುವುದು ಪ್ರತಿಯೊಬ್ಬ ವೀರಶೈವನ ಕರ್ತವ್ಯವಾದಾಗ್ಯೂ ಇದನ್ನು ಮರೆತು ಕೆಲಜನರು ಜಾತಿಸಂಕರಕಾರಕರಲ್ಲಿ ನಂಬಿಗೆಯಿಟ್ಟು, ವರ್ತಿಸುತ್ತಿರುವದನ್ನು ನೋಡಿದರೆ ಇವರ ದುರ್ದೈವಕ್ಕೆ ಬೆಲೆಯೇ ಇಲ್ಲವೆಂದು ಮುಕ್ತಕಂಠದಿಂದ ಹೇಳಬಹುದಾಗಿದೆ. ಮೇಲ್ಕಂಡ ಮಹಾಮಹಿಮರು ಪೂಜ್ಯಪಾದರಿಂದ ಉಪದಿಷ್ಟರಾಗಿರುವಾಗ ಕೆಲ ನರಗುರಿಗಳು ಇದಕ್ಕೆ ವಿರುದ್ಧವಾಗಿ ವರ್ತಿಸುತ್ತಿರುವುದು ತುಂಬಾ ಶೋಚನೀಯವಾದ ವಿಷಯವಾಗಿದೆ. ಇವರೀ ಆಚರಣೆಯು ಬಹುಜನ್ಮಕೃತ ಪಾಪಸಮೂಹದ ಫಲವೆಂದು ಹೇಳಿದರೆ ತಪ್ಪಾಗಲಾರದು. ಆದುದರಿಂದ ಗುರುಭಕ್ತಿಶೂನ್ಯರಾಗಿ ವರ್ತಿಸುವ ಜನರು ಈ ವಿಷಯವನ್ನೆಲ್ಲಾ ಪೂರ್ಣವಾಗಿ ಆಲೋಚಿಸಿ ಆ ಗುರುಸಾರ್ವಭೌಮರ ಸ್ವೈಜವಾದ ಚರಿತ್ರವನ್ನು ತಿಳಿದುಕೊಂಡು ಅವರಲ್ಲಿ ಅಕೃತ್ರಿಮವಾದ ಭಕ್ತಿಯನ್ನಿಟ್ಟು "ಮೋಕ್ಷಮೂಲಂ ಗುರೋಃಕೃಪಾ" ಎಂಬೀ ಗುರುಗೀತಾವಾಕ್ಯದಂತೆ ಪರಮಪುರುಷಾರ್ಥವಾದ ಮೋಕ್ಷವನ್ನು ಶ್ರೀಗುರುವಿನಿಂದ ಪಡೆದು ಇಹಪರಸುಖಭಾಗಿಗಳಾಗಬೇಕು.

ವೀರಶೈವಮತಸ್ಥಾಪಕರಾದ ರೇಣುಕಾದಿ ಪಂಚಾಚಾರ್ಯರು ಪರಶಿವನ ಅಪ್ಪಣೆಯ ಮೇರೆಗೆ ಭೂಲೋಕದಲ್ಲಿ ಸುಪ್ರಸಿದ್ಧಗಳಾದ ಸೋಮೇಶ್ವರಾದಿ ಪಂಚಲಿಂಗಗಳಿಂದವತರಿಸಿ ದಿವ್ಯಶರೀರಧಾರಿಗಳಾಗಿ ಸಂಚರಿಸುತ್ತ ಜಗತ್ತಿನಲ್ಲಿ ಅದ್ಭುತ ಮಹಿಮೆಗಳನ್ನು ತೋರಿಸಿದರೆಂದು ಶಿವಾಗಮಗಳು ಸಾರುತ್ತಿವೆ. ವೇದಾಗಮವಿರೋಧಿಗಳಾದ ಕೆಲವು ಪಾಷಂಡಿಗಳು ಇವರಲ್ಲಿ ಶ್ರದ್ಧೆಯನ್ನಿಡದೆ ತಾವು ವೀರಶೈವಮತದಲ್ಲಿ ಜನ್ಮವನ್ನೆತ್ತಿದ್ದರೂ, ಭಗವತ್ಪಾದರಿಂದನುಗ್ರಹೀತವಾದ ಶಿವಲಿಂಗವನ್ನು ಕಂಠದಲ್ಲಿ ಧರಿಸಿದ್ದರೂ, ವೀರಶೈವ ಮಠೀಯರಲ್ಲಿಯೇ ತಮ್ಮ ಜೀವನಯಾತ್ರೆಯನ್ನು

ನಡೆಯಿಸಿಕೊಳ್ಳುತ್ತಿದ್ದರೂ ಕೃತಘ್ನಕೋಟಿ ಪ್ರವಿಷ್ಟರಾಗಿ ರೇಣುಕಾದ್ಯಾಚಾರ್ಯರು ಲಿಂಗಗಳಿಂದವತರಿಸಲಿಲ್ಲವು, ಶಿಲಾಮಯಲಿಂಗಗಳಿಂದ ಜನ್ಮವಂಧರಿಸುವುದು ಸೃಷ್ಟಿಸ್ವಭಾವಕ್ಕೆ ವಿರೋಧವೆಂದು ಬಡಬಡಿಸುತ್ತ ತಮ್ಮಂಥ ನಾಸ್ತಿಕಪಂಥದವರಲ್ಲಿ ತಮ್ಮ ಪಟಾಟೋಪವನ್ನು ತೋರಿಸುತ್ತಿರುವರು.

"ಪಂಚಪೀಠಾಧಿ ದೇವಾನಾಂ ಯೇಜಾನಂತಿಸಮಾನತಾಂ ।
ತೇಗರ್ದಭಾಶ್ಚಸಂಪ್ರೋಕ್ತಾ ಜ್ಞಾನಶೂನ್ಯತ್ವತಃ ಶಿವೇ ॥
ತಸ್ಮಾತ್ತಸ್ಮಾಚ್ಚಗಿರಿಜೇ ಪಂಚಾನನಸಮುದ್ಭವಾಃ ।
ಮದಾದಿಸರ್ವಲೋಕಾನಾಂ ಜಗದ್ಗುರುವರೋತ್ತಮಾಃ ॥"

ಎಂದು ಸುಪ್ರಬೋಧಾಗಮವಾಕ್ಯವು ಸಿಂಹಗರ್ಜನೆಯನ್ನು ಮಾಡುತ್ತಿದ್ದರೂ ಇದನ್ನೆಲ್ಲಾ ಲಕ್ಷಿಸದೆ ಜಗದಾದಿಯಲ್ಲಿ ವೀರಶೈವ ಸಿದ್ಧಾಂತವನ್ನು ಸ್ಥಾಪಿಸಿ ಜೀವರಿಗೆ ಸುಲಭವಾಗಿ ಮೋಕ್ಷೋಪಾಯವನ್ನು ಬೋಧಿಸಿದ ಆಚಾರ್ಯಭಗವತ್ಪಾದರ ಮೇಲೆ ನಾಸ್ತಿಕರಾದ ಪರವಾದಿಗಳು ಮಾಡುವಂತೆ ಟೀಕೆಯನ್ನು ಮಾಡುತ್ತ, ತಾವೇ ಜಗದಾಚಾರ್ಯರೆಂದು ತಮ್ಮನ್ನು ತಾವೇ ಹೊಗಳಿಕೊಳ್ಳುತ್ತ, ದೇಶಮಧ್ಯದಲ್ಲಿ ಹೊಟ್ಟೆಹೊರೆದುಕೊಳ್ಳುತ್ತಿರುವ ಮೂಢರನ್ನು ವೀರಶೈವಮತಸ್ಥರೆಂದು ತಿಳಿದು ಗೌರವಿಸುವುದು ಹೇಗೆ? ಸಾಮಾನ್ಯವಾಗಿ ಹಸಿವು ಬಾಯಾರಿಕೆಗಳಿಂದ ಬಳಲುತ್ತ ಜೀವಭಾವವನ್ನು ಹೊಂದಿರುವವರು ಆರುಂಟೋ ಅಂಥವರಿಂದ ಸೃಷ್ಟಿಗೆ ವಿರೋಧವಾದ ಕಾರ್ಯವನ್ನು ನಡೆಯಿಸಲು ಶಕ್ತಿಯಿಲ್ಲವೆಂಬುವುದನ್ನು ಎಲ್ಲರೂ ತಿಳಿದುಕೊಂಡಿರುತ್ತಾರೆ. ಆದರೆ ಜೀವಭಾವವಿಲ್ಲದ ಮಹಾತ್ಮರಿಗೆ ಮಾತ್ರ ನಿಯಮವನ್ನು ಹೇಳುವದು ಆಸ್ತಿಕಪದ್ಧತಿಯಲ್ಲವು.

ಸೃಷ್ಟಿಸ್ಥಿತಿಸಂಹಾರಕರ್ತನಾದ ಪರಮೇಶ್ವರನಲ್ಲಿ ಯಾವ ವಿಧವಾದ ಅಘಟನಾಘಟನಶಕ್ತಿಯಿರುವುದೋ ಅಂಥ ಶಕ್ತಿಯನ್ನು ಮಹಾತ್ಮರೂ ಸಹ ತಪೋಬಲದಿಂದ ಪಡೆದಿರುತ್ತಾರೆ. ಇಂಥ ಪರಮೇಶ್ವರನ ಗುಣಾವಳಿಯನ್ನೆಲ್ಲಾ ಸಂಪೂರ್ಣವಾಗಿ ಹೊಂದಿದ ಮಹಾತ್ಮರನ್ನು ಅಲ್ಪಜ್ಞರಾದ ಜೀವರಾಶಿಯಲ್ಲಿ ಸೇರಿಸಿ ಆಕ್ಷೇಪಿಸುವುದು ವೇದಾಗಮಾವಲಂಬಿಗಳಿಗೆ ಸರ್ವಥಾ ಯೋಗ್ಯವಲ್ಲ. ನಮ್ಮ ಹಿಂದುಸ್ಥಾನದಲ್ಲಿ ಅನೇಕ ಜನ ಮಹಾತ್ಮರು ಸೃಷ್ಟಿಸ್ವಭಾವಕ್ಕೆ ವಿರುದ್ಧವಾದ ಅನಂತ ಮಹಿಮೆಗಳನ್ನು ಮಾಡಿ ಜಗತ್ತಿನಲ್ಲಿ

ಈಗಲೂ ಪುರಾಣ ಪ್ರಸಿದ್ಧರಾಗಿಯೂ ಸುಪ್ರಸಿದ್ಧರಾಗಿಯೂ ಇರುತ್ತಾರೆ. ಅಂಥ ಸೃಷ್ಟಿಸ್ವಭಾವಕ್ಕೆ ವಿರುದ್ಧವಾದ ಅದ್ಭುತಶಕ್ತಿಯನ್ನು ಪಡೆಯದಿದ್ದವರು ಎಂದೂ ಮಹಾತ್ಮರೆನಿಸಿಕೊಳ್ಳಲಾರರು. ಅಂಥವರು ಎಷ್ಟು ಗ್ರಂಥಗಳನ್ನು ಓದಿದ್ದರೂ ಎಷ್ಟು ಉಪನ್ಯಾಸಗಳನ್ನು ಮಾಡುತ್ತಿದ್ದರೂ ಜೀವರೇ ಅಲ್ಲದೆ ಮಹಾತ್ಮರಾಗುವುದಿಲ್ಲ. ಇಂಥವರು ಮಹಾತ್ಮರ ಮೇಲೆ ಟೀಕೆಮಾಡುವದು ಕೇವಲ ದುರ್ಬೀಜ ಪ್ರಭಾವವಲ್ಲದೆ ಬೇರೆಯಲ್ಲ. ಸೃಷ್ಟಿಸ್ವಭಾವವಿರುದ್ಧವಾದ ಅದ್ಭುತಕಾರ್ಯಗಳನ್ನು ಮಾಡುವುದರಿಂದಲೇ ಜಗತ್ತು ಅವರನ್ನು ಮಹಾತ್ಮರೆಂದು ಕೊಂಡಾಡುವದು. ಋಷಿಶ್ರೇಷ್ಠನಾದ ಅಗಸ್ತ್ಯನು ಕೇವಲ ಜಡೀಭೂತವಾದ ಕುಂಭದಲ್ಲಿ ಜನ್ಮವನ್ನು ಪಡೆದು ಬೊಗಸೆಯಲ್ಲಿ ನೀರನ್ನು ಕುಡಿಯುವಂತೆ ಲೀಲಾಮಾತ್ರದಿಂದ ಮಹಾಸಮುದ್ರವನ್ನೇ ಪಾನಮಾಡಿದನು. ವಿಷ್ಣುವು ಪ್ರಹ್ಲಾದನ ಭಕ್ತಿಗೆ ಮೆಚ್ಚಿ ನರಸಿಂಹಾಕಾರದಿಂದ ಕಂಬದಲ್ಲಿ ಹುಟ್ಟಿದನು. ಮಾರ್ಕಂಡೇಯನಿಗೆ ಒದಗಿದ ವಿಪತ್ತನ್ನು ಪರಿಹರಿಸಲು ಪರಶಿವನು ಶಿಲಾಮಯಲಿಂಗವನ್ನು ಭೇದಿಸಿಕೊಂಡು ಬಂದನು. ಅದ್ವೈತಮತಸ್ಥಾಪಕರಾದ ಶ್ರೀಶಂಕರಾಚಾರ್ಯರು ತಮ್ಮ ಸ್ಥೂಲಶರೀರವನ್ನು ಒಂದೆಡೆಯಲ್ಲಿರಿಸಿ ಮೃತಿಹೊಂದಿದ ಒಬ್ಬ ರಾಜನ ಶರೀರದಲ್ಲಿ ಪ್ರವೇಶಿಸಿದರು. ಕಪಿವರ್ಗದಲ್ಲಿ ಸೇರಿದ ಆಂಜನೇಯನು ದುಸ್ತರವಾದ ಸಮುದ್ರವನ್ನು ಹಾರಿದನು. ವಸಿಷ್ಠಮಹರ್ಷಿಯು ತಪೋಬಲದಿಂದ ಕೈಯಲ್ಲಿ ಹಿಡಿದ ಒಂದು ಕಡ್ಡಿಯಲ್ಲಿ ವಿಶ್ವಾಮಿತ್ರನು ಪ್ರಯೋಗಿಸಿದ ಮಹಾಸ್ತ್ರಗಳನ್ನೆಲ್ಲ ಐಕ್ಯಗೊಳಿಸಿದನು. ಇಂಥ ಚರಿತ್ರೆಗಳು ನಮ್ಮ ಹಿಂದುಸ್ಥಾನದ ಮಹರ್ಷಿಗಳಲ್ಲಿ ಅಸಂಖ್ಯಾಕವಾಗಿ ದೊರೆಯುತ್ತವೆ. ಮತ್ತು ಇದರಂತೆ ಕ್ರಿಸ್ತ, ಪೈಗಂಬರ ಮೊದಲಾದವರು ಸಹ ಅನೇಕ ಮಹಿಮೆಗಳನ್ನು ಮಾಡಿ ಹೋಗಿರುತ್ತಾರೆ. ಇದನ್ನರಿಯದೆ ತಮಗೆ ಅಲ್ಪಸ್ವಲ್ಪವಾದ ಬುದ್ಧಿಯಿದ್ದರೂ ಅದನ್ನು ಅಮಾರ್ಗದಲ್ಲಿ ಉಪಯೋಗಿಸಿ ಮಹಾತ್ಮರ ಮೇಲೆ ದೋಷಗಳನ್ನು ತೆಗೆಯುತ್ತಿದ್ದರೆ ಅಂಥವರು ಹಡೆದ ತಾಯಿಯಲ್ಲಿಯೂ ದೋಷವನ್ನು ಹುಡುಕಲು ಭಯಪಡುವುದಿಲ್ಲ.

"ದುಷ್ಕರಂ ಕಿಂ ಮಹಾತ್ಮನಾಂ" ಎಂಬಂತೆ ಮಹಾತ್ಮರು ಜೀವರು ಮಾಡುವಂತೆ ತಮ್ಮ ತನುಮನೋಧನಗಳಿಂದ ಶಕ್ತಿಯನ್ನು ತೋರಿಸುವವ

ರಲ್ಲವು. ಅವರು ತಮ್ಮ ಇಚ್ಛಾಮಾತ್ರದಿಂದ ಏನುಬೇಕಾದರೂ ಮಾಡಿ ತೋರಿಸಬಹುದು. ಮಹಾತ್ಮ್ಯರೂಪಾಸಾಧಾರಣ ಗುಣದಿಂದ ಅವರಲ್ಲಿ ಯಾವುದೂ ಆರೋಪಿತವಾಗುವ ಹಾಗಿಲ್ಲವು. ಹಾಗೆ ಆರೋಪಿಸುವ ಜೀವರು "ತಸ್ಮಾತ್ ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬೇತ್" ಎಂಬುಕ್ತಿಯಂತೆ ದೇವರಿಲ್ಲ, ಪರಲೋಕವಿಲ್ಲ, ಋಣದ ಹೆದರಿಕೆ ನಮಗೇಕೆ? ಇರುವವರೆಗೆ ಜನಗಳನ್ನು ವಂಚಿಸಿ ಸುಖವಾಗಿ ಊಟಮಾಡಿದರೆ ಅದೇ ನಮ್ಮ ಆಯುಷ್ಯದ ಪರಮಾವಧಿಯೆಂದು ಭಾವಿಸಿ ನಡೆಯುವ ಚಾರ್ವಾಕಮತದಲ್ಲಿ ಸೇರುವುದುತ್ತಮವು. ಅಂಥವರಿಗೆ ವೇದಾಗಮಗಳ ಗೋಷ್ಠಿಯೇಕೆ? ಸ್ವಾಮಿ ವಿವೇಕಾನಂದ ಮೊದಲಾದವರು ಭಾರತದ ಮಹರ್ಷಿಗಳು ಮಾಡಿದ ಇಂಥ ಅದ್ಭುತ ಮಹತ್ವಗಳನ್ನು ಬೋಧಮಾಡಿ ಈ ದೇಶದ ಪಾವಿತ್ರ್ಯವನ್ನು ಅಮೇರಿಕ ಮುಂತಾದ ಸ್ಥಳಗಳಲ್ಲಿ ಹರಡಿರುತ್ತಾರೆ. ಹೀಗಿರುವ ಇವುಗಳನ್ನು ಕೇಳಿದ್ದರೂ ಯಾವುದೋ ಒಂದು ಆತ್ಮೋತ್ಕರ್ಷತೆಯನ್ನು ಮನಸ್ಸಿನಲ್ಲಿಟ್ಟು ಕೊಂಡು ಮಹಾತ್ಮರ ಮೇಲೆ ಆಕ್ಷೇಪಣೆಮಾಡುವುದೆಂದರೆ ಅದು ತಮ್ಮ ಅಜ್ಞತೆಯನ್ನೇ ತೋರಿಸಿಕೊಂಡಂತಾಗುತ್ತದೆ. ಶ್ರೀ ರೇಣುಕಾದಿಪಂಚಾಚಾರ್ಯರು ಪರಮೇಶ್ವರನ ಪಂಚವ್ಯೂಹಮೂರ್ತಿಗಳಾದುದರಿಂದ ಪರಮೇಶ್ವರನಂತೆ ಅಘಟನಾಘಟನ ಶಕ್ತಿಯನ್ನು ಸ್ವಾಭಾವಿಕವಾಗಿ ಪಡೆದಿರುತ್ತಾರೆ; ಆದ್ದರಿಂದ ಆ ಮಹಾಚಾರ್ಯರು ಲಿಂಗಗಳಿಂದವತರಿಸಿದುದೇನಾಶ್ಚರ್ಯವು?

ಸಾಧಾರಣವಾಗಿ ಮನುಷ್ಯ ದೇಹಧಾರಿಗಳಾದ ಜೀವರು ಯೋಗಾಭ್ಯಾಸವನ್ನು ಮಾಡಿ ತಮ್ಮ ಭೌತಿಕಶರೀರವನ್ನು ಅಣುರೂಪವನ್ನಾಗಿ ಮಾಡಿಕೊಂಡು ವಜ್ರಾದಿ ಕಠಿನತರವಾದ ಶಿಲೆಗಳೊಳಗೆ ಪ್ರವೇಶಿಸಬಹುದೆಂದು ಯೋಗಶಾಸ್ತ್ರವು ಸಹ ಹೇಳುವಲ್ಲಿ ಇನ್ನು ಸ್ವಭಾವಸಿದ್ಧವಾಗಿ ಈಶ್ವರಸ್ವರೂಪವನ್ನು ಪಡೆದ ಮಹಿಮರು ಜಗದುದ್ಧಾರಕ್ಕಾಗಿ ಹೇಯವಾದ ಭೌತಿಕಶರೀರದಲ್ಲಿ ಜನ್ಮವನ್ನು ಧರಿಸದೆ ಬಾಲ್ಯಾದ್ಯವಸ್ಥೆಗಳಿಗೆ ಶಿಕ್ಕದೆ ಹಾಗೆಯೇ ಲಿಂಗಗಳಿಂದ ಜನ್ಮವನ್ನು ಪಡೆದರೆಂದು ಹೇಳಲು ಬಾಧಕವೇನು? ಅಲ್ಪಜ್ಞನಾದ ಮನುಷ್ಯನಿಗೆ ಒಂದು ಕೆಲಸವನ್ನು ಮಾಡಬೇಕಾದರೆ ಸೃಷ್ಟಿಸ್ವಭಾವಕ್ಕನುಗುಣವಾಗಿ ಅದಕ್ಕೆ ತಕ್ಕ ಉಪಕರಣಗಳು ಬೇಕಾಗುವವು. ಮಹಾತ್ಮರಿಗೆ

ಅಂಥ ಉಪಕರಣಗಳಾವುವೂ ಬೇಕಾಗುವುದಿಲ್ಲ. "ಕ್ರಿಯಾಸಿದ್ಧಿಸ್ಸತ್ವೇವಸತಿ ಮಹತಾಂ ನೋಪಕರಣೆ" ಎಂಬ ಆರ್ಯೋಕ್ತಿಯೂ ಸಹ ಮಹಾತ್ಮರ ಅದ್ಭುತ ಸಾಮರ್ಥ್ಯವನ್ನು ಕೊಂಡಾಡಿರುವದು.

ಈ ಅಪಾರವಾದ ಸಂಸಾರಸಮುದ್ರದಲ್ಲಿ ಮುಳುಗುತ್ತ ತೇಲುತ್ತ ದುಃಖಿಸುತ್ತಿರುವ ಮಾನವಪ್ರಾಣಿಗಳ ಉದ್ಧಾರಕ್ಕಾಗಿ ಶ್ರೀ ಪರಮೇಶ್ವರನು ತಾನೇ ನಾವಿಕನಂತಿರುವ ಗುರುರೂಪವನ್ನು ಧರಿಸಿ ಸರ್ವತ್ರ ಸಂಚರಿಸುತ್ತಾನೆ. ಮಾನವರು ಶ್ರೀ ಗುರುವಿನ ಕೃಪಾವಿಶೇಷದಿಂದಲೇ ಈ ಘೋರ ಜನ್ಮವನ್ನು ಕಳೆದುಕೊಂಡು ಪುನೀತರಾಗಬೇಕಾಗಿದೆಯಲ್ಲದೆ ಬೇರೆ ಮಾರ್ಗವೇ ಇಲ್ಲ. ಆದುದರಿಂದಲೇ ಧರ್ಮಶಾಸ್ತ್ರವು—

ಕಟಾಕ್ಷಚಂದ್ರಮಾ ಯಸ್ಯ ಜ್ಞಾನಸಾಗರವರ್ಧನಃ ।
ಸಂಸಾರತಿಮಿರಚ್ಛೇದೀ ಸಗುರುರ್ಜ್ಞಾನಸಾಗರಃ ॥
ಬಹಿಸ್ತಿಮಿರವಿಚ್ಛೇತ್ತಾ ಭಾಸುರೇಷ ಪ್ರಕೀರ್ತಿತಃ ।
ಬಹಿರಂತಸ್ತಮುಚ್ಛೇದೀ ವಿಭುರ್ದೇಶಿಕಭಾಸ್ಕರಃ ॥

ಇತ್ಯಾದಿಯಾಗಿ ಶ್ರೀ ಗುರುವಿನ ಆಧಿಕ್ಯವನ್ನು ನಾನಾರೀತಿಯಿಂದ ಕೊಂಡಾಡುತ್ತದೆ. ಅಂದಮೇಲೆ ಶ್ರೀಗುರುವಿನ ಮಹತ್ವವೆಷ್ಟಿರಬೇಕೆನ್ನುವದನ್ನು ಬೇರೆ ಹೇಳುವ ಕಾರಣವೇ ಇಲ್ಲ. ಪ್ರಪಂಚದಲ್ಲಿರುವ ಪ್ರತಿಯೊಂದು ಮತಕ್ಕೂ ಗುರುಗಳು ಇದ್ದೇ ಇದ್ದಾರೆ. ಗುರುವಿಲ್ಲದ ಮತವೇ ಈ ಪ್ರಪಂಚದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಯಾವ ಮಹಾತ್ಮರಿಂದ ಯಾವ ಯಾವ ಮತಗಳು ಸ್ಥಾಪಿಸಲ್ಪಟ್ಟವೆಯೋ ಆಯಾ ಮತಗಳನ್ನವಲಂಬಿಸಿದವರೆಲ್ಲರೂ ತಮ್ಮ ತಮ್ಮ ಮತಸ್ಥಾಪನಾಚಾರ್ಯರ ವಿಷಯದಲ್ಲಿ ಅಸಾಧಾರಣವಾದ ಪೂಜ್ಯಬುದ್ಧಿಯನ್ನಿಟ್ಟು ವರ್ತಿಸಿ ಧನ್ಯರಾಗಬೇಕು. ಶಿಷ್ಯರು ತಮ್ಮ ತಮ್ಮ ಗುರುಗಳ ವಿಷಯದಲ್ಲಿ ಯಾವಪ್ರಕಾರದ ಭಕ್ತಿಯಿಂದ ವರ್ತಿಸಬೇಕೆನ್ನುವ ವಿಷಯವು ಧರ್ಮಶಾಸ್ತ್ರದಲ್ಲಿ ಬಹು ವಿಶದವಾಗಿ ಪ್ರತಿಪಾದಿಸಲ್ಪಟ್ಟಿರುವುದು. ಆ ವಿಷಯವನ್ನು ಸಂಕ್ಷೇಪವಾಗಿ ಈ ಕೆಳಗೆ ತೋರಿಸುತ್ತೇವೆ.

ರಿಕ್ತಪಾಣಿರ್ನತಂ ಪಶ್ಯೇದ್ಯಥಾರಾಜಾ ತಥಾಗುರುಃ ।
ಫಲಂಪ್ರಸೂನಂತಾಂಬೂಲಮುಸ್ಯತ್ಕಿಮುಪಿವಸ್ತು ಚ ॥

ಏಷ್ವೇಕಂ ಗುರುವೇ ದತ್ವಾ ನಮಸ್ಕುರ್ಯಾತ್ತತೋಗುರುಂ ।
ಶ್ರೀಮಾಂಶ್ಚಾಪಿ ತಪಸ್ವೀಚ ಶಾಸ್ತ್ರಜ್ಞಃಕುಲಶೀಲವಾನ್ ॥
ಕುರ್ಯಾದ್ದಂಡನಮಸ್ಕಾರಂ ನಿರ್ಲಜ್ಜೋ ಗುರುಸನ್ನಿಧೌ ।
ಸ್ವಗುರೋಃಪುರತಃಶಿಷ್ಯೋ ನೇತರಾನ್ ಕೀರ್ತಯೇಜ್ಜನಾನ್
ಅಸಹ್ಯಭಾಷಣಂಚೈವ ನವದೇದಿತರೇತರಂ ।
ನಾನೃತಂನಾಪ್ರಿಯಂವಾಕ್ಯಂ ನಗುಹ್ಯಂಚಾಪಿಭಾಷಯೇತ್ ॥
ಆಜ್ಞಾಂ ನಲಂಘಯೇತ್ತಸ್ಯ ಸಮಂ ನೋಪವಿಶೇತ್ತಥಾ ।
ಗುರುಗೃಹೇ ಸಮೀಪೇವಾ ನಯಥೇಷ್ಟಾಸನೋ ಭವೇತ್ ॥
ಗುರುರ್ದೇವೋಯತಃ ಸಾಕ್ಷಾತ್ತದ್ಗೃಹಂ ಶಿವಮಂದಿರಂ ।
ನಗುರೋರಾಶ್ರಮೇ ಕುರ್ಯಾದುಪಾನತ್ಪರಿಸರ್ಪಣಂ ॥

ಶ್ರೀ ಗುರುವಿನ ದರ್ಶನವನ್ನು ಮಾಡಿಕೊಳ್ಳಬೇಕೆಂಬಾಶೆಯುಳ್ಳ ಶಿಷ್ಯನು ಅಲ್ಲಿಗೆ ರಿಕ್ತಹಸ್ತದಿಂದ ಹೋಗದೆ ಪುಷ್ಪಗಳನ್ನಾಗಲಿ ಅಥವಾ ಸುಗಂಧಕುಸುಮಗಳನ್ನಾಗಲಿ ತೆಗೆದುಕೊಂಡುಹೋಗಿ ಗುರುವಿನ ಚರಣ ಸನ್ನಿಧಿಯಲ್ಲಿಟ್ಟು ನಮಸ್ಕರಿಸಬೇಕೆಂದೂ, ಶಿಷ್ಯನು ಇಂದ್ರನಷ್ಟು ಸಂಪತ್ತುಳ್ಳವನಾಗಿದ್ದರೂ, ಬೃಹಸ್ಪತಿಯಂತೆ ಬುದ್ಧಿಯುಳ್ಳವನಾಗಿದ್ದರೂ, ಮಹಾ ಯೋಗಿಯಾಗಿದ್ದರೂ, ಸದಾಚಾರಶೀಲನಾಗಿದ್ದರೂ ನಾಚಿಕೆಯಿಲ್ಲದೆ ಶ್ರೀ ಗುರುವಿಗೆ ದೀರ್ಘದಂಡನಮಸ್ಕಾರವನ್ನು ಮಾಡಬೇಕೆಂದೂ, ತನ್ನ ಗುರುವಿನೆದುರಿಗೆ ಇತರರ ಸ್ತುತಿಯನ್ನು ಮಾಡಬಾರದೆಂದೂ, ಗುರುವಿನ ಸಮ್ಮುಖದಲ್ಲಿ ಅಸಹ್ಯಭಾಷಣವನ್ನಾಗಲಿ, ಸುಳ್ಳುಮಾತುಗಳನ್ನಾಗಲಿ, ಅಪ್ರಿಯವಾಕ್ಯಗಳನ್ನಾಗಲಿ, ಅಥವಾ ಗುಪ್ತಭಾಷಣವನ್ನಾಗಲಿ, ಉಪಯೋಗಿಸಕೂಡದೆಂದೂ, ಗುರುವಿಗೆ ಸಮಾನರೀತಿಯಿಂದ ಕುಳಿತುಕೊಳ್ಳಬಾರದೆಂದೂ, ಗುರುವಿನ ಅಪ್ಪಣೆಯನ್ನು ಮೀರಬಾರದೆಂದೂ, ಗುರುವಿನ ಗೃಹವು ಸಾಕ್ಷಾತ್ ಶಿವಗೃಹವಾಗಿರುವದರಿಂದ ಅಲ್ಲಿ ಮನಸ್ಸಿಗೆ ಬಂದಂತೆ ಕುಳಿತುಕೊಳ್ಳಬಾರದೆಂದೂ, ಗುರುವಿನ ಆಶ್ರಮದಲ್ಲಿ ರಕ್ಷೆಗಳನ್ನು ಒಯ್ಯಬಾರದೆಂದೂ ಧರ್ಮಶಾಸ್ತ್ರಗಳು ಶಾಸನಮಾಡುತ್ತವೆ. ಆದರೆ ಈ ತರಹದ ಭಕ್ತಿಯು ಕಲಿಕಾಲ ಪ್ರಾಬಲ್ಯದಿಂದ ಪೂರ್ಣ ನಷ್ಟವಾಗಿ ಇದಕ್ಕೆ ವಿರುದ್ಧವಾದ ಆಚರಣೆಯೇ ಎಲ್ಲೆಲ್ಲೂ ಕಂಡುಬರುತ್ತಿರುವುದು. ಅನೇಕಜನ ಶ್ರೀಮಂತರೂ ಮತ್ತು ಸರಕಾರಿ ಅಧಿಕಾರಿಗಳೂ ಗುರುಗಳಿಗೆ ಸಾಷ್ಟಾಂಗನಮಸ್ಕಾರ

ಮಾಡಲು ನಾಚಿಕೆಯಿಂದ ಹಿಂದುಮುಂದು ನೋಡುತ್ತಿರುವರಲ್ಲದೆ ಗುರುಗಳು ಮುಗ್ಧಭಾವದವರಿದ್ದರೆ ಅವರ ಸಮಾನಾಸನದಲ್ಲಿ ಸಹ ಕುಳಿತು ಕೊಳ್ಳುವರು. ಇನ್ನು ಕೆಲಜನ ಧರ್ಮಲಂಡರು ಗುರುಗಳನ್ನು ಕೆಳಗೆ ಕುಳ್ಳಿರಿಸಿ ತಾವು ಮೇಲಾದರೂ ಕುಳಿತುಕೊಳ್ಳುವರು. ಕಾಣಿಕಾದಿಗಳನ್ನು ಸಮರ್ಪಿಸುವ ವಿಷಯದಲ್ಲಿ ಸುಳ್ಳಿನ ಮಳೆಯನ್ನೇ ಸುರಿಸುವರು. ಇಂತಹ ಶಿಷ್ಯಸಮೂಹವೇ ಈ ಪ್ರಪಂಚದಲ್ಲಿ ಪ್ರಬಲವಾಗಹತ್ತಿರುವುದನ್ನು ನೋಡಿದರೆ ಅತ್ಯಂತ ವ್ಯಸನವೆನಿಸುತ್ತದೆ. ದಯಾನಿಧಿಯಾದ ಶ್ರೀ ಪರಮೇಶ್ವರನು ಈ ನಾಸ್ತಿಕಮಾರ್ಗವನ್ನು ಕೂಡಲೆ ನಾಶಮಾಡಿ ಜಗವನ್ನುದ್ಧರಿಸಲೆಂದು ಆಸ್ತಿಕ ಮಹಾನುಭಾವರೆಲ್ಲರೂ ಮೊರೆಯಿಡುತ್ತಿರುವರು.

ಸಮಸ್ತದೇವತಾವಾಸಂ ಸರ್ವಮಂತ್ರಾಸ್ಪದಂ ಗುರುಂ ।
ಉಪೇಕ್ಷತೇ ಯಃ ಪಾಪಾತ್ಮಾ ರೌರವಂನರಕಂ ವ್ರಜೇತ್ ॥

ಸಕಲ ದೇವತೆಗಳಿಗೂ ಹಾಗೂ ಸಮಸ್ತ ಮಂತ್ರಗಳಿಗೂ ಗೃಹಸ್ವರೂಪ ನಾಗಿರುವ ಶ್ರೀ ಗುರುವನ್ನು ಯಾವ ಪಾಪಾತ್ಮನು ಉಪೇಕ್ಷಿಸುತ್ತಾನೋ ಅವನು ರೌರವನರಕವನ್ನು ಹೊಂದುವನೆಂದು ಶಿವಾಗಮಗಳು ಘಂಟಾ ಘೋಷವಾಗಿ ಸಾರುತ್ತಿರಲು, ಆ ಶಿವಾಜ್ಞೆಯನ್ನು ಮೀರಿ ವರ್ತಿಸುವುದು ಎಂತಹ ದೋಷದಾಯಕವೆನ್ನುವದನ್ನು ಬೇರೆ ವರ್ಣಿಸಬೇಕಿಲ್ಲ. ಈ ವಿಷಯವನ್ನು ನಾಸ್ತಿಕಮಾರ್ಗಾವಲಂಬಿಗಳು ತಿಳಿದುಕೊಂಡು ತಮ್ಮ ವಕ್ರಮಾರ್ಗವನ್ನು ತ್ಯಜಿಸಿ ಶ್ರೀಗುರುವಿನಿಂದಲೇ ಸಕಲ ಭೋಗಮೋಕ್ಷಾದಿ ಗಳು ಲಭಿಸುವವೆಂದು ನಂಬಿ ಶಾಸ್ತ್ರಕಾರರು ಶಾಸನಮಾಡಿರುವಂತೆ (ಮೇಲೆ ಉದಾಹೃತಗಳಾದ ವಾಕ್ಯಗಳಲ್ಲುಕ್ತವಾಗಿರುವಂತೆ) ನಡೆದು ಈ ಅಸಾರ ಸಂಸಾರವನ್ನು ದಾಟಬೇಕು. ಶಿಷ್ಯನು ನಿಜವಾದ ಗುರುಭಕ್ತಿಯಿಂದ ವರ್ತಿಸಿ ದರೆ ಅವನಿಗೆ ಸಕಲ ಸಿದ್ಧಿಗಳುಂಟಾಗುವದರಲ್ಲಿ ಸಂದೇಹವಿಲ್ಲ.

ತಸ್ಮಾತ್ಸರ್ವಪ್ರಯತ್ನೇನ ಗುರೋಃ ಪ್ರೀತಿಕರೋಭವೇತ್ ।
ಗುರುಭಕ್ತಿಂ ವಿನಾ ತಸ್ಯ ಮಯಿ ಭಕ್ತಿರ್ವೃಥಾ ಭವೇತ್ ॥

ಶಿಷ್ಯನು ಸರ್ವರೀತಿಯಿಂದಲೂ ಗುರುವಿಗೆ ಪ್ರೀತಿಕರನಾಗಿರ ಬೇಕೆಂದೂ, ಗುರುಭಕ್ತಿಯಿಲ್ಲದೆಹೋದರೆ ಶಿವಭಕ್ತಿಯು ನಷ್ಟವಾಗುವು ದೆಂದೂ ಸಾಕ್ಷಾತ್ ಶಿವನೇ ನುಡಿದಿರುವುದರಿಂದ, ಸಮಸ್ತ ಮಾನವರೂ

ತಮ್ಮ ತಮ್ಮ ವಂಶಗುರುಗಳ ವಿಷಯದಲ್ಲಿ ಪೂರ್ಣಭಕ್ತಿಯನ್ನಿಟ್ಟು ಪರಶಿವನ ಕೃಪೆಗೆ ಪಾತ್ರರಾಗಿ ಧನ್ಯರಾಗಬೇಕು.

ಜೀವನು ಅನಾದಿಕಾಲದಿಂದ ಅವಿದ್ಯೆಯಿಂದ ಆವರಿಸಲ್ಪಟ್ಟವನಾದುದರಿಂದ, ತಂದೆತಾಯಿಗಳಿಗಿಂತಲೂ ಸಾವಿರ ಪಾಲಾಗಿ ವಾತ್ಸಲ್ಯವುಳ್ಳವನಾದ ಪರಮಾತ್ಮನನ್ನು ಮರೆತು ಜನನ ಮರಣರೂಪ ದುಃಖಗಳಿಗೊಳಗಾಗಿರುವನು. ಇದರಿಂದ ಪರಮಾತ್ಮನಿಗೂ, ಜೀವಾತ್ಮನಿಗೂ ಇರುವ ಪ್ರೇಮಬಂಧವು ತಪ್ಪಿಹೋಗಿರುತ್ತದೆ. ತಂದೆಯು ಮಗನನ್ನು ಉದ್ಧರಿಸಬೇಕೆಂಬ ನಿರ್ವ್ಯಾಜ ಪ್ರೇಮವುಳ್ಳವನಾಗಿದ್ದರೂ ತಂದೆಯನ್ನೇ ಮರೆತು ದುತ್ಸಹವಾಸದಲ್ಲಿರುವ ಮಗನ ವಿಷಯದಲ್ಲಿ ತಂದೆಯ ಪ್ರೇಮಬಂಧವು ಕಡಿಮೆಯಾಗುತ್ತ ಬರುವಲ್ಲಿ, ಆಪ್ತನಾದ ವಿವೇಕಿಪುರುಷನು ಆ ತಂದೆಮಕ್ಕಳಿಗೆ ಪರಸ್ಪರ ಉಂಟಾಗಿರುವ ವಿಯೋಗದುಃಖವನ್ನು ತಪ್ಪಿಸುವುದಕ್ಕಾಗಿ ಆ ಮಗನಿಗೆ ಹಿತೋಕ್ತಿಗಳನ್ನು ಬೋಧಿಸಿ ಆತನ ದುರ್ವೃತ್ತಿಗಳನ್ನು ತಪ್ಪಿಸಿ ಮಗನನ್ನು ತಂದೆಯ ಬಳಿಗೆ ಕರೆದುಕೊಂಡು ಹೋಗಿ ತಂದೆ ಮಕ್ಕಳನ್ನೊಟ್ಟುಗೂಡಿಸುತ್ತಾನೆ. ಇದರಿಂದ ತಂದೆಯ ಸುಖಸಂಪತ್ತುಗಳು ಮಗನಿಗೂ ದೊರೆತು ತಂದೆಯಂತೆ ಮಗನೂ ಅಭ್ಯುದಯಾವಸ್ಥೆಗೆ ಬರುತ್ತಾನೆ. ಅದರಂತೆ ಪರಮಾತ್ಮನಿಂದ ಉತ್ಪನ್ನನಾದ ಈ ಜೀವಾತ್ಮನು ಮಧ್ಯಕಾಲದಲ್ಲಿ ಅವಿದ್ಯಾದಿ ಮಹಾಮಾಯೆಗಳ ಕೈಗೆಸಿಕ್ಕು ಪರವಶನಾಗಿ ಆ ತನ್ನ ಸುಖಸ್ಥಾನವಾದ ಪರಶಿವನ ಸ್ಥಾನವನ್ನೇ ಬಿಟ್ಟು ಸ್ವೇಚ್ಛೆಯಾಗಿ ಅಲೆಯುತ್ತ ಬಹು ಹೀನಾವಸ್ಥೆಯನ್ನು ಅನುಭವಿಸುತ್ತ ಬಂದಿರುತ್ತಾನೆ. ಹೀಗಿರಲು ಆ ಜೀವಾತ್ಮನೆಂಬ ಪುತ್ರನು ಅಕಸ್ಮಾತ್ತಾಗಿ ಪರಮಾತ್ಮನ ಆಪ್ತದೂತನಂತಿರುವ ಗುರುವಿನ ಬಳಿಗೆ ಬರುತ್ತಾನೆ. ದಯಾಳುವಾದ ಶ್ರೀಗುರುವು ಈತನ ದುರ್ದಶೆಯನ್ನು ನೋಡಿ ಮನಮರುಗಿ, ಈತನು ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನೂ ಅಣಿಮಾದ್ಯಖಿಲೈಶ್ವರ್ಯಸಂಪನ್ನನೂ ಆದ ನಮ್ಮ ಪರಶಿವನ ಅಂಶಸಂಜಾತನಾಗಿದ್ದುದರಿಂದ ಆ ಪರಶಿವನ ನಿತ್ಯಾನಂದತ್ವಾದ್ಯಖಿಲ ಸಾಮ್ರಾಜ್ಯಕ್ಕೂ ಈತನೇ ಬಾಧ್ಯನಾಗಿದ್ದರೂ ಮಹಾಮೋಹವೆಂಬ ಪಿಶಾಚಿಯಿಂದ ಹಿಡಿಯಲ್ಪಟ್ಟು ಪರವಶನಾಗಿ ಜನನಮರಣಗಳೆಂಬ ಸಮುದ್ರದ ಸುಳಿಯಲ್ಲಿ ಸುತ್ತುತ್ತಿರುವನಲ್ಲ! ಎಂದು ದಯಾಪೂರಿತ ಹೃದಯನಾಗಿ ಆತನಿಗೆ ಹಿಡಿದಿರುವ

ಮೋಹಪಿಶಾಚಿಯನ್ನು ಓಡಿಸುವುದಕ್ಕೆ ಸಮರ್ಥವಾದ ಶಿವದೀಕ್ಷೆಯೆಂಬ ಮಹಾಯಂತ್ರವನ್ನು ಧರಿಸಿ ಆ ಪಿಶಾಚಿಯನ್ನೋಡಿಸಿ ಶಿವಲಿಂಗಸಂಬಂಧ ದ್ವಾರಾ ಮಹಾಮಂತ್ರೋಪದೇಶವನ್ನು ಮಾಡಿ ಶಿವನಿಗೂ ಈತನಿಗೂ ಇರುವ ಸಂಬಂಧವನ್ನು ವೇದಾಂತವಾಕ್ಯಗಳಿಂದ ಬೋಧಿಸಿ ವಿವೇಕ ವನ್ನುಂಟುಮಾಡಿ ಪರಮಾತ್ಮನ ಬಳಿಗೆ ಸೇರಿರುತ್ತಾನೆ.

ಹೀಗೆ ಪರಮಾತ್ಮನ ವಿಷಯದಲ್ಲಿ ಅವಿವೇಕದಿಂದ ಜೀವಾತ್ಮನಿ ಗುಂಟಾಗಿರುವ ದೋಷವನ್ನು ಪರಿಹರಿಸಿ, ಪರಮಾತ್ಮನ ಪ್ರೇಮವುಂಟಾಗು ವಂತೆ ಮಾಡುವ ಶಕ್ತಿಯನ್ನು ಪಡೆದಿರುವ ಗುರುಗಳ ಮಹೋಪಕಾರವನ್ನು ಯಾರೂ ಮರೆಯುವಂತೆ ಇಲ್ಲವು. ಆದ್ದರಿಂದ ಶಾಸ್ತ್ರಕಾರರು —

ಗುರುರೇವ ಪರಂತತ್ವಂ ಪ್ರಕಾಶಯತಿ ದೇಹಿನಾಂ । ಕೋವಾ ಸೂರ್ಯಂ ವಿನಾಲೋಕೇ ತಮಸೋ ವಿನಿವರ್ತಕಃ ॥ ಅಂತರೇಣ ಗುರುಂ ಸಿದ್ಧಂ ಕಥಂ ಸಂಸಾರನಿಷ್ಕೃತಿಃ । ನಿದಾನಜ್ಞಂವಿನಾವೈದ್ಯಂ ಕೋವಾ ರೋಗೋ ನಿವರ್ತತೆ ॥ ಅಪರೋಕ್ಷಸ್ಯತತ್ವಸ್ಯ ಜೀವನ್ಮುಕ್ತಸ್ವಭಾವಿನಃ ॥ ಗುರೋಃ ಕಟಾಕ್ಷಸಂಸಿದ್ಧೇ ಕೋವಾ ಲೋಕೇಷು ದುರ್ಲಭಃ ॥ ಕ್ಷೀರಾಬ್ಧಿರಿವಸಿಂಧೂನಾಂ ಸುಮೇರುರಿವ ಭೂಭೃತಾಂ। ಗ್ರಹಾಣಾಮಿವ ತಿಗ್ಮಾಂಶುರ್ಮಣೀನಾಮಿವ ಕೌಸ್ತುಭಃ ॥

ಸೂರ್ಯನು ಉದಯಿಸಿದ ಹೊರತು ಜಗವನ್ನಾವರಿಸಿದ ಅಂಧಕಾರವು ಹೇಗೆ ತೊಲಗುವುದಿಲ್ಲವೋ, ರೋಗ ನಿಧಾನವನ್ನು ತಿಳಿದ ವೈದ್ಯನಿಲ್ಲದೆ ರೋಗವು ಹೇಗೆ ನಿವೃತ್ತಿಯಾಗುವುದಿಲ್ಲವೋ, ಹಾಗೆ ಗುರುವಿಲ್ಲದೆ ಜನನ ರೂಪವಾದ ದುಃಖವು ಶಾಂತವಾಗುವುದಿಲ್ಲ. ಗುರುವೇ ನಿಜತತ್ತ್ವವನ್ನು ಪ್ರಕಾಶಗೊಳಿಸುತ್ತಾನಲ್ಲದೆ, ಇತರರು ಪ್ರಕಾಶಗೊಳಿಸಲಾರರು. ಗರುವಿನ ಅನುಗ್ರಹವನ್ನು ಪಡೆದವನಿಗೆ ಯಾವುದು ತಾನೇ ದುರ್ಲಭವು? ಸಮುದ್ರ ಗಳೊಳಗೆ ಕ್ಷೀರಸಮುದ್ರವೂ ಗಿರಿಗಳೊಳಗೆ ಮೇರುಗಿರಿಯೂ ಗ್ರಹಗಳೊಳಗೆ ಸೂರ್ಯಗ್ರಹವೂ ರತ್ನಗಳೊಳಗೆ ಕೌಸ್ತುಭರತ್ನವೂ ಶ್ರೇಷ್ಠಗಳಾಗಿರುವಂತೆ ಎಲ್ಲಕ್ಕೂ ಗುರುವೇ ಶ್ರೇಷ್ಠನಾಗಿರುತ್ತಾನೆಂದು ಗುರು ಮಹತ್ವವನ್ನು ಬಹಳ ವಾಗಿ ಕೊಂಡಾಡಿರುತ್ತಾರೆ. ಆದುದರಿಂದ ಜೀವಾತ್ಮನಿಗೂ ಪರಮಾತ್ಮನಿಗೂ ನಿಕಟಸಂಬಂಧವಿದ್ದರೂ ಆಸಂಬಂಧವನ್ನು ಜೀವಾತ್ಮನು ಮರೆತಿರುವುದರಿಂದ ಗುರುವೆಂಬ ಪರಮಾತ್ಮನು ಜೀವಾತ್ಮ ಪರಮಾತ್ಮರಿಗಿರುವ ಸಂಬಂಧವನ್ನ ರುಹಿ ಜೀವಾತ್ಮನನ್ನು ಬಂಧನದಿಂದ ನಿವೃತ್ತಿಗೊಳಿಸುವ ಉಪಾಯವನ್ನು

ತಿಳಿದಿರುವುದರಿಂದಲೇ ವೇದಾಗಮಾದಿಗಳು ಸಹ ಆ ಶ್ರೀ ಗುರುವನ್ನು ಮುಕ್ತಕಂಠದಿಂದ ಹೊಗಳಿರುತ್ತವೆ. ಘಟಾದಿ ಪದಾರ್ಥಗಳನ್ನು ನೋಡುವುದಕ್ಕೆ ದೀಪವು ಹೇಗೆ ಸಹಾಯಭೂತವಾಗಿದೆಯೋ ಹಾಗೆ ಆ ಪರಮಾತ್ಮತತ್ವವನ್ನು ಪ್ರತ್ಯಕ್ಷೀಕರಿಸಲು ಗುರುವೇ ಸಂಪೂರ್ಣ ಸಹಾಯಕನಾಗಿರುವನು. ಹೀಗಿದ್ದರೂ ಐಹಿಕಸೌಖ್ಯವೇ ಪರಮಧ್ಯೇಯವಾಗುಳ್ಳ ಈಗಿನ ಕಾಲದಲ್ಲಿ ಕೆಲವರು ಭವರೋಗಮಹಾವೈದ್ಯನಾದ ಗುರುವಿನ ವಿಷಯದಲ್ಲಿ ಅಲಕ್ಷ್ಯವುಳ್ಳವರಾಗಿರುವುದಲ್ಲದೆ ತಮ್ಮ ತಮ್ಮ ಸ್ವೇಚ್ಛಾವಿಹಾರಿತ್ವಕ್ಕೆ ಗುರುಗಳೆಂಬವರು ಪ್ರತಿಬಂಧಕವನ್ನುಂಟುಮಾಡುತ್ತಾರೆಂಬ ದ್ವೇಷಬುದ್ಧಿಯಿಂದ ಗುರುಗಳ ಮೇಲೆಯೇ ಟೀಕೆಟಿಪ್ಪಣಿಗಳಿಗೆ ಪ್ರಾರಂಭ ಮಾಡಿದ್ದಾರೆ. ಇಂಥ ಗುರುದೂಷಕರಾದ ಪರಮನಾಸ್ತಿಕರು ಮರದ ಮೇಲೆ ಕುಳಿತುಕೊಂಡು ಬುಡವನ್ನು ಕಡಿಯಲು ಹೊರಟ ಮಹಾಪಂಡಿತನಿಗೆ ಸಮಾನರಾಗುವರು. ಇಂಥವರೆಂದೂ ಆ ಪರಮಾತ್ಮನ ಅನುಗ್ರಹಕ್ಕೆ ಭಾಗಿಗಳಾಗಲಾರರು.

ಪರಮಾತ್ಮನಲ್ಲಿ ಸಹಜಪ್ರೇಮವುಳ್ಳವರೆಂದೂ ಗುರುದೂಷಣೆ ಮಾಡುವುದಿಲ್ಲ. ಯಾರು ಗುರುದೂಷಕರೋ ಅವರು ಪರಮಾತ್ಮ ದೂಷಕರೆಂದೂ ಯಾರು ಗುರುಪ್ರೇಮಿಗಳೋ ಅವರು ಪರಮಾತ್ಮ ಪ್ರೇಮಿಗಳೆಂದೂ ಶಾಸ್ತ್ರವು ಸಾರುತ್ತಿರುವುದು. ಗುರುವಿನ ವಿಷಯದಲ್ಲಿ ತೋರಿಸುತ್ತಿರುವ ಪ್ರೀತಿ ದ್ವೇಷಗಳೇ ಪರಮಾತ್ಮನ ಪ್ರೀತಿ ದ್ವೇಷಗಳ ಬಾಹ್ಯಚಿನ್ಹಗಳಾಗಿರುತ್ತವೆ.

ಕರಸ್ಥಂ ಪಾಯಸಂ ತ್ಯಕ್ತ್ವಾ ಕೂರ್ಪರಂ ಲೇಢಿ ಚಾತ್ಮನಃ ।
ಯಸ್ಸ್ವಸ್ಯ ಗುರುಪೂಜಾಂ ತು ತ್ಯಕ್ತ್ವಾ ಶಿವಪದಂ ಯಜೇತ್ ॥
ಪರಾಙ್ಮುಖಶ್ಶಿವಸ್ತಸ್ಯ ನರಕಂ ಸಂಪ್ರಯಚ್ಛತಿ ।
ಏತತ್ಸರ್ವಂ ಪರಿಜ್ಞಾಯ ಪೂಜಾಂಕುರ್ಯಾದ್ಗುರೋಃಸ್ವಯಂ ।
ಗುರುಪೂಜಾಭಿಸಂತುಷ್ಟಃ ಸ್ವಸಾಯುಜ್ಯಂ ಪ್ರಯಚ್ಛತಿ ॥

ಯಾವನು ಗುರುಪೂಜಾನಂದನಾದಿಗಳನ್ನು ತಿರಸ್ಕರಿಸಿ ಶಿವಲಿಂಗವನ್ನು ಮಾತ್ರ ಪುರಸ್ಕರಿಸಲಿಕ್ಕೆ ಹೊರಡುತ್ತಾನೆಯೋ, ಅಂಥವನು ತನ್ನ ಅಂಗೈಯಲ್ಲಿ ಸಿದ್ಧವಾಗಿರುವ ಪಾಯಸವನ್ನು ಸೇವಿಸದೆ ಮೊಣಕೈಯನ್ನು ನೆಕ್ಕಲಿಕ್ಕೆ ಹೊರಟ ಮೂಢನಂತೆ ಹಾಸ್ಯಾಸ್ಪದನಾಗುವನಲ್ಲದೆ ಅಂಥವನ ವಿಷಯದಲ್ಲಿ ಶಿವನು ಸಹ ಹಿಮ್ಮುಖನಾಗಿ ನರಕವನ್ನು ಕೊಡುತ್ತಾನೆ. ಇದೆಲ್ಲ

ವನ್ನೂ ತಿಳಿದು ಗುರುಪೂಜಾವಂದನಾದಿಗಳಲ್ಲಿ ಆಸಕ್ತನಾದರೆ ಶಿವನು ಆತನ ವಿಷಯದಲ್ಲಿ ಸಂತುಷ್ಟನಾಗಿ ತನ್ನಲ್ಲಿ ಸೇರಲು ಅವಕಾಶ ಕೊಡುತ್ತಾನೆ. ಆದುದರಿಂದ ಗುರುದ್ರೋಹ ಬುದ್ಧಿಯನ್ನು ದೂರಮಾಡಿ ಗುರುಗಳಲ್ಲಿ ಶರಣಾಗತರಾಗಿ ಪೂಜಾವಂದನಾದಿಗಳಿಂದ ಗುರುಗಳನ್ನು ಸಂತೋಷಗೊಳಿಸಿ, ಆ ಗುರುಗಳ ಮೂಲಕವಾಗಿ ಪರಮಾತ್ಮನಿಗೂ ತಮಗೂ ಇರುವ ನಿತ್ಯ ಸಂಬಂಧವನ್ನು ತಿಳಿದುಕೊಂಡು ಬಂಧನದಿಂದ ನಿವೃತ್ತರಾಗಿ ಮಾನವಜನ್ಮ ವನ್ನು ಸಾರ್ಥಕಗೊಳಿಸುವುದೇ ಪ್ರತಿಯೊಬ್ಬ ಆಸ್ತಿಕನ ಕರ್ತವ್ಯವಾಗಿದೆ.

## ಶಿವಾಧಿಕ್ಯ

"ಬ್ರಾಹ್ಮಣೋಸ್ಯ ಮುಖಮಾಸೀತ್" "ಚಂದ್ರಮಾ ಮನಸೋ-ಜಾತಃ" "ದ್ಯಾಭ್ಯಾಮಾಸೀದಂತರಿಕ್ಷಂ" ಇತ್ಯಾದಿ ಪುರುಷಸೂಕ್ತಮಂತ್ರಗಳಿಂದ ಚರಾಚರಾತ್ಮಕವಾದೀ ಸಕಲ ಪ್ರಪಂಚವು ಸಾಕ್ಷಾತ್ಪರಶಿವಮೂರ್ತಿಯಿಂದಲೇ ನಿರ್ಮಿತವಾಯಿತೆಂದು ಸ್ಪಷ್ಟವಾಗುವುದು. ಈ ಮಂತ್ರಾರ್ಥವನ್ನೇ ವ್ಯಾಸಮಹರ್ಷಿಗಳು ತಮ್ಮಿಂದ ರಚಿಸಲ್ಪಟ್ಟ ಸ್ಕಂದಪುರಾಣದಲ್ಲಿ ಬಹು ವಿಶದವಾಗಿ ಉಲ್ಲೇಖಿಸಿರುವರು. ಆದಿಯಲ್ಲಿ ಪರಶಿವನು ತನ್ನ ಇಚ್ಛಾಶಕ್ತಿಯಿಂದ ಬ್ರಹ್ಮ ವಿಷ್ಣು ಈ ಉಭಯ ದೇವತೆಗಳನ್ನು ಸೃಷ್ಟಿಸಿದನೆಂದೂ, ಅನಂತರ ಅಖಂಡವಾದ ಪ್ರಪಂಚವನ್ನು ಸೃಷ್ಟಿಸಿ ಈ ಉಭಯರನ್ನೂ ಒಂದೊಂದು ಕಾರ್ಯದಲ್ಲಿ ನಿಯುಕ್ತರನ್ನಾಗಿ ಮಾಡಿದನೆಂದೂ ಅನೇಕ ಗ್ರಂಥಗಳಿಂದ ತಿಳಿದುಬರುವುದು. ಪರಶಿವನು ಸಕಲ ಪ್ರಪಂಚಕ್ಕೆ ಮೂಲಕಾರಣನಾದುದರಿಂದಲೇ ದೇವ ದಾನವ ಮಾನವಾದಿಗಳೆಲ್ಲರೂ ಜಗದಾದಿಯಿಂದಲೂ ಆತನಲ್ಲಿ ಅಸಾಧಾರಣವಾದ ಭಕ್ತಿಯನ್ನಿಟ್ಟು ಅವನ ಪೂಜಾ, ಧ್ಯಾನ, ಮನನಾದಿಗಳ ದ್ವಾರಾ ಪರಮಪುರುಷಾರ್ಥವಾದ ಮೋಕ್ಷವನ್ನು ಹೊಂದುತ್ತ ಬಂದಿರುವದು ಲೋಕಪ್ರಸಿದ್ಧವೇ ಇದೆ. ಆದರೆ ಇತ್ತೀಚೆಗೆ ಕೆಲಕೆಲವರಲ್ಲಿ ಮತಭೇದವುಂಟಾಗಿ ನಾನಾ ದೇವತೆಗಳನ್ನು ಪೂಜಿಸಲಿಕ್ಕೆ ಉಪಕ್ರಮಿಸಿದರು. ಅಂದಿನಿಂದ ಭರತ ಖಂಡದಲ್ಲಿ ಶಿವಭಕ್ತಿಯು ಮೊದಲಿಗಿಂತಲೂ ಸ್ವಲ್ಪಸ್ವಲ್ಪವಾಗಿ ಕಡಿಮೆಯಾಗುತ್ತ ಬಂದಿತು. ಆದರೆ ಅನ್ಯಮತೀಯರಲ್ಲಿ ಶಿವಭಕ್ತಿಯು ಹ್ರಾಸವಾಗುತ್ತ ಬಂದರೂ ವೀರಶೈವರಲ್ಲಿ ಮಾತ್ರ ಅನಾದಿಕಾಲದಿಂದ ಈ ಹೊತ್ತಿನವರೆಗೆ ಅಚ್ಛಳಿಯದಂತೆ ಬಂದಿರು

ವುದು ಸಂತೋಷಪ್ರದವಾಗಿದೆ. ಈ ರೀತಿಯಾಗಿ ಶಿವನ ವಿಷಯದಲ್ಲಿ ಅಸಾಧಾರಣವಾದ ಭಕ್ತಿಯನ್ನಿಟ್ಟು ವರ್ತಿಸಬೇಕೆನ್ನುವದೇ ಇವರ ಸಿದ್ಧಾಂತವು. ಪೂರ್ವಕಾಲದಲ್ಲಿ ವೀರಶೈವ ಮತದಲ್ಲಿ ಜನ್ಮವೆತ್ತಿದ ಕೆಲವು ಜನ ಮಹಾತ್ಮರು ಶಿವನ ವಿಷಯದಲ್ಲಿ ತಮ್ಮ ಭಕ್ತಿಯನ್ನು ಎಲ್ಲಿಯವರೆಗೆ ತೋರ್ಪಡಿಸಿರುವರೆಂಬ ವಿಷಯವನ್ನು ಪರಿಶೀಲಿಸಿದರೆ ಅತ್ಯಂತ ಆಶ್ಚರ್ಯವೆನಿಸುತ್ತದೆ.

ಈಗ್ಗೆ ೬೦೦ ವರ್ಷಗಳ ಪೂರ್ವದಲ್ಲಿ ವೀರಶೈವಮತದ ಗುರುವಂಶೋದ್ಭವನಾದ ಹರದತ್ತಾಚಾರ್ಯನೆಂಬ ಲೋಕವಿಖ್ಯಾತ ಪಂಡಿತನು ಕಾಳಹಸ್ತಿ ಕ್ಷೇತ್ರದಲ್ಲಿ ವಾಸಿಸುತ್ತಿದ್ದನು. ಈತನು ಅಸಾಧಾರಣ ಶಿವಭಕ್ತಿಸಂಪನ್ನನೂ ಶಿವಾದ್ವೈತಸಿದ್ಧಾಂತಪಾರಾವಾರಪಾರದೃಶ್ಯನೂ, ಪಂಚಾಚಾರಪರಾಯಣನೂ, ಲಿಂಗಾಂಗ ಸಾಮರಸ್ಯಲೋಲನೂ, ಷಟ್‌ಸ್ಥಲಜ್ಞಾನಿಯೂ, ಆಗಿ ಶಿವಸರ್ವೋತ್ತಮತ್ವವನ್ನು ಜಗತ್ತಿನಲ್ಲಿರತಕ್ಕ ಮಾನವರಿಗೆ ಉಪದೇಶಿಸುತ್ತ ಆ ವಿಷಯವನ್ನು ನೆಲಗೊಳಿಸುತ್ತಿರಲು ಅನ್ಯಮತೀಯರು ಈತನ ಅಸಾಧಾರಣವಾದ ಶಿವಭಕ್ತಿನಿಷ್ಠೆಯನ್ನು ಕಂಡು ಸಹಿಸಲಾರದೆ ವಾದ ಮಾಡಲಾರಂಭಿಸಲು, ಆಗ್ಯೆ ಹರದತ್ತಾಚಾರ್ಯನು ಶಾಸ್ತ್ರಾರ್ಥ ಮೂಲಕವಾಗಿ ವೇದೋಪನಿಷದಾಗಮ ಪುರಾಣಾದಿಗಳ ಪ್ರಬಲಪ್ರಮಾಣಗಳೊಡನೆ ಈ ಬ್ರಹ್ಮಾಂಡ ಮಂಡಲದಲ್ಲಿ ಶಿವನೊರ್ವನೇ ಪೂಜ್ಯನು. ಮಿಕ್ಕ ವಿಷ್ಣು ಬಹ್ಮಾದಿ ದೇವತೆಗಳೆಲ್ಲರೂ ಪೂಜಕರೆಂದು ಸಿದ್ಧಾಂತಗೊಳಿಸಿದನು. ಆಗ್ಯೆ ಪರವಾದಿಗಳು ಕುಂಠಿತರಾಗಿ ಹರದತ್ತಾಚಾರ್ಯನನ್ನು ಕುರಿತು ಎಲೈ ಹರದತ್ತಾಚಾರ್ಯನೇ? ನಿನ್ನೀ ವಾಗಾಡಂಬರಕ್ಕೆ ನಾವು ಮರುಳಾಗುವುದಿಲ್ಲ. ಹಾಗೆ ನಿಮ್ಮ ಪರಶಿವನೇ ದೇವತಾ ಸಾರ್ವಭೌಮನೂ ಪರಮಪೂಜ್ಯನೂ ಆಗಿದ್ದ ಪಕ್ಷದಲ್ಲಿ ಆ ವಿಷಯದಲ್ಲಿ ನಿನ್ನ ಮಹತ್ವ ಸ್ಥಿತಿಯನ್ನು ತೋರಿಸು; ನಾವು ನಂಬುತ್ತೇವೆ. ಇಲ್ಲವಾದರೆ ನಂಬುವುದಿಲ್ಲವೆಂದು ಹೇಳಲು, ಹರದತ್ತಾಚಾರ್ಯನು ಪರವಾದಿಗಳಾಡಿದ ಈ ಮಾತುಗಳನ್ನು ಕೇಳಿ ಒಡಂಬಟ್ಟು ಆ ಕ್ಷಣದಲ್ಲಿಯೇ ಉಕ್ಕಿನಿಂದ ನಿರ್ಮಿತವಾದ ಐದು ಮೆಟ್ಟಲುಗಳುಳ್ಳ ಏಣಿಯನ್ನು ಮಾಡಿಸಿ ಆ ಏಣಿಯನ್ನು ಬೆಂಕಿಯಿಂದ ಚನ್ನಾಗಿ ಕೆಂಪಾಗುವಂತೆ ಕಾಯಿಸಿ ಗೋಡೆಗೆ ಇಟ್ಟು ವೀರಭಕ್ತಿಯೊಡನೆ ಆ ಏಣಿಯ ಒಂದೊಂದು

ಕಾಲಿನ ಮೇಲೆ ನಿಂತು ಶಿವಾಧಿಕ್ಯವನ್ನು ಶ್ಲೋಕರೂಪವಾಗಿ ಸಾರಿದನು. ಐದು ಮೆಟ್ಟಲುಗಳ ಮೇಲೆ ನಿಂತು ಸಾರಿದ ಆ ಐದು ಶ್ಲೋಕಗಳು ಈ ಕೆಳಗೆ ಉದಾಹರಿಸಲ್ಪಟ್ಟಿವೆ.

ಶ್ಲೋ॥ ಗಾಯತ್ರ್ಯಾಬೋಧಿತತ್ವಾದಪಿಚ ನವಃಕ ಮುಖ್ಯೈ ರಾಘವ ಸ್ಥಾಪಿತತ್ವಾಚ್ಛೌರೇಃ ಕೈಲಾಸಯಾತ್ರಾಕ್ರಮಮುದಿತತಯಾಭೀಷ್ಟಸಂತಾನದಾನಾತ್ ॥ ನೇತ್ರೇಣ ಸ್ವೇನ ಸಾಕಂ ದಶಶತಕಮಲೈರ್ವಿಷ್ಣುನಾ ಪೂಜಿತತ್ವಾತ್ತಸ್ಮೈಚಕ್ರಪ್ರದಾನಾದಪಿ ಚ ಪಶುಪತಿಸ್ಸರ್ವದೇವಪ್ರಕೃಷ್ಟಃ ॥

ಎಂಬ ಈ ಶ್ಲೋಕವನ್ನು ಹೇಳಿಕೊಂಡು ಆ ಏಣಿಯ ಮೊದಲನೆಯ ಕಾಲಿನ ಮೇಲೆ ಹತ್ತಿ ನಿಂತನು.

ಶ್ಲೋ॥ ಕಂದರ್ಪಧ್ವಂಸಕತ್ವಾದ್ಗರಲಕಬಲನಾತ್ಕಾಲಗರ್ವಾಪಹತ್ವಾದ್ದೈತ್ಯೇಯಾವಾಸಭೂತ ತ್ರಿಪುರವಿದಳನಾದ್ದಕ್ಷಯಾಗೇ ಜಯಿತ್ವಾತ್ ॥ ಪಾರ್ಥಾಯ ಸ್ವಾಸ್ತ್ರದಾನಾನ್ನರಹರಿವಿಜಯಾನ್ಮಾಧವ ಸ್ತ್ರೀಶರೀರೇಶಾಸ್ತುಸ್ಸಂಪಾದಕತ್ವಾದಪಿಚ ಪಶುಪತಿಸ್ಸರ್ವದೇವಪ್ರಕೃಷ್ಟಃ ॥೨॥

ಎಂಬ ಶ್ಲೋಕವನ್ನು ಹೇಳಿಕೊಂಡು ಆ ಏಣಿಯ ಎರಡನೆಯ ಕಾಲಿನ ಮೇಲೆ ಹತ್ತಿನಿಂತನು.

ಶ್ಲೋ॥ ಭೂಮೌಲೋಕೈರನೇಕೈಸ್ಸತತವಿರಚಿ ತಾರಾಧನತ್ವಾದಮೀಷಾಮಷ್ಟೈಶ್ವರ್ಯ ಪ್ರದಾನಾದ್ದಶವಿಧವಪುಷಾ ಕೇಶವೇನಾರ್ಚಿತತ್ವಾತ್ ॥ ಹಂಸಕ್ರೋಡಾಂಗಧಾರಿದ್ರುಹಿಣಮುರಹರಾದ್ಯೃಷ್ಟ ಶೀರ್ಷಾಂಘ್ರಿಕ ತ್ವಾಜ್ಜನ್ಮಧ್ವಂಸಾದ್ಯಭಾವಾದಪಿಚ ಪಶುಪತಿಸ್ಸರ್ವದೇ ವಪ್ರಕೃಷ್ಟಃ ॥೩॥

ಎಂಬ ಶ್ಲೋಕವನ್ನು ಹೇಳಿಕೊಂಡು ಆ ಏಣಿಯ ಮೂರನೆಯ ಕಾಲಿನ ಮೇಲೆ ಹತ್ತಿ ನಿಂತನು.

ಶ್ಲೋ॥ ವಾರಾಣಸ್ಯಾಂಚ ಪಾರಾಶರಿನಿಯಮಿಭುಜಸ್ತಂಭಕತ್ವಾತ್ಪುರಾಣಾಂ ಪ್ರಧ್ವಂಸೇ ಕೇಶವೇನ ಶ್ರಿತವೃಷವಪುಷಾಧಾರಿತಕ್ಷ್ಮಾರಥತ್ವಾತ್ ॥ ಅಸ್ತ್ರೋಕಬ್ರಹ್ಮಶೀರ್ಷಾಸ್ಥ್ಯುಪಕಲಿತಗಲಾಲಂಕ್ರಿಯಾಭೂಷಿ ತತ್ವಾದ್ದಾತೃತ್ವಾದ್ ಜ್ಞಾನಮುಕ್ತ್ಯೋರಪಿಚಪಶು ಪತಿಸ್ಸರ್ವದೇವಪ್ರಕೃಷ್ಟಃ ॥೪॥

ಎಂಬ ಈ ಶ್ಲೋಕವನ್ನು ಹೇಳಿಕೊಂಡು ಆ ಏಣಿಯ ನಾಲ್ಕನೆಯ ಕಾಲಿನ ಮೇಲೆ ಹತ್ತಿನಿಂತನು.

ಶ್ಲೋ॥ ವೈಶಿಷ್ಟ್ಯ್ಯದ್ಯೋನಿಪೀಠಾಯಿತ ನರಕರಿಪುಶ್ಲಿಷ್ಟಭಾವೇನಶಂ–
ಭೋಸ್ಸ್ವಸ್ಯೈವಾರ್ಥಪ್ರತೀಕಾಯಿತ ಹರಿವಪುಷಾಲಿಂಗಿತತ್ವೇನ ಯದ್ವಾ ॥
ಅಪ್ರಾಧಾನ್ಯಾದ್ದ್ವಿಶಿಷ್ಟದ್ವಯಸಮಧಿಗಮೇ ಕೇಶವಸ್ಯೇಶನಿಂದಾಯುಕ್ತೇ–
ರ್ದೋಷಾವಹತ್ವಾದಪಿಚ ಪಶುಪತಿಸ್ಸರ್ವದೇವಪ್ರಕೃಷ್ಟಃ ॥೫॥

ಎಂಬ ಶ್ಲೋಕವನ್ನು ಹೇಳಿಕೊಂಡು ಆ ಏಣಿಯ ಐದನೆಯ ಕಾಲಿನ ಮೇಲೆ ಹತ್ತಿ ನಿಂತನು. ಆಗ ಆ ಪರವಾದಿಗಳೆಲ್ಲರೂ ಭಯಭಕ್ತಿಯುತರಾಗಿ ಶರಣಾಗತರಾದರು.

ಈ ಪ್ರಕಾರವಾಗಿ ವೀರಭಕ್ತಿಯಿಂದೊಡಗೂಡಿ ಸಾರಿದ ಈ ಐದು ಶ್ಲೋಕಗಳಲ್ಲಿ ಶಿವಾಧಿಕ್ಯವು ತುಂಬಿ ತುಳುಕುತ್ತಿರುವುದು. ಈ ಶ್ಲೋಕಗಳಲ್ಲಿರತಕ್ಕ ಒಂದೊಂದು ಮಾತುಗಳಿಗೆ ಎಷ್ಟು ಬೆಲೆ ಕೊಟ್ಟರೂ ತೀರದಾಗಿದೆ. ಈ ಶ್ಲೋಕಗಳು ಪ್ರತಿಯೊಬ್ಬ ವೀರಶೈವನ ಹೃತ್ಕಮಲದಲ್ಲಿ ವಾಸಮಾಡಬೇಕಾಗಿವೆ. ಈ ಐದು ಶ್ಲೋಕಗಳೇ "ಪಂಚಶ್ಲೋಕಿ" ಎಂಬ ಹೆಸರಿನಿಂದ ಪ್ರಸಿದ್ಧವಾದವು. ಈ ಪಂಚಶ್ಲೋಕಿಗೆ ಈಗ್ಗೆ ಎರಡುನೂರು ವರ್ಷಗಳ ಪೂರ್ವದಲ್ಲಿ ಕೆಳದೀ ಸಂಸ್ಥಾನವನ್ನಾಳುತ್ತಿದ್ದ ಪಂಡಿತಾಗ್ರೇಸರನೆಂದು ಪ್ರಸಿದ್ಧನಾದ ಬಸವಭೂಪಾಲನು "ಶೈವಸಂಜೀವಿನೀ" ಎಂಬ ಹೆಸರಿನಿಂದ ಸಂಸ್ಕೃತ ಭಾಷೆಯಲ್ಲಿ ಮಹತ್ತರವಾದ ವ್ಯಾಖ್ಯಾನವನ್ನು ಬರೆದಿರುವನು. ಈ ವ್ಯಾಖ್ಯಾನದ ಯೋಗ್ಯತೆಯು ಅತಿ ಮಹತ್ವದ್ದಾಗಿದೆ. ಒಟ್ಟಿಗೆ ಈ ಗ್ರಂಥವನ್ನು ಪರಿಶೀಲಿಸಿದರೆ ಶಿವಾಧಿಕ್ಯವು ಸರ್ವರಿಗೂ ಕರತಲಾಮಲಕವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಹರದತ್ತಾಚಾರ್ಯನು ಯಾವರೀತಿಯಾಗಿ ಶಿವನ ವಿಷಯದಲ್ಲಿ ತನ್ನ ನೈಜವಾದ ವೀರಭಕ್ತಿಯನ್ನು ತೋರಿಸಿ ಶಿವಾಧಿಕ್ಯವನ್ನು ನೆಲೆಗೊಳಿಸಿ ಜಗದ್ವಂದ್ಯನಾದನೋ ಅದರಂತೆಯೇ ಉದ್ಭಟಾರಾಧ್ಯ, ವ್ಯೋಮನಾರಾಧ್ಯ, ಚಂಡಭೈರವಾರಾಧ್ಯ, ವಜ್ರನಖಾರಾಧ್ಯ, ಭವಾನೀ ಶಂಕರಾರಾಧ್ಯ ಮೊದಲಾದ ವೀರಮಾಹೇಶ್ವರರು ಶಿವಭಕ್ತಿಯ ಮಹತ್ವವನ್ನು ತಮ್ಮ ಕಾಲದಲ್ಲಿ ನೆಲೆಗೊಳಿಸಿ ಜಗದ್ವಂದ್ಯರಾದರು.

"ಯದಾ ತಮಸ್ತನ್ನದಿವಾ ನರಾತ್ರಿರ್ನಸನ್ನಚಾಸಚ್ಛಿವ ಏವ ಕೇವಲಃ"
"ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ"
"ಉಮಾಸಹಾಯಂ ಪರಮೇಶ್ವರಂ ಪ್ರಭುಂ"

ಇತ್ಯಾದ್ಯನೇಕಶ್ರುತಿಗಳು ಶಿವನೇ ಅನಾದಿಮೂರ್ತಿಯೆಂದೂ, ಆವನೇ ಪರಬ್ರಹ್ಮನೆಂದೂ, ಶಕ್ತಿವಿಶಿಷ್ಟನೆಂದೂ ಮುಕ್ತಕಂಠದಿಂದ ಸಾರುತ್ತಲಿರುವುವು. ಶಕ್ತಿವಿಶಿಷ್ಟವಾದ ಆ ಪರಶಿವಮೂರ್ತಿಯಿಂದಲೇ ಚರಾಚರಾತ್ಮಕವಾದೀ ಜಗತ್ತು ನಿರ್ಮಿತವಾಗಿರುವದೆಂದು ತ್ರಿಕಾಲಜ್ಞಾನಿಗಳಾದ ಅನೇಕ ಜನ ಮಹರ್ಷಿಗಳು ತಮ್ಮ ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿರುತ್ತಾರೆ. ವಿಷ್ಣು, ಬ್ರಹ್ಮ, ಇಂದ್ರ, ಕುಬೇರ ಮೊದಲಾದ ದೇವತೆಗಳು ಆ ಪರಮಾತ್ಮನ ಉಪಾಸನೆಯಿಂದಲೇ ತಮಗೆ ಪ್ರಾಪ್ತವಾಗಿರುವ ಅಮೂಲ್ಯಸ್ಥಾನಗಳನ್ನು ಅಲಂಕರಿಸಿದರೆಂದು ವ್ಯಾಸಮಹರ್ಷಿಯು ತಾನು ರಚಿಸಿದ ಸ್ಕಾಂದಾದಿಪುರಾಣಗಳಲ್ಲಿ ಉಲ್ಲೇಖಿಸಿರುತ್ತಾನೆ. ಸಮಸ್ತ ದೇವತೆಗಳಿಗೆಲ್ಲ ಶಿವನೇ ಉಪಾಸ್ಯಮೂರ್ತಿಯಾಗಿರುವುದರಿಂದ, ಆ ಶಿವನಿಗೆ "ಮಹಾದೇವ" ನೆಂಬ ನಾಮವು ಅನ್ವರ್ಥವಾಗಿ ಪ್ರಾಪ್ತವಾಗಿರುವದು. ಪೂರ್ವಕಾಲದಲ್ಲಿ ಭರತಖಂಡದಲ್ಲಿರತಕ್ಕ ಸಮಸ್ತಯೋಗಿಗಳೂ, ಚಕ್ರವರ್ತಿಗಳೂ, ಮಾನವರೂ ಶಿವನೇ ಸರ್ವೋತ್ತಮನೆಂದು ನಂಬಿ, ಆತನ ಸ್ವರೂಪವಾದ ಶಿವಲಿಂಗಮೂರ್ತಿಯನ್ನು ಪ್ರತಿಯೊಂದು ಸ್ಥಾನದಲ್ಲಿಯೂ ಸ್ಥಾಪಿಸಿ, ನಿಸ್ಸೀಮ ಭಕ್ತಿಯಿಂದ ಆವನ ಉಪಾಸನೆಯನ್ನು ಮಾಡಿ ಕೈವಲ್ಯಸುಖವನ್ನನುಭವಿಸಿದರು. ಪ್ರಾಚೀನಮಹರ್ಷಿಗಳು ಶಿವಲಿಂಗಮೂರ್ತಿಯನ್ನು ಸ್ಥಾಪಿಸಿ ಪೂಜಿಸಿದಂತೆ, ಇನ್ನಾವ ಮೂರ್ತಿಗಳನ್ನಾಗಲಿ ಸ್ಥಾಪಿಸಲಿಲ್ಲ ಮತ್ತು ಪೂಜಿಸಲಿಲ್ಲ. ಲೋಕವಿಖ್ಯಾತನಾದ ವ್ಯಾಸಮಹರ್ಷಿಯು ತಾನು ಆದಿಯಲ್ಲಿ ವಿಷ್ಣುಭಕ್ತನಾಗಿ, ವಿಷ್ಣುವೇ ದೇವೋತ್ತಮನೆಂದು ಸಾರುತ್ತ ಕಾಶೀಕ್ಷೇತ್ರಕ್ಕೆ ಹೋಗಿ, ವಿಶ್ವನಾಥನ ದೇವಾಲಯದಲ್ಲಿಯೂ ಸಹ " ನ ದೇವಃ ಕೇಶವಾತ್ಪರಃ" ಎಂದು ವಿಷ್ಣುವಿನ ಆಧಿಕ್ಯವನ್ನು ಸಾರಲು, ಕೂಡಲೇ ವ್ಯಾಸನು ನಂದೀಶ್ವರನಿಂದ ಹಸ್ತಸ್ತಂಭನವನ್ನು ಹೊಂದಿ, ಅಸಾಧಾರಣವಾದ ದುಃಖಕ್ಕೀಡಾದನು. ಆಗ್ಗೆ ವಿಷ್ಣುವು ವ್ಯಾಸನ ಹೃದಯದಲ್ಲಿ ಬಂದು, ಈ ರೀತಿಯಾಗಿ ಬೋಧಿಸಿದನು—

ಏಕ ಏವಹಿ ವಿಶ್ವೇಶೋ ದ್ವಿತೀಯೋ ನಾಸ್ತಿ ಕಶ್ಚನ ॥೬೯॥

ತತ್ಪ್ರಸಾದಾದಹಂ ಚಕ್ರೀ ಲಕ್ಷ್ಮೀಶಸ್ತತ್ಪ್ರಭಾವತಃ ।
ತ್ರೈಲೋಕ್ಯರಕ್ಷಾಸಾಮರ್ಥ್ಯಂ ದತ್ತಂ ತೇನೈವ ಶಂಭುನಾ । ॥೭೦॥

ತದ್ಭಕ್ತ್ಯಾ ಪರಮೈಶ್ವರ್ಯಂ ಮಯಾ ಲಬ್ಧಂ ವರಾತ್ತತಃ ।
ಇದಾನೀಂ ಸ್ತುಹಿ ತಂ ಶಂಭುಂ ಯದಿ ಮೇ ಶುಭಮಿಚ್ಛಸಿ ॥೫೧॥

ಕಾಶೀಖಂಡ ೯೫ನೆಯ ಅಧ್ಯಾಯ.

ಎಲೈ ವ್ಯಾಸನೇ! ಸಮಸ್ತದೇವತೆಗಳಲ್ಲಿ ವಿಶ್ವನಾಥನೇ ಮುಖ್ಯನಾಗಿ ಇದ್ದಾನೆ; ಅವನನ್ನು ಬಿಟ್ಟು ಎರಡನೆಯವನು ಯಾವನೂ ಮುಖ್ಯನಲ್ಲ; ಆ ವಿಶ್ವನಾಥನ ಪ್ರಸಾದದಿಂದಲೇ ನಾನು ಚಕ್ರಪಾಣಿಯೂ,ಲಕ್ಷ್ಮೀಪತಿಯೂ ತ್ರೈಲೋಕ್ಯರಕ್ಷಕನೂ ಆಗಿದ್ದೇನೆ; ಅಲ್ಲದೆ ಆ ವಿಶ್ವನಾಥನಲ್ಲಿ ಅಸಾಧಾರಣ ವಾದ ಭಕ್ತಿಯನ್ನಿಟ್ಟು ಪರಮೈಶ್ವರ್ಯವನ್ನು ಪಡೆದಿದ್ದೇನೆ; ನೀನು ನನಗೆ ಶುಭವನ್ನು ಕೋರುವವನಾದರೆ, ಕೂಡಲೆ ಆ ವಿಶ್ವನಾಥನನ್ನು ಸ್ತುತಿಸು. ಎಂದು ಆಜ್ಞೆಮಾಡಲು, ಆಗ್ಗೆ ವ್ಯಾಸನು ಗರ್ವದಿಂದ ದೂರನಾಗಿ ಶ್ರೀವಿಶ್ವನಾಥನನ್ನು ನಾನಾರೀತಿಯಾಗಿ ಸ್ತುತಿಸಲಾರಂಭಿಸಿದನು.

ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ
ತದ್ಬ್ರಹ್ಮೈಕಂ ನೇಹ ನಾನಾಸ್ತಿ ಕಿಂಚಿತ್ ।
ಯದ್ವ್ಯಸ್ಯನ್ಯಃ ಕೋಽಪಿವಾ ಕುತ್ರಚಿದ್ವಾ
ವ್ಯಾಚಷ್ಟಾಂ ತದ್ವ್ಯಸ್ಯ ಶಕ್ತಿರ್ಮದಗ್ರೇ ॥೫೬॥

ಯಃ ಕ್ಷೀರಾಬ್ಧೇರ್ಮಂದರಾಘಾತಜಾತೋ
ಜ್ವಾಲಾಮಾಲಃ ಕಾಲಕೂಟೋಽತಿಭೀಮಃ ।
ತಂ ಸೋಢುಂ ವಾ ಕಃಪರೋಽಭೂನ್ಮಹೇಶಾ
ದ್ಯಜ್ಜ್ವಾಲಾಭಿಃ ಕೃಷ್ಣತಾಮಾಪ ವಿಷ್ಣುಃ ॥೫೭॥

ಯದ್ಬಾಣೋಽಭೂಚ್ಛ್ರೀಪತಿರ್ಯಸ್ಯ ಯುತಾ
ಲೋಕೇಶೋ ಯತ್ಸ್ಯಂದನಂ ಭೂಃ ಸಮಸ್ತಾ ।
ವಾಹಾ ವೇದಾ ಯಸ್ಯ ವೈ ದೃಷ್ಟಿಪಾತಾ
ದ್ದಗ್ಧಾ ಗ್ರಾಮಾಸ್ತ್ರೈಪುರಾಸ್ತತ್ಸಮಃ ಕಃ ॥೫೮॥

ಯಃ ಕಂದರ್ಪೋ ವೀಕ್ಷ್ಯಮಾಣಃ ಸಮಾನಂ
ದೇವೈರನ್ಯೈರ್ಭಸ್ಮ ಜಾತಃ ಸ್ವಯಂ ಹಿ ।
ಪೌಷ್ಪೈರ್ಬಾಣೈಃ ಸರ್ವವಿಶ್ವೈಕಜೇತಾ
ಕೋ ವಾ ಸ್ತುತ್ಯಃ ಕಾಮಜೇತುಸ್ತುತೋಽನ್ಯಃ ॥೫೯॥

ಯಂ ವೈ ವೇದೋ ವೇದ ನೋ ನೈವವಿಷ್ಣು
ರ್ನೋವಾ ವೇಧಾ ನೋ ಮನೋ ನೈವ ವಾಣೀ ।

ತಂ ದೇವೇಶಂ ಮಾದೃಶಃ ಕೋಽಲ್ಪಮೇಧಾ
ಯಾಥಾತ್ಮ್ಯಾದ್ವೈ ವೇತ್ತ್ಯಹೋ ವಿಶ್ವನಾಥಂ ॥೬೦॥

ಯಸ್ಮಿನ್ ಸರ್ವಂ ಯಸ್ತು ಸರ್ವತ್ರ ಸರ್ವೋ
ಯೋ ವೈ ಕರ್ತಾ ಯೋಽವಿತಾಯೋಽಪಹರ್ತಾ।
ನೋ ಯಸ್ಯಾದಿರ್ಯಃ ಸಮಸ್ತಾದಿರೇಕೋ
ನೋ ಯಸ್ಯಾಂತೋ ಯೋಽಂತಕೃತ್ತಂ ನತೋಽಸ್ಮಿ ॥೬೧॥

ಯಸ್ಯೈಕಾಖ್ಯಾ ವಾಜಿಮೇಧೇನ ತುಲ್ಯಾ
ಯಸ್ಯಾನತ್ಯಾ ಚೈಕಯಾಽಲ್ಪೇಂದ್ರಲಕ್ಷ್ಮೀಃ।
ಯಸ್ಯ ಸ್ತುತ್ಯಾ ಲಭ್ಯತೇ ಸತ್ಯಲೋಕೋ
ತಸ್ಯಾರ್ಚಾತೋ ಮೋಕ್ಷಲಕ್ಷ್ಮೀರದೂರಾ ॥೭೨॥

ನಾನ್ಯಂ ದೇವಂ ವೇದ್ಮ್ಯಹಂ ಶ್ರೀಮಹೇಶಾ
ನ್ನಾನ್ಯಂ ದೇವಂ ಸ್ತೌಮಿ ಶಂಭೋರ್ಋತೇಽಹಂ।
ನಾನ್ಯಂ ದೇವಂ ವಾ ನಮಾಮಿ ತ್ರಿನೇತ್ರಾತ್
ಸತ್ಯಂ ಸತ್ಯಂ ಸತ್ಯಮೇತನ್ಮೃಷಾ ನ ॥೬೩॥

ಕಾಶೀಖಂಡ ೯೫ನೆಯ ಅಧ್ಯಾಯ.

ಈ ರೀತಿಯಾಗಿ ವ್ಯಾಸನು ಅಸಿತರಸಾಧಾರಣವಾದ ಭಕ್ತಿವಿಶೇಷದಿಂದ ವಿಶ್ವನಾಥನನ್ನು ಭಜಿಸಲು, ಬಾಹುಬಂಧನದಿಂದ ಬಿಡುಗಡೆಯನ್ನು ಹೊಂದಿ, ಶಿವನಿಂದೆಯಿಂದ ತನಗೆ ಪ್ರಾಪ್ತವಾದ ದೋಷಪರಿಹಾರಕ್ಕೋಸ್ಕರ ಗಂಗಾನದಿಯ ತೀರದಲ್ಲಿ ತನ್ನ ಹೆಸರಿನಿಂದ "ವ್ಯಾಸೇಶ್ವರ" ಎಂಬ ಶಿವಲಿಂಗವನ್ನು ಸ್ಥಾಪಿಸಿದನು. ಈ ವಿಷಯವು ಕಾಶೀಖಂಡದ ೯೫ ನೆಯ ಅಧ್ಯಾಯದಲ್ಲಿ—

ಪಾರಾಶರ್ಯಸ್ತದಾರಭ್ಯ ಶಂಭುಭಕ್ತಿಪರೋಽಭವತ್!
ಲಿಂಗಂ ವ್ಯಾಸೇಶ್ವರಂ ಸ್ಥಾಪ್ಯ ಘಂಟಾಕರ್ಣಪ್ರದಾಗ್ರತಃ ॥೬೮॥
ವಿಭೂತಿಭೂಷಣೋ ನಿತ್ಯಂ ನಿತ್ಯಂ ರುದ್ರಾಕ್ಷಭೂಷಣಃ।
ರುದ್ರಸೂಕ್ತಪರೋ ನಿತ್ಯಂ ನಿತ್ಯಂ ಲಿಂಗಾರ್ಚಕೋಽಭವತ್ ॥೬೯॥

ಇದಲ್ಲದೆ ಅಷ್ಟಸಿದ್ಧಿಗಳನ್ನು ಪಡೆದು ಮಹಾಮಹಿಮಾಶಾಲಿಯೆಂದು ಜಗತ್ಪ್ರಸಿದ್ಧನಾದ ಅಗಸ್ತ್ಯಮಹರ್ಷಿಯೂ ಸಹ ತನ್ನ ಹೆಸರಿನಿಂದ ಒಂದು ಶಿವಲಿಂಗವನ್ನು ಸ್ಥಾಪಿಸಿ, ಆ ಶಿವಲಿಂಗೋಪಾಸನೆಯಿಂದ ಸಪ್ತಸಮುದ್ರ

ಪಾನ ಮೊದಲಾದ ಅತ್ಯದ್ಭುತಕಾರ್ಯಗಳನ್ನು ಮಾಡಿ ಲೋಕಮಾನ್ಯನಾದನು. ಆ ಮಹರ್ಷಿಯಿಂದ ಸ್ಥಾಪಿಸಲ್ಪಟ್ಟ ಲಿಂಗವು "ಅಗಸ್ತ್ಯೇಶ್ವರ" ಎಂಬ ಹೆಸರಿನಿಂದ ಈಗಲೂ ಕಾಶೀಕ್ಷೇತ್ರದಲ್ಲಿ ವಿರಾಜಿಸುತ್ತಿರುವದು. ಇದರಂತೆಯೇ ಗೌತಮ, ಕಶ್ಯಪ, ಕಪಿಲ, ಮಾರ್ಕಂಡೇಯ, ವಶಿಷ್ಠ, ವಿಶ್ವಾಮಿತ್ರ ಮೊದಲಾದ ಮಹರ್ಷಿಗಳೂ ಸಹ ತಮ್ಮ ತಮ್ಮ ಹೆಸರುಗಳಿಂದ ಶಿವಲಿಂಗಗಳನ್ನು ಸ್ಥಾಪಿಸಿ ನಿತ್ಯಸುಖವನ್ನು ಅನುಭವಿಸಿದರು. ಆ ಮಹರ್ಷಿಗಳು ಸ್ಥಾಪಿಸಿದ ಲಿಂಗಗಳು ಗೌತಮೇಶ್ವರ, ಕಶ್ಯಪೇಶ್ವರ, ಕಪಿಲೇಶ್ವರ, ಮಾರ್ಕಂಡೇಶ್ವರ, ವಿಶ್ವಾಮಿತ್ರೇಶ್ವರ ಮೊದಲಾದ ಪವಿತ್ರಾಭಿದಾನಗಳಿಂದ ಈಗಲೂ ಕಾಶೀಕ್ಷೇತ್ರದಲ್ಲಿ ಪ್ರಕಾಶಿಸುತ್ತಿರುವವು. ಇದಲ್ಲದೆ ವಿಷ್ಣುವೂ ಸಹ ತಾನು ಧರಿಸಿದ ದಶಾವತಾರಗಳಲ್ಲಿಯೂ ಒಂದೊಂದು ಶಿವಲಿಂಗವನ್ನು ಸ್ಥಾಪಿಸಿ, ಪೂಜಿಸಿ ತನ್ನಿಷ್ಟಾರ್ಥವನ್ನು ಪಡೆದನೆಂದು ಅನೇಕಾನೇಕ ಪುರಾಣಗಳಲ್ಲಿ ಉದ್ಘೋಷಿಸಲ್ಪಟ್ಟಿರುವದು. ರಾಮಾವತಾರದಲ್ಲಿ ಸ್ಥಾಪಿಸಿದ "ರಾಮೇಶ್ವರ" ಲಿಂಗದ ವಿಷಯವು ಸರ್ವರಿಗೂ ವಿದಿತವಾದುದೇ ಆದೆ. ಮತ್ಸ್ಯಾವತಾರದಲ್ಲಿ "ಮತ್ಸ್ಯೇಶ್ವರ" ಎಂಬ ಹೆಸರಿನ ಶಿವಲಿಂಗವನ್ನು ಸ್ಥಾಪಿಸಿದನು. ಇದು ಲಂಕಾಪಟ್ಟಣದಲ್ಲಿ ವಿರಾಜಿಸುತ್ತಿರುವದು. ಕೂರ್ಮಾವತಾರದಲ್ಲಿ "ಕೂರ್ಮೇಶ್ವರ" ಎಂಬ ಹೆಸರಿನ ಶಿವಲಿಂಗವನ್ನು ಸ್ಥಾಪಿಸಿದನು. ಅಲ್ಲದೆ ಒಂದಾನೊಂದು ಸಮಯದಲ್ಲಿ ಶಿವನ ಪಾದಕಮಲಗಳನ್ನು ಸಹಸ್ರ ಕಮಲಗಳಂತೆ ಪೂಜಿಸುತ್ತಿರುವಾಗ, ಶಿವನ ಮಾಯೆಯಿಂದ ಒಂದು ಕಮಲವು ಕಡಿಮೆಯಾಗಲು, ಆಗ್ಗೆ ವಿಷ್ಣುವು ತಾನು ಕೈಕೊಂಡ ಪೂಜಾಕಾರ್ಯವು ಸಮಾಪ್ತಿಯಾಗಲಿಲ್ಲವೆಂದು ಭಾವಿಸಿ, ಕೂಡಲೇ ತನ್ನ ನೇತ್ರಕಮಲವನ್ನೇ ಸಮರ್ಪಿಸಿ ಪೂಜೆಯನ್ನು ಸಮಾಪ್ತಿಗೊಳಿಸಿದನೆಂದೂ, ಆಗ್ಗೆ ಪರಮೇಶ್ವರನು ವಿಷ್ಣುವಿನ ಅಸಾಧಾರಣವಾದ ಭಕ್ತಿಗೆ ಮೆಚ್ಚಿ ತನ್ನಲ್ಲಿದ್ದ ಚಕ್ರವನ್ನು ಅನುಗ್ರಹಿಸಿದನೆಂದೂ, ಅಂದಿನಿಂದ ವಿಷ್ಣುವು "ಚಕ್ರಪಾಣಿ" ಎಂಬ ಹೆಸರಿನಿಂದ ಪ್ರಸಿದ್ಧನಾದನೆಂದೂ ವ್ಯಾಸೋಕ್ತಪುರಾಣಾದಿಗಳಲ್ಲಿ ಸುಪ್ರಸಿದ್ಧವೇ ಆದೆ.

ಲೋಕವಿಖ್ಯಾತರಾದ ಶ್ರೀಶಂಕರಾಚಾರ್ಯರು ತಮ್ಮಿಂದ ರಚಿಸಲ್ಪಟ್ಟ "ಶಿವಾನಂದಲಹರೀ" ಎಂಬ ಗ್ರಂಥದಲ್ಲಿ—

ಸಹಸ್ರಂ ವರ್ತಂತೇ ಜಗತಿ ವಿಬುಧಾಃ ಕ್ಷುದ್ರಫಲದಾಃ
ನ ಮನ್ಯೇ ಸ್ವಪ್ನೇ ವಾ ತದನುಸರಣಂ ತತ್ಕೃತಫಲಂ।
ಹರಿಬ್ರಹ್ಮಾದೀನಾಮಪಿ ನಿಕಟಭಾಜಾಮಸುಲಭಂ
ಚಿರಂ ಯಾಚೇ ಶಂಭೋ ಶಿವ ತವ ಪದಾಂಭೋಜಭಜನಂ॥

ಈ ರೀತಿಯಾಗಿ ಸ್ತುತಿಸಿದ್ದಾರೆ. ಈ ಶ್ಲೋಕಾಭಿಪ್ರಾಯವೇನೆಂದರೆ–

ಎಲೈ ಪರಮೇಶ್ವರನೇ! ಲೋಕದಲ್ಲಿ ಸಾವಿರಾರು ಜನ ದೇವತೆಗಳಿದ್ದಾರೆ; ಅವರು ಅಲ್ಪ ಫಲವನ್ನು ಕೊಡತಕ್ಕವರಾದುದರಿಂದ, ನಾನು ಅವರ ಅನುಸರಣವನ್ನಾಗಲಿ ಅವರಿಂದ ಪ್ರಾಪ್ತವಾಗುವ ಫಲವನ್ನಾಗಲಿ ಸ್ವಪ್ನದಲ್ಲಿಯೂ ಸಹ ಸ್ಮರಿಸುವುದಿಲ್ಲ. ಒಂದಾನೊಂದು ಕಾಲದಲ್ಲಿ ವಿಷ್ಣುಬ್ರಹ್ಮರೀರ್ವರೂ ನಾನು ಹೆಚ್ಚು ತಾನು ಹೆಚ್ಚು ಎಂಬ ಹೆಮ್ಮೆಯಿಂದ ಕೂಡಿದವರಾಗಿ ಶಪಥ ಮಾಡಿಕೊಂಡು, ಸಮೀಪದಲ್ಲಿದ್ದ ನಿನ್ನ ಪಾದಕಮಲಗಳನ್ನು ಕಾಣುವುದಕ್ಕೋಸ್ಕರ ವಿಷ್ಣುವು ವರಾಹರೂಪವನ್ನು ಧರಿಸಿ, ಸಹಸ್ರಾರುವರ್ಷಗಳವರೆಗೆ ಪಾತಾಳಲೋಕವನ್ನಗೆಯುತ್ತ ಹುಡುಕಿದರೂ ಸಹ ದೊರೆಯಲಿಲ್ಲ. ಅದರಂತೆಯೇ ನಿನ್ನ ಪವಿತ್ರಮಸ್ತಕವನ್ನು ಸಂದರ್ಶಿಸುವದಕ್ಕೋಸ್ಕರ, ಬ್ರಹ್ಮನು ಹಂಸಪಕ್ಷಿಯ ರೂಪವನ್ನು ಧರಿಸಿ, ಸಹಸ್ರಾರುವರ್ಷಗಳವರೆಗೆ ಹಾರುತ್ತಾ ಹುಡುಕಿದರೂ ಮಸ್ತಕವು ದೊರೆಯಲಿಲ್ಲ. ಈ ರೀತಿಯಾಗಿ ಹರಿಬ್ರಹ್ಮಾದಿಗಳಿಗೂ ಕೂಡ ದೊರೆಯದಿದ್ದ ಆ ನಿನ್ನ ಪಾದಕಮಲಗಳ ಸ್ತೋತ್ರವನ್ನೇನಾನು ಯಾವಾಗಲೂ ಬೇಡುತ್ತೇನೆಂದು ಕೊಂಡಾಡಿದ್ದಾರೆ. ದೇವತೆಗಳಲ್ಲಿ ಯಾವ ಭೇದವನ್ನೆಣಿಸಿದೆ ಸರ್ವರನ್ನೂ ಸಮತ್ವದಿಂದ ಕಾಣಬೇಕೆಂದು ಸಿದ್ಧಾಂತಗೊಳಿಸಿರುವ ಶ್ರೀಶಂಕರಾಚಾರ್ಯರೇ ಈ ರೀತಿಯಾಗಿ ಅಸಾಧಾರಣವಾದ ಭಕ್ತಿಭಾವದಿಂದ ಶಿವನನ್ನು ಕೊಂಡಾಡಿರುವರು.

# ವೀರಶೈವ ಆಚಾರನಿಬಂಧನೆ

ವೀರಶೈವಮತದಲ್ಲಿರುವ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಆರು ಸ್ಥಲಗಳನ್ನು ಕ್ರಮವಾಗಿ ಯಾರು ಪ್ರವೇಶಮಾಡುತ್ತಾರೆಯೋ ಅವರಿಗೆ ಮೋಕ್ಷಸುಖವು ಪ್ರಾಪ್ತವಾಗುವುದು. ಈ ಆರು ಸ್ಥಳಗಳ ಕ್ರಿಯಾಚರಣೆಯನ್ನೂ ಜ್ಞಾನಾಚರಣೆಯನ್ನೂ ಹೊಂದಿ ಸಿದ್ಧಿಯನ್ನು ಪಡೆದ ಪುರುಷನು 'ಷಟ್‌ಸ್ಥಲಬ್ರಹ್ಮಿ' ಎಂಬ ಪ್ರಶಸ್ತಿಗೆ ಯೋಗ್ಯನಾಗುತ್ತಾನೆ. ಈ ಆರು ಸ್ಥಲಗಳೊಳಗೆ ಒಂದೊಂದರಲ್ಲಿ ಅನಂತ ಶಾಖೆಗಳಾಗಿ ನೂರೊಂದು ಸ್ಥಲಗಳಾಗಿರುತ್ತವೆ. "ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ" ಎಂಬ ಪ್ರಮಾಣಬಲದಿಂದ ಯಾವ ವಸ್ತುವಿನಿಂದ ಚರಾಚರಾತ್ಮಕವಾದೀ ಪ್ರಪಂಚವು ಉತ್ಪನ್ನವಾಗುವುದೋ, ಯಾವ ವಸ್ತುವಿನಲ್ಲಿಯೇ ಶೇರಿಕೊಳ್ಳುವುದೋ ಆ ವಸ್ತುವೇ ಸ್ಥಲವೆನಿಸಿಕೊಳ್ಳುತ್ತದೆ. "ಜನ್ಮಾದ್ಯಸ್ಯ ಯತಃ" ಮುಂತಾದ ಬ್ರಹ್ಮಸೂತ್ರಗಳೂ, "ಯತೋವಾ ಇಮಾನಿ ಭೂತಾನಿ ಜಾಯಂತೆ" ಮುಂತಾದ ಶ್ರುತಿಗಳೂ ಇದೇ ಅರ್ಥವನ್ನು ಪ್ರತಿಪಾದಿಸಿರುವುವು. ಆದರೆ ಬ್ರಹ್ಮಶಬ್ದವಾಚ್ಯವಾದ ಸ್ಥಲ ಶಬ್ದವು ಆ ಪರಶಿವಬ್ರಹ್ಮವನ್ನು ತಿಳಿಯುವುದಕ್ಕೆ ಸಾಧನವಾದ ಭಕ್ತ ಮೊದಲಾದ ಆರು ಶಬ್ದಗಳ ಮುಂದೆ ಸ್ಥಲಶಬ್ದವನ್ನಿಟ್ಟೇ ಶಿವಾಗಮಗಳು ವ್ಯವಹರಿಸುವುದನ್ನು ನೋಡಿದರೆ ಉದ್ದಿಷ್ಟವಾದ ಪರಶಿವನ ಧ್ಯಾನದೃಢತೆಯೇ ಇದಕ್ಕೆ ಕಾರಣವೆಂದು ಹೇಳಬಹುದಾಗಿದೆ. ವೀರಶೈವಸಿದ್ಧಾಂತ ರೀತಿಯಾಗಿ ಲಿಂಗಧಾರಿಯಾದ ಮಾನವನು ಮೊದಲು ಭಕ್ತಸ್ಥಲದ ಆಚರಣೆಯನ್ನೂ, ಅನಂತರ ಮಹೇಶಸ್ಥಲದ ಆಚರಣೆಯನ್ನೂ, ಬಳಿಕ ಪ್ರಸಾದಿಸ್ಥಲದ ಆಚರಣೆಯನ್ನೂ ಅನಂತರ ಪ್ರಾಣಲಿಂಗಸ್ಥಲದ ಆಚರಣೆಯನ್ನೂ ಬಳಿಕ ಐಕ್ಯಸ್ಥಲದ ಆಚರಣೆಯನ್ನೂ ಆಚರಿಸುತ್ತ ಹೋದಹಾಗೆಲ್ಲ ಆಣವಮಾಯಿಾಯ ಕಾರ್ಮಿಕಗಳೆಂಬ ಮೂರು ಮಲಗಳು ಬಿಡುಗಡೆಯಾಗಿ ಪುಟಕ್ಕೆ ಹಾಕಿದ ಬಂಗಾರದಂತೆ ಆತ್ಮನು ಪರಿಶುದ್ಧನಾಗಿ ತನ್ನಲ್ಲಿ ಸ್ವಭಾವಸಿದ್ಧಗಳಾಗಿರುವ ಸರ್ವಜ್ಞತ್ವಾದಿ ಕಲ್ಯಾಣಗುಣಗಳುದಯವಾಗಿ ಜೀವನ್ಮುಕ್ತನೆಂಬ ಅನಿತರಸಾಧಾರಣವಾದ ಬಿರುದನ್ನು ಪಡೆಯುವನು. ಇಂತಹ ಷಟ್‌ಸ್ಥಲಬ್ರಹ್ಮಿಗೆ ಅಣಿಮಾದ್ಯಷ್ಟಸಿದ್ಧಿಗಳು ತನ್ನ ಸ್ವಾಧೀನಗಳಾಗಿರುತ್ತವೆ. ಇದರಿಂದ ಈ ಷಟ್‌ಸ್ಥಲಗಳು ವೀರ

ಶೈವಮತಕ್ಕೆ ಅಂಗಗಳಾಗಿರುತ್ತವೆಯೆಂದು ಸಿದ್ಧವಾಯಿತು. ಈ ಮೋಕ್ಷಾಂಗವಾದ ಷಟ್‌ಸ್ಥಲಗಳಿಂದ ಕೂಡಿದುದೇ ವೀರಶೈವಮತವು. ಈ ಮತವನ್ನು ಶ್ರೀರೇಣುಕಾದಿಪಂಚಾಚಾರ್ಯರು ಭೂಲೋಕದಲ್ಲಿ ಸ್ಥಾಪಿಸಿದರು. ಆದರೆ ಕೆಲವರು ಷಟ್‌ಸ್ಥಲಗಳ ಸ್ಥಾಪಕರೇ ಬೇರೆ, ವೀರಶೈವ ಮತಸ್ಥಾಪಕರೇ ಬೇರೆ ಎಂದು ಗುಣಗುಟ್ಟುತ್ತಾರೆ. ಹೀಗೆ ಗುಣಗುಡುವುದು ಅಜ್ಞಾನಿಗಳ ಕಾರ್ಯವಲ್ಲದೆ ಸಿದ್ಧಾಂತ ರಹಸ್ಯವನ್ನು ತಿಳಿದ ವಿವೇಕಿಗಳ ಕಾರ್ಯವಲ್ಲ. ಯಾವನು ಗುರುವಂಶಪರಂಪರೆಯಲ್ಲಿ ಶುಶ್ರೂಷೆ ಮಾಡಿ ಗುರುಕೃಪೆಗೆ ಪಾತ್ರನಾಗಿ ಶಿವದೀಕ್ಷೆಯಿಂದ ಪರಿಶುದ್ಧನಾಗಿ ಇಷ್ಟಲಿಂಗವನ್ನು ಪಡೆದಿರುವನೋ ಅಂಥವನೇ ಈ ಷಟ್‌ಸ್ಥಲಗಳಿಗೆ ಅಧಿಕಾರಿಯಾಗುವನು. ಯಾವನು ಗುರುವಿನಿಂದ ಲಿಂಗವನ್ನು ಪಡೆಯದೆ ಷಟ್‌ಸ್ಥಲಗಳ ಆಚರಣೆಯಲ್ಲಿ ಪ್ರವೇಶಿಸಲಿಚ್ಛಿಸುವನೋ ಅವನು ತುಪ್ಪಹೀರೆಕಾಯಿಯೆಂದು ಕರೆಯುವಂತೆ ನಾಮಮಾತ್ರದ ವೀರಶೈವನೇ ಹೊರತು ಷಟ್‌ಸ್ಥಲಧರ್ಮದಿಂದ ಕೂಡಿದ ವೀರಶೈವನೆನಿಸುವುದಿಲ್ಲ. ಏಕೆಂದರೆ--ವೀರಶೈವ ಮತವೆನಿಸಿದ ಈ ಷಟ್‌ಸ್ಥಲಗಳಲ್ಲಿ ಮೊದಲನೆಯ ಭಕ್ತಸ್ಥಲದಲ್ಲಿಯೇ ಗುರುವು ದೀಕ್ಷೆಯನ್ನು ಮಾಡಿ ಲಿಂಗವನ್ನು ಧರಿಸಿ ಮಹಾಮಂತ್ರವನ್ನುಪದೇಶಿಸಿ ಈ ಷಟ್‌ಸ್ಥಲಗಳನ್ನು ಸಾಧಿಸುವ ಅಧಿಕಾರವನ್ನು ಕೊಡುತ್ತಾನಷ್ಟೆ! ಅಂತಹ ಗುರುವಿಲ್ಲದ ಮೇಲೆ ದೀಕ್ಷೆಯಿಲ್ಲ; ದೀಕ್ಷೆಯಿಲ್ಲದ ಮೇಲೆ ಲಿಂಗವಿಲ್ಲ; ಲಿಂಗವಿಲ್ಲದ ಮೇಲೆ ಈ ಸ್ಥಲಾಚರಣೆಗಳು ನಿರಾಧಾರವಾಗಿ ಹೋಗುತ್ತವೆ. ಆದುದರಿಂದ

> ಗುರೋರಾದೇಶಮಾಸಾದ್ಯ ಪೂಜಯೇತ್ಪರಮೇಶ್ವರಂ ।
> ಪೂಜಿತೇ ಪರಮೇಶಾನೇ ಪೂಜಿತಾಸ್ಸರ್ವದೇವತಾಃ ॥

ಎಂಬ ಶ್ರೀ ರೇಣುಕಭಗವತ್ಪಾದರಾಜ್ಞೆಯಂತೆ ಷಟ್‌ಸ್ಥಲಧರ್ಮಾಚರಣೆಯನ್ನು ಅನುಷ್ಠಿಸಲಿಚ್ಛಿಸುವವರು ಗುರುಗಳ ಇಂತಹ ಉಪದೇಶವೆಂಬ ಸೂಕ್ಷ್ಮವಾದ ಬೀಜವನ್ನು ತಮ್ಮ ಹೃದಯಭೂಮಿಯಲ್ಲಿ ಅರ್ಜಿಸಿಯೇ ಇರಬೇಕು. ಇದನ್ನು ಅರ್ಜಿಸದೆ ಹೋದರೆ ಷಟ್‌ಸ್ಥಲಾಚರಣೆಗಳು ಕಾದ ಕಬ್ಬಿಣದ ಮೇಲೆ ನೀರುಹಾಕಿದಂತೆ ಉತ್ತರ ಕ್ಷಣದಲ್ಲಿಯೇ ನಿರ್ನಾಮವಾಗಿ ಹೋಗುವವು. ಇದೇ ಕ್ರಮವಿಡಿದ ವೀರಶೈವನ ಧರ್ಮವಾಗಿರುತ್ತದೆ.

> ಧರ್ಮ ಏವ ಸಮಸ್ತಾನಾಂ ಯತಸ್ಸಂಸಿದ್ಧಿಕಾರಣಂ ।
> ನಿಃಸ್ಪೃಹೋಪಿ ಮಹಾಯೋಗೀ ಧರ್ಮಮಾರ್ಗಂ ನ ಸಂತ್ಯಜೇತ್ ॥

ಎಂದು ಶ್ರೀ ರೇಣುಕಭಗವತ್ಪಾದರು ಹೇಳಿರುವಂತೆ ಎಂತಹ ಮಹಾ ಯೋಗೀಶ್ವರನಾದರೂ ಈ ಷಟ್‌ಸ್ಥಲ ರೂಪವಾದ ಧರ್ಮಮಾರ್ಗವನ್ನು ಬಿಡಲಾಗದು. ಈ ಧರ್ಮಗಳೇ ಮೋಕ್ಷಸಿದ್ಧಿಯನ್ನುಂಟುಮಾಡುವವು. ಈ ಅರ್ಥದಲ್ಲಿ—

"ಸದ್ಗುರುಕರುಣಾಕಟಾಕ್ಷಲಬ್ಧಶಕ್ತಿ ಪಾತಾದ್ಯವಚ್ಛಿನ್ನಪರ
ಶಿವೇಷ್ಟಲಿಂಗಧಾರಣಾತ್ಮಕ ಪಾಶುಪತದೀಕ್ಷಾನಂತರ್ಯಂ"

ಎಂದು ಭಾಷ್ಯಕಾರರು ಅಥ ಶಬ್ದಾರ್ಥವನ್ನು ವಿವರಿಸಿರುವುದರಿಂದ, ಗುರು ಕಟಾಕ್ಷವನ್ನು ಪಡೆಯದವನು ಷಟ್‌ಸ್ಥಲರೂಪವಾದ ಪರಶಿವಬ್ರಹ್ಮ ಜಿಜ್ಞಾಸೆಯ ಯೋಗ್ಯತೆಯನ್ನು ಪಡೆಯಲಾರನು.

ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ
ಬ್ರಹ್ಮನಿಷ್ಠಂ ।

ಎಂಬ ಮುಂಡಕೋಪನಿಷತ್ತು ಸಹ ಈ ಅರ್ಥದಲ್ಲಿ ಪ್ರವರ್ತಿಸುವುದು. ಹೀಗಿದ್ದರೂ ಈಗಿನ ಕಾಲದಲ್ಲಿ ಕೆಲವರು ಗುರುಗಳನ್ನು ತಿರಸ್ಕರಿಸಿ ಷಟ್‌ಸ್ಥಲಬ್ರಹ್ಮಿಗಳಾಗಬೇಕೆಂದು ಹವಣಿಸುತ್ತಿರುವರು. ಈ ಹವಣಿಕೆಯು ಮನೋರಾಜ್ಯದಂತೆ ಕೇವಲ ನಿಷ್ಫಲವಾಗುವುದಲ್ಲದೆ ಎಂದೂ ಸಫಲವಾಗ ಲಾರದು. ಅನೇಕ ಕಡೆಗಳಲ್ಲಿ ಕೆಲವರು ತಾವು ಸನ್ಯಾಸವನ್ನು ಸ್ವೀಕಾರ ಮಾಡಿದ ಮಾತ್ರದಿಂದ ಷಟ್‌ಸ್ಥಲಬ್ರಹ್ಮಿಗಳಾದೆವೆಂದು ಭ್ರಮಿಸಿ ಗುರುವಿನಿಂದ ದೀಕ್ಷಾಪೂರ್ವಕವಾಗಿ ಪಡೆದ ಮಹಾಮಂತ್ರವನ್ನು ಬಿಟ್ಟು ಇನ್ನಾವ ಯಾವುದೋ ಅಪಸಿದ್ಧಾಂತವಾದ ಕಾಲ್ಪನಿಕ ಮಂತ್ರವನ್ನು ಉಚ್ಚರಿಸುತ್ತ ಷಟ್‌ಸ್ಥಲಕ್ಕಾಧಾರವಾದ ಗುರುವಿಗೆ ಅಭಿವಂದನಾದಿಗಳನ್ನು ಮಾಡದೆ ಗುರುಗಳಿಗಿಂತಲೂ ತಾವೇ ಅಧಿಕರೆಂದು ತಿಳಿದಿರುತ್ತಾರೆ. ಈ ಭ್ರಮಣತರಂಗವು ಇವರನ್ನು ಯಮರಾಜ್ಯಕ್ಕೀಡು ಮಾಡುವುದಲ್ಲದೆ ಶಿವರಾಜ್ಯಕ್ಕಾಸ್ಪದ ಕೊಡಲಾರದು. ಗುರುವು ಉಪದೇಶಿಸಿದ ಮಂತ್ರವೇ ಹೋದಮೇಲೆ ಗುರುವಿನಿಂದ ಬಂದ ಲಿಂಗವೇಕೆ? ಗುರುವಿನಿಂದ ಬಂದ ಭಸ್ಮವೇಕೆ? ಗುರುವಿನಿಂದ ಬಂದ ರುದ್ರಾಕ್ಷವೇಕೆ? ಗುರುವಿನಿಂದ ಬಂದ ಪಾದೋದಕಪ್ರಸಾದಗಳೇಕೆ? ದಾರವೇ ಕಿತ್ತುಹೋದಮೇಲೆ ಆ ದಾರದಲ್ಲಿ ಪೋಣಿಸಿದ ಮಣಿಗಳು ತಾವಾಗಿಯೇ ಉದುರಿಹೋಗುವಂತೆ, ಗುರುವಿನಿಂ

ದುಪದೇಶ ಪಡೆದ ಮಂತ್ರವೇ ಇಲ್ಲದಮೇಲೆ ಈ ಮಂತ್ರವೆಂಬ ಮಹಾ ಸೂತ್ರದಲ್ಲಿ ಪೋಣಿಸಿದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಮುಕ್ತಾಫಲಗಳು ಎಲ್ಲಿ ಬಿದ್ದು ಹೋಗುವುವೋ ಗೊತ್ತೇ ಆಗುವು ದಿಲ್ಲ. ಯಾರು ಉತ್ತಮ ಕುಲದ ಲಿಂಗಧಾರಿಗಳೋ ಅವರಿಗೆಲ್ಲಾ ಷಟ್‌ಸ್ಥಲಾ ಚರಣೆಯು ಇದ್ದೇ ತೀರಬೇಕು. ಲೋಕದಲ್ಲಿ ಹಸ್ತಪಾದನೇತ್ರಕರ್ಣಾದ್ಯಂಗ ಗಳು ಇಲ್ಲದವನು ಪುರುಷನೆನಿಸಿಕೊಳ್ಳದಂತೆ ಭಕ್ತಾದಿ ಸ್ಥಲಾಚರಣೆಗಳಿಲ್ಲ ದವನು ಶೈವನೆಂದು ಹೇಳಿಸಿಕೊಳ್ಳಲಾರನು. ಧರ್ಮಾಧರ್ಮಿಗಳಿಗೆ ಅಭೇ ದೋಪಚಾರವಿರುವುದರಿಂದ ವೀರಶೈವಮತ ಸ್ಥಾಪನೆಯೆಂದರೆ ಯಾವ ಅರ್ಥವೋ ಷಟ್‌ಸ್ಥಲಸ್ಥಾಪನೆಯೆಂದರೂ ಅದೇ ಅರ್ಥವಾಗುವುದರಿಂದ, ವೀರಶೈವಮತಸ್ಥಾಪಕರಾದ ಶ್ರೀರೇಣುಕಾದಿ ಪಂಚಜಗದ್ಗುರುಗಳೇ ಷಟ್ ಸ್ಥಲಸ್ಥಾಪಕರಲ್ಲದೆ ಬೇರೊಬ್ಬರಲ್ಲ.

ಮೂಲಾಚಾರ್ಯರಿಂದ ವೀರಶೈವಮತದ ಧರ್ಮಗಳನ್ನು ಸುಧಾರಿಸು ವುದಕ್ಕಾಗಿ ಅನಾದಿಕಾಲದಿಂದಲೂ ಪಟ್ಟಾಧಿಕಾರಿಗಳು ನಿಯಮಿಸಲ್ಪಟ್ಟಿರು ತ್ತಾರೆ. ಈ ಮತದ ಧರ್ಮಗಳು ಎಲ್ಲಿ ಶೈಥಿಲ್ಯವನ್ನು ಹೊಂದಿರುತ್ತವೆಯೋ ಅಲ್ಲಿ ಬೋಧಿಸಿ ಪುನಃ ಅವು ಅನುಷ್ಠಾನಕ್ಕೆ ಬರುವಂತೆ ಮಾಡಬೇಕಾದುದು ಪಟ್ಟಾಧಿಕಾರಿಗಳ ಕರ್ತವ್ಯವಾಗಿರುತ್ತದೆ. ಲೋಕದಲ್ಲಿ ರಾಜಪಟ್ಟವನ್ನು ಹೊಂದಿದ ಮಹಾರಾಜನು ತನ್ನ ರಾಜ್ಯದಲ್ಲಿ ಸಂಭವಿಸಬಹುದಾದ ಅನೀತಿ ಗಳನ್ನು ತಪ್ಪಿಸಿ ಪ್ರಜೆಗಳು ನೀತಿವಂತರಾಗುವಂತೆ ಮಾಡುವದು ರಾಜ ಧರ್ಮವಾಗಿರುತ್ತದೆ. ಹಾಗೆ ಪ್ರಜೆಗಳ ಯೋಗಕ್ಷೇಮಗಳನ್ನು ನೋಡದೆ ತನ್ನ ಅಭಿವೃದ್ಧಿಯಲ್ಲಿ ಮಾತ್ರ ಆಸಕ್ತನಾದರೆ ಅಂಥ ರಾಜನು ಪ್ರಜಾಪಾಲಕ ನೆನಿಸಲಾರನು. ಪ್ರಜೆಗಳ ನ್ಯೂನಾತಿರೇಕಗಳನ್ನು ತಿದ್ದುತ್ತ ಪ್ರಜಾನೆಮ್ಮದಿ ಯನ್ನುಂಟುಮಾಡುತ್ತಲಿರುವುದರಿಂದಲೇ ಅವನಿಗೆ ರಾಜ ಎಂಬ ಹೆಸರು ಬಂದಿರುತ್ತದೆಯಲ್ಲದೆ ಕೇವಲ ಪಟಾಟೋಪದಿಂದ ಬಂದಿರುವುದಿಲ್ಲ. ಅದರಂತೆ ಗುರುಪಟ್ಟವನ್ನು ಹೊಂದಿದವರು ತಮ್ಮ ಶಿಷ್ಯಕೋಟಿಗೆಲ್ಲ ವೇದಶಾಸ್ತ್ರಗಳ ರಹಸ್ಯವನ್ನು ಬೋಧಿಸುತ್ತ ಸದಾಚಾರಗಳನ್ನು ನೆಲೆಗೊಳಿಸುತ್ತ ಶಿಷ್ಯರ ಆತ್ಮೀಯರಾಜ್ಯದ ಮೇಲೆ ಧೊರೆತನವನ್ನು ಮಾಡುತ್ತ ಶಿಷ್ಯರು ಅಧರ್ಮದಲ್ಲಿ ಕಾಲಿಡದಂತೆಯೂ ಧರ್ಮದಲ್ಲಿಯೇ ಪ್ರವೇಶಮಾಡುವಂತೆಯೂ ಮಾಡಿ ಅವರನ್ನುದ್ಧರಿಸುತ್ತ ಬರಬೇಕು. ಕೇವಲ ಗಜರಥತುರಗಪದಾತಿವೈಭವ

ದೊಡನೆ ಆಂದೋಳಿಕೆಯಲ್ಲಿ ಮೆರೆಯುತ್ತ ಶಿಷ್ಯರು ಸಲ್ಲಿಸುವ ಕಾಣಿಕೆಯನ್ನು ದುರ್ವ್ಯಯಮಾಡುವುದಕ್ಕಾಗಿ ಪಟ್ಟಾಧಿಕಾರವು ಬಂದಿರುವದಿಲ್ಲ. ಶಿಷ್ಯರನ್ನು ಶಾಸ್ತ್ರೀಯವಾದ ಸಂಸ್ಕಾರಗಳಿಂದ ಪರಿಶುದ್ಧಗೊಳಿಸಿ ಸದಾಚಾರಸಂಪನ್ನರನ್ನಾಗಿಮಾಡಿ ಸನಾತನ ಧರ್ಮವನ್ನು ದೃಢಗೊಳಿಸುತ್ತ ಅಜ್ಞಾನಾಂಧಕಾರದಿಂದ ಬಿಡುಗಡೆಮಾಡಿಸಿ ಶಿಷ್ಯರಿಗೆ ಪಾರಮಾರ್ಥಿಕವಾದ ಮಾರ್ಗವನ್ನು ತೋರಿಸುವುದಕ್ಕಾಗಿಯೇ ಈ ಅಧಿಕಾರವು ಬಂದಿರುತ್ತದೆ. ಗಜತುರಗವಾದ್ಯ ವೈಭವಾದಿಗಳು ಉಪಲಕ್ಷಣವಾಗಿರುತ್ತವೆ. ಮುಖ್ಯಲಕ್ಷಣವನ್ನು ಬಿಟ್ಟು ಕೇವಲ ಉಪಲಕ್ಷಣಗಳಲ್ಲಿ ಮಾತ್ರ ಪಟ್ಟಾಧಿಕಾರಿಗಳು ಮನಗೊಡುತ್ತ ಬಂದವೆ ತಮ್ಮ ಕರ್ತವ್ಯಗಳಿಗೆ ತಾವೇ ಲೋಪವನ್ನು ತಂದುಕೊಂಡಂತಾಗುತ್ತದೆ.

ಮಹಾರಾಜನೆಂಬುವನು ತನ್ನ ಮುಖ್ಯಲಕ್ಷಣವೆನಿಸಿದ ದುಷ್ಟಶಿಕ್ಷಣ ಶಿಷ್ಟರಕ್ಷಣವೆಂಬ ಮಹಾಕಾರ್ಯವನ್ನು ಬಿಟ್ಟು ಯಾವಾಗಲೂ ಚತುರಂಗಬಲದಿಂದ ಕೂಡಿ ಠೀವಿಯಿಂದ ಉತ್ಸವಲೋಲನಾಗಿದ್ದರೆ ಅಂಥ ಮಹಾರಾಜನನ್ನು ಪ್ರಜೆಗಳು ಲಕ್ಷೀಕರಿಸದಂತೆ ಕೇವಲ ಬಾಹ್ಯಾಡಂಬರಕ್ಕಾಗಿ ಗುರುಪಟ್ಟವನ್ನು ಹೊಂದಿದವರನ್ನು ಶಿಷ್ಯವೃಂದವು ಎಂದೂ ಲಕ್ಷೀಕರಿಸುವುದಿಲ್ಲ. ಸೃಷ್ಟಿಸ್ಥಿತಿಸಂಹಾರಕರ್ತನಾದ ಪರಮೇಶ್ವರನು ಪ್ರಜಾಭಿವೃದ್ಧಿಪೂರ್ವಕ ರಾಜ್ಯಸುವ್ಯವಸ್ಥೆಗಾಗಿ ದೇವಾಂಶಸಂಭೂತರಾದ ಪ್ರಭುಗಳನ್ನು ನಿಯಮಿಸಿರುವಂತೆ ಅವರ ಆತ್ಮರಕ್ಷಣೆಗಾಗಿ ಗುರುಗಳನ್ನು ನಿಯಮಿಸಿರುವನು. ಪ್ರಜೆಗಳಿಗೆ ಯಾವುದೊಂದು ಈತಿಬಾಧೆಗಳಿಲ್ಲದಂತೆ ನೋಡಿಕೊಳ್ಳುವದು ರಾಜರ ಕರ್ತವ್ಯವು. ಅಂಥ ಪ್ರಜೆಗಳನ್ನು ಸಂಸ್ಕಾರದಿಂದ ಪರಿಶುದ್ಧಗೊಳಿಸಿ ಅವರ ಆತ್ಮರನ್ನು ಆವರಿಸಿರುವ ಅಜ್ಞಾನವನ್ನು ಹೋಗಲಾಡಿಸಿ ಆಸ್ತಿಕರಾಗುವಂತೆ ಮಾಡುವದು ಗುರುಗಳ ಕರ್ತವ್ಯವು. ಹೀಗೆ ರಾಜರು ಗುರುಗಳು ಏಕೀಕರಣದಿಂದ ತಮ್ಮ ತಮ್ಮ ಮುಖ್ಯಲಕ್ಷಣಗಳನ್ನು ಬಿಡದಿದ್ದರೆ, ರಾಜನ ಸಹಾಯದಿಂದ ರಾಜ್ಯದಲ್ಲಿ ವಾಸಮಾಡಿದ ಪ್ರಜೆಗಳು ನೀತಿಚತುರರಾಗಿಯೂ, ರಾಜಭಕ್ತಿವಿಶಾರದರಾಗಿಯೂ, ನಿರ್ಭಯರಾಗಿಯೂ ಸುಖಿಗಳಾಗಿಯೂ, ನಾಗರಿಕರಾಗಿಯೂ ಬಾಳುತ್ತ ಗುರುವಿನ ಸಹಾಯದಿಂದ ಈ ಜನನಮರಣ ರೂಪವಾದ ಘೋರ ಸಮುದ್ರವನ್ನು ದಾಟಿ ಪರಮಾನಂದಾಮೃತವನ್ನು ಪಾನಮಾಡುವರು. ನಮ್ಮ ಭಾರತಭೂಮಿಯಿಲ್ಲಿರುವ ಗುರುಗಳು

ಮತ್ತು ರಾಜರು ಇವರಿಬ್ಬರೂ ಸನಾತನ ಧರ್ಮವೆಂಬರಥಕ್ಕೆ ಎರಡು ಚಕ್ರಗಳಂತಿರುತ್ತಾರೆ. ಇವೆರಡು ಚಕ್ರಗಳಲ್ಲಿ ಒಂದು ಚಕ್ರವು ಐಹಿಕ ಸುಖಸಾಧಕವು; ಇನ್ನೊಂದು ಚಕ್ರವು ಪರಸುಖಸಾಧಕವು. ಭಾರತ ಭೂಮಿಯಲ್ಲಿ ಜನ್ಮವೆತ್ತಿದ ಮಾನವರಿಗೆ ತಿಂದುಂಡು ಸ್ವೇಚ್ಛೆಯಾಗಿ ಮೆರೆಯುವುದೊಂದೇ ಮುಖ್ಯಗುರಿಯಲ್ಲವು. ತಾವಿರುವವರೆಗೂ ಸುಖವಾಗಿರುವುದಲ್ಲದೆ ಆತ್ಮನು ಪುನಃಶ್ಚ ದೇಹವನ್ನು ಧಾರಣಮಾಡದಂತೆ ಮುಕ್ತಿಯನ್ನು ಹೊಂದುವುದೇ ಮುಖ್ಯಗುರಿಯಾಗಿದೆ. ಆದುದರಿಂದ ಆತ್ಮರಕ್ಷಣೆಗಾಗಿ ಗುರುಗಳೂ, ದೇಹರಕ್ಷಣೆಗಾಗಿ ರಾಜರೂ ಇದ್ದೇ ಇರಬೇಕಾಗಿದೆ.

ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ।
ತಸ್ಮಾತ್ಸರ್ವಪ್ರಯತ್ನೇನ ಋಣಂಕೃತ್ವಾ ಘೃತಂಪಿಬೇತ್ ॥

ಎಂದು ಚಾರ್ವಾಕ ಮತೀಯರು ಹೇಳುವಂತೆ ಪರಲೋಕವಿಲ್ಲ, ದೇವರಿಲ್ಲ, ಗುರುಹಿರಿಯರಿಲ್ಲ, ರಾಜರಿಲ್ಲ, ತಾನು ಸುಖವಾಗಿದ್ದರೆ ಸಾಕು ಎಂದು ಹೇಳುವವರಿಗೆ ಮಾತ್ರ ರಾಜರಾಗಲಿ ಗುರುಗಳಾಗಲಿ ಒಬ್ಬರೂಬೇಕಾಗಿಲ್ಲ. ಇಂಥವರು ಮಾನವಧರ್ಮಕ್ಕೆ ಸೇರಿದವರೆಂದು ಹೇಳಲು ಆಗುವುದಿಲ್ಲ.

ಪ್ರಪಂಚದಲ್ಲಿ ಮತಾಚಾರ್ಯರ ಯಶೋವೈಭವವು ವ್ಯಾಪಿಸಬೇಕಾದರೆ ಆಯಾಯ ಮತಾಚಾರ್ಯರು ಬರೆದ ಗ್ರಂಥಗಳೂ ಅವರು ತಿಳುಹಿಸಿದ ನಿಯಮಗಳೂ ಅವರ ಮಹಿಮೆಗಳೂ ವಿಶೇಷವಾಗಿ ಪ್ರಚಾರದಲ್ಲಿ ಬರಬೇಕು. ಮತ್ತು ಮತಾಚಾರ್ಯರ ಪ್ರತಿನಿಧಿಗಳಾದ ಪಟ್ಟಚರಾಧಿಪತಿಗಳು ಶ್ರೀಮದಾಚಾರ್ಯರ ಕೀರ್ತಿಧ್ವಜವನ್ನು ಎಲ್ಲೆಲ್ಲೂ ಮೆರೆಯಿಸುತ್ತಿರುವುದಲ್ಲದೆ ತಮ್ಮ ಸಿದ್ಧಾಂತಗ್ರಂಥಗಳನ್ನು ಗುರುಮುಖದಿಂದ ಅಭ್ಯಾಸಮಾಡಿ ಅವುಗಳ ಅರ್ಥವನ್ನು ಚನ್ನಾಗಿ ತಿಳಿದು ಅದರಂತೆ ಅನುಷ್ಠಾನವು ಮಾಡಿ ಶಿಷ್ಯರಲ್ಲಿ ಪ್ರಚಾರಮಾಡುತ್ತ ಸ್ವಾರ್ಥತ್ಯಾಗಬುದ್ಧಿಯಿಂದ ಆಚಾರ್ಯಭಗವತ್ಪಾದರಲ್ಲಿ ಅಸಾಧಾರಣವಾದ ಭಕ್ತಿಯನ್ನಿರಿಸಿ ಯಾವಾಗಲೂ ಶಿಷ್ಯೋದ್ಧಾರಕಾರ್ಯದಲ್ಲಿ ಕಾಲವನ್ನು ಕಳೆಯುತ್ತಿರಬೇಕು. ನಮ್ಮ ವೀರಶೈವಮತದಲ್ಲಿ ಪಟ್ಟಚರಾಧಿಕಾರಿಗಳ ಕರ್ತವ್ಯವು ಅತ್ಯಂತ ಜವಾಬ್ದಾರಿಯುಳ್ಳದ್ದಾಗಿದೆ. ವೀರಶೈವಮತವೆಂಬ ಹಿಂದೂಧರ್ಮ ಸಾಮ್ರಾಜ್ಯದ ಪರಿಪಾಲನೆಯ ವಿಶಿಷ್ಟ ಸ್ವಾತಂತ್ರ್ಯವು ಶ್ರೀ ಪಂಚಾಚಾರ್ಯರಿಂದ ಪಟ್ಟಚರಾಧಿಕಾರಿಗಳಿಗೆ

ವಹಿಸಲ್ಪಟ್ಟಿರುವುದರಿಂದ ಕೇವಲ ಸ್ವಾಮಿಭೃತ್ಯ ನ್ಯಾಯಾನುಸಾರವಾಗಿ ಆಚಾರ್ಯಭಗವತ್ಪಾದರ ಆಜ್ಞಾರೂಪವಾದ ಪುಷ್ಪಮಾಲೆಯನ್ನು ಭಕ್ತಿ ಪೂರ್ವಕವಾಗಿ ಶಿರಸ್ಸಿನಲ್ಲಿ ಧರಿಸಿ ವೀರಶೈವಮತದ ಧರ್ಮಕರ್ಮಗಳ ನಿಬಂಧನವನ್ನು ಚನ್ನಾಗಿ ಮಾಡಿ ಆಚಾರ್ಯರ ಅನುಗ್ರಹವನ್ನು ಸಂಪಾದಿಸುವುದೇ ಪಟ್ಟಚರಾಧಿಪತಿಗಳ ಪ್ರಥಮಕರ್ತವ್ಯವಾಗಿದೆ.

ಪ್ರಪಂಚದಲ್ಲಿರುವ ಪ್ರತಿಯೊಬ್ಬ ಲಿಂಗಾಂಗಿಯ ಹವ್ಯಕವ್ಯಕರ್ಮಗಳಾಗಲಿ ಬ್ರಹ್ಮಚರ್ಯಾಶ್ರಮ ಸ್ವೀಕಾರವಾಗಲಿ ಗೃಹಸ್ಥಾಶ್ರಮ ಸ್ವೀಕಾರವಾಗಲಿ ವಾನಪ್ರಸ್ಥಾಶ್ರಮ ಸ್ವೀಕಾರವಾಗಲಿ ಸನ್ಯಾಸಾಶ್ರಮ ಸ್ವೀಕಾರವಾಗಲಿ ಇತರ ನಿತ್ಯನೈಮಿತ್ತಿಕ ಕರ್ಮಾನುಷ್ಠಾನಗಳಾಗಲಿ ಎಲ್ಲವೂ ಮೂಲಾಚಾರ್ಯರ ಪ್ರತಿನಿಧಿಗಳಾದ ಪಟ್ಟಚರಾಧಿಪತಿಗಳ ಆಧಿಪತ್ಯದಿಂದಲೇ ನಡೆಯಬೇಕಾದುದರಿಂದ ಇವರನ್ನು ಬಿಟ್ಟು ಧಾರ್ಮಿಕಕಾರ್ಯಗಳಾವುವೂ ನಿರ್ವಹಿಸಲ್ಪಡುವಂತಿಲ್ಲವು. ಆದುದರಿಂದ ಪಟ್ಟಚರಾಧಿಪತಿಗಳೆಂಬವರ ಉಪಕಾರವನ್ನು ವೀರಶೈವ ಮತದ ಸಕಲ ವರ್ಣಾಶ್ರಮಿಗಳೂ ಎಷ್ಟು ಸ್ಮರಿಸಿದರೂ ತೀರದಾಗಿದೆ. ಲಿಂಗಾಂಗಿಗಳಾದ ಯಾವತ್ತು ಮಾನವರು ತಮ್ಮ ಮನೆಯಲ್ಲಿ ನಡೆಯಬೇಕಾದ ಶುಭಶೋಭನ ಕರ್ಮಗಳಲ್ಲಿ ತಮ್ಮ ತಮ್ಮ ವಂಶಗುರುಗಳನ್ನು ಬಿಟ್ಟು ಸ್ವತಂತ್ರಿಸಿ ಏನೂ ಮಾಡುವುದಿಲ್ಲವು. ಹಾಗೆ ಯಾರಾದರೂ ತಿಳಿಯದೆ ಮಾಡಿದರೆ ಅದು ವೀರಶೈವಧರ್ಮಕ್ಕೆ ವಿರೋಧವಾಗುವದಲ್ಲದೆ ಆ ರೀತಿ ಸ್ವೇಚ್ಛೆಯಿಂದ ವರ್ತಿಸುವವರು ಅಧೋಗತಿಗೀಡಾಗುವರು. ಆಚಾರ್ಯಪ್ರತಿನಿಧಿಗಳಾದಪಟ್ಟಚರಾಧಿಪತಿಗಳು ತಾವು ಪಂಡಿತರಾಗಿ ತ್ರಿಕರಣಪೂರ್ವಕವಾಗಿ ಶಿಷ್ಯೋದ್ಧಾರವನ್ನೇ ಕೋರಬೇಕಾಗಿರುವದು. ಮಹಾರಾಜನು ತನ್ನ ಮುಖ್ಯಪ್ರತಿನಿಧಿಗಳಾದ ಮಂತ್ರಿಗಳ ಮೇಲೆ ಸಮಸ್ತಭಾರವನ್ನು ಹೊರಿಸಿರುವುದರಿಂದ ತಮ್ಮ ಪ್ರಭುವಿನ ಆಜ್ಞೆಯನ್ನು ಎಳ್ಳಷ್ಟೂ ಮೀರದೆ ಸ್ವಾರ್ಥವನ್ನು ಬಿಟ್ಟು ರಾಜ್ಯದ ಯೋಗಕ್ಷೇಮವನ್ನು ನೋಡುತ್ತ ಸಮಸ್ತ ರಾಜತಂತ್ರವನ್ನು ತಿಳಿದು ಪ್ರಜಾಹಿತಕಾರ್ಯಗಳನ್ನು ಮಾಡುತ್ತ ಪ್ರಭುಗಳಲ್ಲಿಯೂ ಪ್ರಜೆಗಳಲ್ಲಿಯೂ ವಿಶೇಷಾನುರಾಗಿಗಳಾಗಿರಬೇಕಾದುದೇ ಮಂತ್ರಿಗಳ ಮುಖ್ಯಧರ್ಮವಾಗಿದೆ. ಇದನ್ನೆಲ್ಲ ಬಿಟ್ಟು ಅಂತಶ್ಶುದ್ಧಿಯಿಲ್ಲದೆ ಕೇವಲ ಸ್ವಾರ್ಥಿಗಳಾಗಿ ರಾಜಾಜ್ಞೆಗೆ ವಿರೋಧವಾಗಿ ನಡೆಯುತ್ತ ಬಂದರೆ ಅವರು ಪ್ರಭುದ್ರೋಹಿಗಳೆನಿಸಿಕೊಳ್ಳುವರು. ಪ್ರಜಾನೆಮ್ಮದಿಗೂ, ರಾಜ್ಯಾ

ಭಿವೃದ್ಧಿಗೂ ಮಂತ್ರಿಗಳೇ ಮೂಲಕಾರಣೀಭೂತರಷ್ಟುದರಿಂದ ಮಂತ್ರಿ ಪದವಿಯಲ್ಲಿರುವವರು ನೈತಿಕ ಧರ್ಮರಹಸ್ಯವನ್ನೆಲ್ಲ ತಿಳಿದು ಸಮಯಾನರಿತು ಪ್ರಜಾಪಾಲನವನ್ನು ಮಾಡುತ್ತಬಂದರೆ ತಾವು ವಹಿಸಿದ ಮಂತ್ರಿಪದವಿಯು ಸಾರ್ಥಕವಾದಂತಾಗುವುದು. ಅದರಂತೆ ಆಚಾರ್ಯ ಭಗವತ್ಪಾದರಿಂದ ವೀರಶೈವ ಮತವೆಂಬ ರಾಜ್ಯಭಾರವು ಶ್ರೀ ಪಟ್ಟಚರಾಧಿಪತಿಗಳಿಗೆ ವಹಿಸ ಲ್ಪಟ್ಟಮೇಲೆ ಇವರು ಈ ಮತದ ಧಾರ್ಮಿಕ ಸಂಬಂಧದ ಕ್ರಿಯೆಗಳನ್ನು ಎಷ್ಟರಮಟ್ಟಿಗೆ ನಿರ್ವಹಿಸಬೇಕೆನ್ನುವದನ್ನೂ, ವೀರಶೈವ ಸಿದ್ಧಾಂತವು ಎಷ್ಟರಮಟ್ಟಿಗೆ ವೈರಾಗ್ಯವನ್ನವಲಂಬಿಸಿರಬೇಕೆನ್ನುವದನ್ನೂ ಪ್ರತಿಯೊಬ್ಬ ಪಟ್ಟಚರಾಧಿಪತಿಗಳು ಪರ್ಯಾಲೋಚಿಸಿ ಶಿಷ್ಯೋದ್ಧಾರವೇ ತಮ್ಮ ಸರ್ವ ಸ್ವವೆಂದು ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುತ್ತ ಬರುವುದು ಶ್ರೇಯಸ್ಕರವು.

ಆದರೆ ಈಗ ಗುರುತ್ವವೆಂಬುದು ಕೇವಲ ಕಾಷಾಯ ಭಸ್ಮ ಇವೆರಡರಲ್ಲಿಯೇ ಉಳಿದಂತೆ ತೋರುತ್ತದೆ. ಯಾರು ಕಾಷಾಯ ವನ್ನು ಧರಿಸಿ ಹಣೆಗೂ ಕಣ್ಣಿಗೂ ಮೂಗಿಗೂ ಮುಖಕ್ಕೂ ಅಶ್ರೌತ ವಾದ ಭಸ್ಮವನ್ನು ಬಳಿದುಕೊಂಡಿರುತ್ತಾರೆಯೋ ಅವರೇ ನಿರ್ಭಯವಾಗಿ ಗುರುತ್ವವನ್ನು ಮಾಡಲು ಪ್ರಾರಂಭಿಸಿದ್ದಾರೆ. ಇವರು ಕುಂಡರೋ ಗೋಳ ಕರೋ ವಂಶಜರೋ ಎಂಬುದು ಒಂದೂಗೊತ್ತಿಲ್ಲದೆ ಮೂಢಭಕ್ತರು ಇವರಿಂದ ಉಪದೇಶವನ್ನು ಪಡೆಯುತ್ತ ಮುಕ್ತಿಯನ್ನು ಹೊಂದುವೆವೆಂದು ಭ್ರಮಿಸಿರುತ್ತಾರೆ. ವೀರಶೈವಮತದ ಪರಮಪವಿತ್ರವಾದ ಶಿವದೀಕ್ಷೆ ಯಲ್ಲಂತೂ ಇವರೇ ಆಚಾರ್ಯಪದವಿಯನ್ನು ಹೊಂದುವುದಕ್ಕೆ ತವಕ ಪಡುತ್ತಲಿರುವರು. ಗೋತ್ರಸೂತ್ರಗಳೆಲ್ಲವೂ ಅರಣ್ಯಪಾಲಾದವು. ವೀರಶೈವ ಬ್ರಾಹ್ಮಣ್ಯದ ಮುಖ್ಯಲಕ್ಷಣವೆನಿಸಿದ ಶ್ರೌತ ಭಸ್ಮ ಶ್ರೌತಲಿಂಗಧಾರಣಾದಿ ಷಡ್ವಿಧಧರ್ಮಗಳೊಳ್ಳೊಂದಾದ ಶಿಷ್ಯವಿಷಯದಲ್ಲಿ ಈ ಅಮಂಗಲರು "ಎತ್ತು ಎಮ್ಮಿಗೆ ಬಾಲ ಕತ್ತೆ ಕುದರೆಗೆ ಬಾಲ ನೆತ್ತಿಯಲ್ಲಿ ತುದಿಬಾಲ" ಎಂದು ಭ್ರಷ್ಟವಚನಗಳನ್ನು ಹೇಳಿ ಜನಗಳನ್ನು ಮರಳುಮಾಡಿ ತಮ್ಮ ಅಶಾಸ್ತ್ರೀಯವಾದ ಉಪದೇಶಕ್ಕೆ ಪ್ರಾರಂಭಮಾಡಿದ್ದಾರೆ. ಈ ಕಲಿಕಾಲದಲ್ಲಿ ಪ್ರಾಯಶಃ ಪುರುಷರಲ್ಲಿ ಧರ್ಮಗ್ಲಾನಿಯು ವಿಶೇಷವಾಗಿ ಆಗುತ್ತ ಬಂದರೂ ಸ್ತ್ರೀಯರಲ್ಲಿ ಮಾತ್ರ ಅನೂಚಾನವಾದ ತಮ್ಮ ತಮ್ಮ ಮತಧರ್ಮಗಳು

ಅಲ್ಪವಾಗಿ ಉಳಿದಿರುತ್ತವೆ. ಈ ಘೋರವಾದ ದುರುಳವೇದಾಂತಿಗಳು "ಅಕ್ಕರವು ಲೆಕ್ಕಕ್ಕೆ ಮಿಕ್ಕ ಓದು ತಿರುಪಕ್ಕೆ ಮೋಕ್ಷಕ್ಕೆರಡಕ್ಷರವೆ ಸಾಕಯ್ಯ" ಎಂದು ತಾವು ಕಲಿತ ಶಾಸ್ತ್ರವನ್ನು ಆಸ್ತಿಕಪಂಥಾನುಯಾಯಿಗಳಾದ ಅಂತಹ ಸ್ತ್ರೀಯರಿಗೆ ಬೋಧಿಸಿ ಶಾಸ್ತ್ರಪುರಾಣಗಳಲ್ಲಿಯೂ ನಿತ್ಯನೈಮಿತ್ತಿಕಾದಿ ಕರ್ಮ ಗಳಲ್ಲಿಯೂ ಅಶ್ರದ್ಧೆಯನ್ನು ಹುಟ್ಟಿಸಿ ಶರಣೆಯರೆಂಬ ಪ್ರಶಸ್ತಿಯನ್ನು ಅವರಿಗೆ ಕೊಟ್ಟು ಅವರನ್ನು ತಮ್ಮ ತಮ್ಮ ಹಸ್ತಿಕರನ್ನಾಗಿ ಮಾಡಿಕೊಂಡು ಜೀವಬ್ರಹ್ಮೈಕ್ಯವನ್ನು ಬೋಧಿಸುವ ಸಿದ್ಧಾಂತಶಿಖಾಮಣಿಯಲ್ಲಿರುವ ಏಕಭಾಜನ ಎಂಬ ಶಬ್ದಕ್ಕೆ ಎಲ್ಲರೂ ಒಂದು ಪಾತ್ರೆಯಲ್ಲಿ ಊಟಮಾಡುವು ದೆಂದು ಅರ್ಥವನ್ನು ಕಲ್ಪಿಸಿ ಸ್ವೇಚ್ಛಾಚಾರಿಗಳನ್ನಾಗಿ ಮಾಡುತ್ತಿರುವುದನ್ನು ನೋಡಿದರೆ ಕಲಿಮಹಾರಾಜನ ಸಾಮರ್ಥ್ಯವನ್ನು ಎಷ್ಟು ಶ್ಲಾಘಿಸಿದರೂ ತೀರದಾಗಿದೆ. ಮೋಕ್ಷಾಂಗವೂ ಶಾಸ್ತ್ರೀಯವೂ ಮಾಂಸಪಿಂಡನಿವೃತ್ತಿ ಪೂರ್ವಕ ಮಂತ್ರಪಿಂಡತ್ವಜನಕವೂ ಶಿವಪೂಜಾಯೋಗ್ಯತಾಸಾಧಕವೂ ಆದ ಮಹಾದೀಕ್ಷೆಯನ್ನು ವಹಿಸಿದ ಮೇಲೆ ಇನ್ನು ಬೇರೆ ಉಪದೇಶವನ್ನು ಎಲ್ಲಿ ಹುಡುಕಿದರೂ ವೀರಶೈವಸಿದ್ಧಾಂತದಲ್ಲಿ ಸಿಗುವಂತಿಲ್ಲವು.

ಪಟ್ಟಚರಾಧಿಕಾರಿಗಳು ಶಮದಮಗುಣಸಂಪನ್ನರಾಗಿ ಸಿದ್ಧಾಂತವನ್ನು ತಮ್ಮ ತಮ್ಮ ಶಿಷ್ಯರಿಗೆ ಕಾಲವರಿತು ಬೋಧಿಸುತ್ತ ಬಂದಿದ್ದರೆ ಶಿಷ್ಯರೆಂದೂ ಈ ವಿಧವಾದ ಅಮಾರ್ಗದಲ್ಲಿ ಕಾಲಿಟ್ಟು ಮುಳ್ಳುಕೊಳ್ಳಗಳಲ್ಲಿ ಸಿಕ್ಕು ನರಳುತ್ತಿ ದ್ದಿಲ್ಲ. ಆದರೆ ಇದಕ್ಕೆ ಇವರ ಕರ್ತವ್ಯಪರಾಙ್ಮುಖತೆಯೆ ಮೂಲಕಾರಣವಾಗಿದೆ ಯೆಂದು ನಿಃಸಂದೇಹವಾಗಿ ಹೇಳಬಹುದಾಗಿದೆ. ಆದುದರಿಂದ ಮತದ ಸರ್ವ ಭಾರವನ್ನು ವಹಿಸಿಕೊಂಡ ಪಟ್ಟಚರಾಧಿಕಾರಿಗಳು ಈ ಯಾವತ್ತು ವಿಷಮಾ ವಸ್ಥೆಯನ್ನು ಲಕ್ಷ್ಯಕ್ಕೆ ತಂದುಕೊಂಡು ತಾವು ಅಸಾಧಾರಣಪಂಡಿತರೂ ಕರ್ತವ್ಯದಕ್ಷರೂ ಆಗಿ ತಮ್ಮ ತಮ್ಮ ಶಿಷ್ಯರನ್ನುದ್ಧರಿಸುವ ಕಾರ್ಯದಲ್ಲಿ ತೊಡಗಿ ನಾನಾರೀತಿಯಿಂದ ದುಃಖಕ್ಕೀಡಾಗಿರುವ ವೀರಶೈವಮತವನ್ನು ಉದ್ಧರಿಸಬೇಕು.

ಮತಸ್ಥಾಪನಾಚಾರ್ಯರು ವೀರಶೈವರಿರುವ ಪ್ರತಿಯೊಂದು ಗ್ರಾಮ ದಲ್ಲಿಯೂ ಗುರುಮಠಗಳನ್ನು ಸ್ಥಾಪಿಸಿ ಗುರುಗಳ ವಿಷಯದಲ್ಲಿ—

ಶ್ರೇಯೋರ್ಥೀಯದಿ ಗುರುರ್ವಾಜ್ಞಾಂ ಮನಸಾಪಿ ನಲಂಘಯೇತ್ ॥

ಶ್ರೇಯಸ್ಸನ್ನು ಅಪೇಕ್ಷಿಸುವ ಮಾನವನು ಗುರುಗಳ ಆಜ್ಞೆಯನ್ನು ಉಲ್ಲಂಘಿಸಲಾಗದೆಂದೂ,

ಗುರುರ್ದೇವೋ ಯತಸ್ಸಾಕ್ಷಾತ್ತದ್ಗೃಹಂ ದೇವಮಂದಿರಂ ॥

ಗುರುಮಠಗಳನ್ನು ಶಿವಾಲಯಗಳನ್ನಾಗಿಯೂ ಅಲ್ಲಿರುವ ಗುರುವನ್ನು ಸಾಕ್ಷಾತ್ ಶಿವನನ್ನಾಗಿಯೂ ಭಾವಿಸಬೇಕೆಂದು ಅನುಜ್ಞೆಯನ್ನಿತ್ತಿರುವರು. ಇಷ್ಟು ಪ್ರಾಶಸ್ತ್ಯವು ಗುರುಗಳಿಗೂ ಗುರುಮಠಗಳಿಗೂ ಬರಬೇಕಾದರೆ, ಗುರುಗಳು ಮತ್ತು ಗುರುಮಠಗಳು ಎಷ್ಟು ಪರಿಶುದ್ಧವಾಗಿರಬೇಕೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಹಿಂದೆ ಗುರುಗಳೆಂಬುವರು ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ರತ್ನತ್ರಯವನ್ನು ಯಾವಾಗಲೂ ತಮ್ಮ ಹೃದಯಸ್ಥಾನದಲ್ಲಿ ಧರಿಸಿದ್ದು ಶಿಷ್ಯರನ್ನುದ್ಧರಿಸುವ ವೃತ್ತಿಯೊಂದನ್ನು ಮಾತ್ರ ಅವಲಂಬಿಸಿದ್ದರಲ್ಲದೆ ಇನ್ನಾವ ಲೌಕಿಕವೃತ್ತಿಗಳಿಗೂ ಪ್ರವೇಶಿಸುತ್ತಿರಲಿಲ್ಲ. ಸದಾವೇದಾಧ್ಯಯನ ಘೋಷದಿಂದಲೂ ಶಿವಯೋಗಾಭ್ಯಾಸದಿಂದಲೂ, ಲಿಂಗಾಂಗ-ಸಾಮರಸ್ಯಬೋಧಕವಾದ ಶಾಸ್ತ್ರವಿಚಾರದಿಂದಲೂ ಗುರುಮಠಗಳು ಯಾವಾಗಲೂ ಬರಹೋಗುವ ಭಕ್ತರ ಮನಸ್ಸನ್ನು ಆಕರ್ಷಿಸುತ್ತಿದ್ದವು. ಭಕ್ತರು ಹಗಲೆಲ್ಲ ವ್ಯವಸಾಯ, ವ್ಯಾಪಾರ ಮುಂತಾದ ತಮ್ಮ ಅನೇಕ ವಿಧವಾದ ಕಸಬುಗಳಲ್ಲಿ ಆಯಾಸಪಟ್ಟು ವಿಶ್ರಾಂತಿಗೋಸ್ಕರ ಗುರುಮಠಗಳಿಗೆ ಹೋಗಿ ಗುರುಗಳ ದರ್ಶನವನ್ನು ಮಾಡಿ ಗುರುಗಳ ಬೋಧಾಮೃತಪಾನದಿಂದ ತೃಪ್ತರಾಗಿ ಬರುತ್ತಿದ್ದರು. ಪೂಜ್ಯಪೂಜಕಭಾವವು ಇಷ್ಟು ಗಟ್ಟಿಗೊಳ್ಳುವುದಕ್ಕೆ ಮಠಾಧಿಕಾರಿಗಳು ದವಾಗ್ನಿಯನ್ನು ಶಾಂತಗೊಳಿಸುವ ಮೇಘಗಳಂತೆ ಶಿಷ್ಯರ ಭವತಾಪವನ್ನು ಪರಿಹರಿಸುವುದರಲ್ಲಿ ಜಾಗರೂಕರಾಗಿದ್ದುದೇ ಕಾರಣವಾಗಿದ್ದಿತು. ಮತ್ತು ಶಿಷ್ಯರು ಯಾವಾಗಲೂ ಧರ್ಮದಿಂದ ಚ್ಯುತರಾಗದಂತೆ ಮನೋವೃತ್ತಿಯನ್ನು ತಿದ್ದುತ್ತ ಪ್ರಪಂಚವನ್ನು ಆಸ್ತಿಕಮಯವನ್ನಾಗಿ ಮಾಡುವುದೇ ಗುರುಗಳ ಮುಖ್ಯಗುರಿಯಾಗಿದ್ದಿತು.

ಜ್ಞಾನಹೀನಂ ಗುರುಂ ಪ್ರಾಪ್ಯ ಕುತೋ ಮುಕ್ತಿಮವಾಪ್ನುಯಾತ್ ॥
ಛಿನ್ನನೌಕಾಗತಸ್ಸಿಂಧೋರ್ಯಥಾ ಪಾರಂ ನಗಚ್ಛತಿ ॥

ಗುರುವೆಂಬುವನು ಜ್ಞಾನನಿಧಿಯಾಗಿದ್ದು, ಪರಿಪಕ್ವಮತಿಯುಳ್ಳ ಶಿಷ್ಯರಿಗೆ ಜ್ಞಾನೋಪದೇಶವನ್ನು ಮಾಡುತ್ತಲೇ ಇರಬೇಕು. ಜ್ಞಾನಶೂನ್ಯರಾದ

ಗುರುಗಳನ್ನಾಶ್ರಯಿಸದೆ ಮುಕ್ತಿಯನ್ನು ಪಡೆಯುವೆನೆಂದಪೇಕ್ಷಿಸುವ ಮಾನವನು, ಒಡೆದು ತೂತುಬಿದ್ದಿರುವ ಹಡಗದಲ್ಲಿ ಕುಳಿತುಕೊಂಡು ಸಮುದ್ರವನ್ನು ದಾಟುವೆನೆಂಬ ಪ್ರಯತ್ನಪಡುವ ಮೂರ್ಖನಿಗೆ ಸಮಾನ ನಾಗುವನು ಎಂದು ಶ್ರೀ ಮಹಾಗುರುಗಳಾದ ರೇಣುಕ ಭಗವತ್ಪಾದರು ಅನುಜ್ಞೆಯನ್ನಿತ್ತಿರುವುದನ್ನು ನೋಡಿದರೆ, ಮಠಾಧಿಕಾರಿಗಳಾದ ಗುರುಗಳು ಶಾಸ್ತ್ರಪಾರಂಗತರಾಗಿಯೂ,ಜ್ಞಾನಿಗಳಾಗಿಯೂ, ಶಮದಮಾದಿಗುಣಸಂಪನ್ನ ರಾಗಿಯೂ, ವೈರಾಗ್ಯಶಾಲಿಗಳಾಗಿಯೂ, ಲಿಂಗಾಂಗ ಸಾಮರಸ್ಯಾನುಭವ ವುಳ್ಳವರಾಗಿಯೂ ಇರಬೇಕೆಂದು ಸ್ಪಷ್ಟವಾಗುವುದು.

ಯಥಾ ವಹ್ನಿಸಂಪರ್ಕಾನ್ಮಲಂ ತ್ಯಜತಿ ಕಾಂಚನಂ ।
ತಥೈವ ಗುರುಸಂಪರ್ಕಾತ್ಪಾಪಂ ತ್ಯಜತಿ ಮಾನವಃ ॥
ಯಥಾವಹ್ನಿಸಮೀಪಸ್ಥಃ ಶ್ಯಾತಕುಂಭೋ ವಿಲೀಯತೇ ।
ತಥಾ ಪಾಪೋ ವಿಲೀಯೇತ್ ಆಚಾರ್ಯಸ್ಯ ಸಮೀಪತಃ ॥

ಬೆಂಕಿಯ ಸಂಬಂಧದಿಂದ ಭಂಗಾರವು ಹೇಗೆ ದೋಷದಿಂದ ಬಿಡುಗಡೆ ಹೊಂದುತ್ತದೆಯೋ, ಹಾಗೆ ಗುರುಸಂಸರ್ಗವುಳ್ಳ ಮಾನವನು ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಬೆಂಕಿಯ ಸಮೀಪದಲ್ಲಿರಿಸಿದ ಸುವರ್ಣ ಕುಂಭವು ಹೇಗೆ ಕರಗಿ ಮಾಯವಾಗುವುದೋ ಹಾಗೆ ಗುರುಗಳ ದರ್ಶನ ಸಂಭಾಷಣಾದಿ ಸಂಸರ್ಗದಿಂದ ಶಿಷ್ಯನ ಹೃದಯಸ್ಥಾನದಲ್ಲಿ ಗಟ್ಟಿಗೊಂಡಿರುವ ಪಾಪರಾಶಿಯು ಕರಗಿ ಮರೆಯಾಗುವದು ಎಂದು ವೀರಶೈವಸಿದ್ಧಾಂತ ಗ್ರಂಥ ಗಳಲ್ಲಿ ಗುರುಗಳಿಗೆ ಬಹಳವಾದ ಮಹತ್ವವನ್ನು ಕೊಟ್ಟಿದ್ದಾರೆ. ಗುರುಗಳಿಗೆ ಇಂಥ ಮಹತ್ತ್ವವು ಬರಬೇಕಾದರೆ—

ಶಮೋ ದಮಸ್ತಪಶ್ಶೌಚಂ ಕ್ಷಾಂತಿರಾರ್ಜವಮೇವಚ ।
ಜ್ಞಾನವಿಜ್ಞಾನಮಾಸ್ತಿಕ್ಯಂ ಬ್ರಾಹ್ಮಂ ಕರ್ಮ ಸ್ವಭಾವಜಂ ॥

ಎಂಬಂತೆ ಅಂತರಿಂದ್ರಿಯನಿಗ್ರಹ, ಬಹಿರಿಂದ್ರಿಯನಿಗ್ರಹ, ತಪಸ್ಸು, ಶೌಚ, ಕ್ಷಾಂತಿ, ಆರ್ಜವ,ಜ್ಞಾನ, ಆಸ್ತಿಕ್ಯ ಮುಂತಾದ ದೈವೀಸಂಪತ್ತುಗಳೇ ಆವಶ್ಯಕವಾಗಿವೆ.

ಪರಮಪವಿತ್ರವಾದ ವೀರಶೈವಮತವನ್ನು ಜಗದಾದಿಯಲ್ಲಿ ಶ್ರೀರೇಣು ಕಾದಿಪಂಚಾಚಾರ್ಯರು ಸ್ಥಾಪಿಸಿರುವ ವಿಷಯವು ಪ್ರತಿಯೊಬ್ಬರಿಗೂ

ವೇದ್ಯವಾದುದಾಗಿದೆ. ಪೂರ್ವದಲ್ಲಿ ಭರತಖಂಡದೊಳಗೆ ಸರ್ವತೋಮುಖ ವಾಗಿ ವ್ಯಾಪ್ತವಾಗಿದ್ದ ಈ ಮತದ ರಕ್ಷಣಶಿಕ್ಷಣಾದಿಗಳಿಗಾಗಿ ಪೂರ್ವಾ ಚಾರ್ಯರು ಪ್ರತಿಯೊಂದು ನಗರಗ್ರಾಮಗಳಲ್ಲಿ ಶಾಖಾಮಠಗಳನ್ನು ಸ್ಥಾಪಿ ಸಿದರು. ಈ ಶಾಖಾಮಠಾಧಿಪತಿಗಳೇ ಗುರುವರ್ಗದವರೆಂದೂ, ಮಾಹೇಶ್ವರ ರೆಂದೂ ಲೋಕದಲ್ಲಿಯೂ ಶಾಸ್ತ್ರದಲ್ಲಿಯೂ ಪ್ರಸಿದ್ಧರಾಗಿದ್ದಾರೆ. ಈ ಮಹ ನೀಯರ ಆತ್ಮಶಕ್ತಿಯ ಪ್ರಭಾವದಿಂದಲೇ ವೀರಶೈವಮತವು ಜಗತ್ತಿನಲ್ಲಿ ಬಹು ಪೂಜ್ಯಮತವೆಂದು ಪ್ರಖ್ಯಾತಿಗೊಂಡಿತು. ಭರತಖಂಡದಲ್ಲಿ ಏಕ ಛತ್ರಾಧಿಪತ್ಯದಿಂದಾಳಿದ ಅನೇಕಾನೇಕಜನ ಹಿಂದೂಮಹಾರಾಜರೂ, ಅಕಬರ-ಜಹಂಗೀರ-ಹುಮಾಯಖಾನ್-ಔರಂಗಜೇಬ ಮೊದಲಾದ ಮುಸ ಲ್ಮಾನಮಹಾರಾಜರೂ, ಈ ಮಾಹೇಶ್ವರರ ಅದ್ಭುತ ಮಹಿಮೆಯನ್ನು ಕಂಡು ಅನೇಕ ವಿಧವಾದ ದಾನಗಳನ್ನು ಮಾಡಿದ್ದಾರೆ. ಅವರು ಕೊಟ್ಟ ಭೂಮಿ-ಗ್ರಾಮ ಮೊದಲಾದುವುಗಳು ಬಹು ಕಾಲದಿಂದ ಈವರೆಗೂ ಇವರ ಸ್ವಾಧೀನ ದಲ್ಲಿರುತ್ತವೆ. ಬ್ರಿಟಿಷ್ ಸರಕಾರದವರಾದರೂ ಅವರ ದಾನವನ್ನು ಹೋಗ ಲಾಡಿಸದೆ ಯಥಾಪ್ರಕಾರವಾಗಿ ನೆರವೇರಿಸುತ್ತ ಬಂದಿದ್ದಾರೆ. ನಮ್ಮೀ ಖಂಡ ದಲ್ಲಿ ರಾಜಾಧಿಮಾನ್ಯಗಳಾದ ಮಠಗಳು ಹೇರಳವಾಗಿ ದೊರೆಯುತ್ತವೆ. ಇಂಥ ಜಗತ್ಪೂಜ್ಯಗಳಾದ ಮಠಗಳನ್ನೂ, ಆ ಮಠಾಧಿಪತಿಗಳನ್ನೂ ಎಷ್ಟೋ ಜನರು ಈಗೀಗ ಅಲ್ಲಗಳೆಯುವ ಕಾರ್ಯದಲ್ಲಿ ತೊಡಗಿದ್ದಾರೆ. ಇದು ಬಹು ಜನ್ಮಕೃತಪಾಪರಾಶಿಯ ಪರಿಣಾಮವಲ್ಲದೆ ಬೇರೊಂದಲ್ಲವೆಂದು ಹೇಳಬಹು ದಾಗಿದೆ. ಮಾಹೇಶ್ವರರ ಈ ಮಹಿಮೆಯನ್ನು ಅರಿಯದಿರುವುದರಿಂದಲೇ ಈಗಿನ ನಾಸ್ತಿಕಪಂಥದ ಜನರು ಈ ರೀತಿಯಾಗಿ ಆಚರಿಸುತ್ತಾರೆ.

ಲೋಕವಿಖ್ಯಾತರಾದ ವ್ಯಾಸಮಹರ್ಷಿಗಳು ತಮ್ಮಿಂದ ರಚಿಸಲ್ಪಟ್ಟ ಸ್ಕಂದಪುರಾಣಾಂತರ್ಗತ ಶಂಕರ ಸಂಹಿತೆಯಲ್ಲಿ ಮಾಹೇಶ್ವರರ ಮಹಿಮೆ ಯನ್ನು ಯಾವ ರೀತಿಯಾಗಿ ವರ್ಣಿಸಿರುತ್ತಾರೆಂಬ ವಿಷಯವನ್ನು ಸರ್ವರೂ ಅವಲೋಕಿಸಬೇಕು.

ಸ್ಕಂದಪುರಾಣ ಶಂಕರ ಸಂಹಿತೆಯಲ್ಲಿ—

ಯತ್ರ ಮಾಹೇಶ್ವರೈಃ ಕುರ್ಯಾಚ್ಛಿವಲಿಂಗಾರ್ಚನಂ ಸಕೃತ್ ।
ವಸಂತಿ ತತ್ರ ತೀರ್ಥಾನಿ ಸರ್ವಾಣಿ ಸತತಂ ಗುಹ ॥೬೫॥

ವೀರಮಾಹೇಶ್ವರಂ ಮಾಂ ಚ ವಿಭಿನ್ನಂ ಪ್ರವದಂತಿ ಯೇ ।
ತೇ ಮೂಢಾ ಏವ ಮನುಜಾ ನಾತ್ರ ಕಾರ್ಯಾ ವಿಚಾರಣಾ ॥

(ಸ್ಕಂದ. ಶಂ. ಸಂ. ಅಧ್ಯಾಯ ೮೧)

ಮಾಹೇಶ್ವರನು (ಗುರುವಂಶೋದ್ಭವನಾದ ಜಂಗಮನು) ಯಾವ ಸ್ಥಾನದಲ್ಲಿ ಶಿವಲಿಂಗಾರ್ಚನೆಯನ್ನು ಮಾಡುವನೋ, ಅಲ್ಲಿ ಸಕಲ ತೀರ್ಥಗಳು ಸನ್ನಿಹಿತವಾಗುವುವೆಂದೂ, ವೀರಮಾಹೇಶ್ವರನಿಗೂ ಶಿವನಿಗೂ ಯಾರು ಭೇದವನ್ನು ಕಲ್ಪಿಸುವರೋ ಅವರು ಮೂರ್ಖರೆಂದೂ ಶ್ರೀ ಪರಮೇಶ್ವರನು ಷಣ್ಮುಖನಿಗೆ ಉಪದೇಶಿಸಿರುವನು.

ವಿನಾ ಮಾಹೇಶ್ವರೈರೇಕೋ ಯಸ್ತು ಭುಂಕ್ತೇ ಷಡಾನನ ।
ಸ ಪಾಪೀಯಾನಘಂ ಭುಂಕ್ತೇ ಸಃ ಶ್ರೀಕಂಠಾಪರಾಧಕೃತ್ ॥೭೦॥

ಮಾಹೇಶ್ವರಾ ಯಸ್ಯ ಗೃಹೇ ನ ಕುರ್ಯುರ್ಲಿಂಗಾರ್ಚನಂ
ಪ್ರಾಣಶಿವೈಕ್ಯಭಾಜಃ ।
ಭುಂಜೀಯುರನ್ನಂ ನಹಿ ತಸ್ಯ ಜನ್ಮ ವ್ಯರ್ಥಂ ಪಶೂನಾಮಿವ
ಜೀವಿತಂ ತತ್ ॥೭೧॥

(ಸ್ಕಂದ. ಶಂ. ಸಂ. ಅಧ್ಯಾಯ. ೮೩)

ಯಾವ ವೀರಶೈವ ಸದ್ವಂಶೀಯ ಭಕ್ತನು ಮಾಹೇಶ್ವರರಿಲ್ಲದೆ ಭುಂಜಿಸುವನೋ ಅವನು ಪಾಪಿಯಾಗಿ ಪಾಪವನ್ನೇ ಭುಂಜಿಸುವನೆಂದೂ, ಶಿವಾಪರಾಧಿಯಾಗುವನೆಂದೂ, ಯಾವ ಭಕ್ತನ ಮನೆಯಲ್ಲಿ ಶಿವಜೀವೈಕ್ಯಭಾವವುಳ್ಳ ಮಾಹೇಶ್ವರರು ಲಿಂಗಾರ್ಚನೆಯನ್ನು ಮಾಡುವುದಿಲ್ಲವೋ ಮತ್ತು ಅನ್ನವನ್ನು ಭುಂಜಿಸುವುದಿಲ್ಲವೋ ಆ ಭಕ್ತನ ಜನ್ಮವು ಪಶುಗಳ ಜನ್ಮದಂತೆ ವ್ಯರ್ಥವಾಗುವುದೆಂದೂ ಈ ಶ್ಲೋಕಗಳ ಅಭಿಪ್ರಾಯವಿರುವುದು.

ಶಿವಲಿಂಗಾಂಗಸಂಬಂಧಭಾಜಾಂ ದರ್ಶನಮಾತ್ರತಃ ।
ಮುಕ್ತಿಂ ಗಚ್ಛಂತಿ ಮನುಜಾಃ ಪಶುಪಕ್ಷಿಮೃಗಾದಯಃ ॥೭೭॥

ತೇಷಾಂ ಸಂರಕ್ಷಣಂ ಯಸ್ತು ಕುರುತೇ ಮನುಜೋತ್ತಮಃ ।
ಸ ಧನ್ಯಃ ಸ ಕೃತಾರ್ಥಃ ಸ್ಯಾತ್ ಸ ಶಿವೈಕ್ಯಪದಂ ವ್ರಜೇತ್ ॥

ತಸ್ಮಾತ್ಸರ್ವಂ ಪರಿತ್ಯಜ್ಯ ಸರ್ವಭಾವೇನ ಸರ್ವದಾ ।
ಪೂಜಯೇದಾದರೇಣೈವ ದ್ವಿಜಂ ಲಿಂಗಾಂಗಸಂಗಿನಂ ॥೭೯॥

(ಸ್ಕಂದ. ಶಂ. ಸಂ. ಅಧ್ಯಾಯ ೮೪)

ಶಿವಲಿಂಗಾಂಗಸಂಬಂಧವುಳ್ಳ ವೀರಮಾಹೇಶ್ವರರ ದರ್ಶನ ಮಾತ್ರದಿಂದ ಮನುಷ್ಯರಿಗೂ ಪಶುಪಕ್ಷಿ ಮೃಗಾದಿಗಳಿಗೂ ಮುಕ್ತಿಯು ದೊರಕುವುದೆಂದೂ, ಈ ವೀರಮಾಹೇಶ್ವರ ಸಂರಕ್ಷಣೆಯನ್ನು ಯಾವನು ಮಾಡುವನೋ ಅವನೇ ಧನ್ಯನೆಂದೂ, ಅವನು ಶಿವಪದವನ್ನು ಹೊಂದುವನೆಂದೂ, ಆದ ಕಾರಣ ಸಕಲ ಕಾರ್ಯಗಳನ್ನು ಬಿಟ್ಟು ಆದರ ಬುದ್ಧಿಯಿಂದ ಲಿಂಗಾಂಗ ಸಂಗಿಯಾದ ಮಾಹೇಶ್ವರ ಬ್ರಾಹ್ಮಣನನ್ನು ಪೂಜಿಸಬೇಕೆಂದೂ ಈ ಶ್ಲೋಕಗಳ ಅಭಿಪ್ರಾಯವಿರುತ್ತದೆ. ಈ ಶ್ಲೋಕಗಳೆಲ್ಲಾ ಶಂಕರಸಂಹಿತೆಯ ವೀರ ಮಾಹೇಶ್ವರ ಪ್ರಶಂಸಾ ಪ್ರಕರಣದಲ್ಲುಕ್ತಗಳಾಗಿವೆ.

ಈ ರೀತಿಯಾಗಿ ವ್ಯಾಸಮಹರ್ಷಿಗಳು ಮಾಹೇಶ್ವರರ ಮಹಿಮೆಯನ್ನು ಕೊಂಡಾಡಿ ಜಗತ್ತಿನಲ್ಲಿ ಇವರ ಮಹತ್ತ್ವವನ್ನು ಹರಡಿದ್ದಾರೆ. ಲೋಕವಂದ್ಯರಾದ ಇಂಥ ಮಾಹೇಶ್ವರರಲ್ಲಿ ವೀರಶೈವಮತಾನುಯಾಯಿಗಳಾದ ಭಕ್ತರೆಲ್ಲರೂ ಅಸಾಧರಣವಾದ ಭಕ್ತಿಯನ್ನಿಟ್ಟು ಆ ಪೂಜ್ಯಪಾದರನ್ನು ಸೇವಿಸಿ ಪರಶಿವನ ಕೃಪೆಗೆ ಪಾತ್ರರಾಗಿ ಕೈವಲ್ಯಸುಖವನ್ನನುಭವಿಸಬೇಕು.

ವೇದಾಗಮಾವಲಂಬಿಯಾದ ಪ್ರತಿಯೊಬ್ಬ ಭಾರತೀಯನೂ ಆಯಾ ಕಾಲದಲ್ಲಿ ತನ್ನ ಅಧಿಕಾರತಾರತಮ್ಯಾನುಗುಣವಾಗಿ ಷೋಡಶಸಂಸ್ಕಾರಗಳನ್ನು ಮಾಡಿಸಿಕೊಂಡು ತನ್ನ ಆತ್ಮವನ್ನು ಪರಿಶುದ್ಧಿಗೊಳಿಸಿಕೊಳ್ಳಬೇಕಾಗುವುದು. ಈ ಷೋಡಶಸಂಸ್ಕಾರಗಳು ಪ್ರತಿಯೊಂದು ವೈದಿಕಮತಕ್ಕೂ ಸಾಮಾನ್ಯವಾಗಿದ್ದರೂ, ಅವರವರ ಮತಕ್ಕೆ ಬೇಕಾದ ಒಂದೊಂದು ವಿಶೇಷ ಕರ್ಮವು ಆಯಾಯ ಮತಾಚಾರ್ಯರಿಂದ ಹೇಳಲ್ಪಟ್ಟಿರುವುದು. ಈ ವೀರಶೈವಮತದ ದ್ವಿಜರಲ್ಲಿ ನಡೆಯಿಸಲ್ಪಡುವ ಷೋಡಶಸಂಸ್ಕಾರಗಳೊಳಗೆಲ್ಲ ಪಂಚಕಲಶ ಸ್ಥಾಪನೆಯೆಂಬ ವಿಶೇಷವಿಧಿಯೊಂದು ಕೂಡಿಯೇ ಇರುತ್ತದೆ. ವಿವಾಹದಲ್ಲಿಯೂ ಪಂಚಕಲಶಸ್ಥಾಪನೆಯಾಗಬೇಕು; ಜಾತಕರ್ಮದಲ್ಲಿಯೂ ಪಂಚಕಲಶಸ್ಥಾಪನೆಯಾಗಬೇಕು; ದೀಕ್ಷೋಪನಯನಗಳಲ್ಲಿಯೂ ಪಂಚಕಲಶಸ್ಥಾಪನೆಯಾಗಬೇಕು; ಹೀಗೆ ಪಂಚಕಲಶಸ್ಥಾಪನೆಯಿಲ್ಲದೆ ಷೋಡಶಕರ್ಮಗಳಲ್ಲಿ ಯಾವುದನ್ನೂ ನಡೆಯಿಸುವಂತಿಲ್ಲ. ಪಂಚಕಲಶಸ್ಥಾಪನೆಯಿಲ್ಲದೆ ಯಾವ ಕರ್ಮವನ್ನು ಮಾಡಿದರೂ ಆ ಕರ್ಮವು ಪರಿಪೂರ್ಣವಾಗುವುದಿಲ್ಲ. ಆದುದರಿಂದ ಈ ಪಂಚಕಲಶಾರ್ಚನೆಯಲ್ಲಿ ಶ್ರೀ

ಜಗದಾಚಾರ್ಯರು ಒಂದು ವಿಧವಾದ ವಿಶೇಷಮಹತ್ವವನ್ನು ಇಟ್ಟಿರುವುದ ರಿಂದ ಈ ವಿಧಿಯನ್ನು ಲಿಂಗಾಂಗಿಗಳು ಬಹು ಜಾಗರೂಕತೆಯಿಂದ ನಡೆಯಿಸ ಬೇಕಾಗಿದೆ. ವಿಧಿಯನ್ನು ಅತಿಕ್ರಮಿಸಿ ಈ ಕಲಶಗಳನ್ನು ಪೂಜಿಸಿದ್ದಾದರೆ ಅನೇಕ ದೋಷಗಳುಂಟಾಗುತ್ತವೆ. ಯಾವ ಕರ್ಮವು ವಿಧಿಗೆ ಅನುಸರಿಸಿ ರುವುದೋ ಆ ಕರ್ಮವು ಉತ್ತಮ ಫಲಗಳನ್ನು ಕೊಡುವುದು. ಯಾವ ಕರ್ಮವು ವಿಧಿಗೆ ವಿರುದ್ಧವಾಗಿರುವುದೋ ಅದು ಉತ್ತಮ ಫಲಗಳಿಗೆ ಬದಲಾಗಿ ದುಷ್ಫಲಗಳನ್ನು ಕೊಡುವುದು. ಲೋಕದಲ್ಲಿ ಮಗನು ತಂದೆಯ ಮಾತನ್ನು ಸ್ವಲ್ಪವೂ ಮೀರದಂತೆ ಕೆಲಸಮಾಡುವುದರಿಂದ ತಂದೆಯು ಸಂತೋಷಗೊಳ್ಳುವನು. ತಂದೆಯಮಾತಿಗೆ ವಿರೋಧವಾಗಿ ನಡೆಯುವ ಮಗನು ತಂದೆಯ ಕೋಪಕ್ಕೆ ಪಾತ್ರನಾಗುವಂತೆ ಈ ಪವಿತ್ರವಾದ ಪಂಚ ಕಲಶಸ್ಥಾಪನೆಯನ್ನು ವಿಧ್ಯುಕ್ತರೀತಿಯಿಂದ ನಡೆಯಿಸಬೇಕೆಂದು ಶಿವಾಗಮ ಗಳಲ್ಲಿ ಬೋಧಿಸಿರುವ ಪರಮೇಶ್ವರನ ವಾಕ್ಯಗಳನ್ನು ಯಾರು ಪಾಲಿಸುವರೋ ಅವರು ಶಿವನ ಅನುಗ್ರಹಕ್ಕೆ ಪಾತ್ರರಾಗುವರು. ಯಾರು ವಿಧಿಯನ್ನು ಅತಿಕ್ರಮಿಸಿ ಪಂಚಕಲಶಗಳಿಗೆ ಕಡಿಮೆ ಅಥವಾ ಹೆಚ್ಚುಮಾಡಿ ವರ್ತಿ ಸುವರೋ ಅವರು ಶಿವನ ಕೋಪಕ್ಕೆ ಪಾತ್ರರಾಗುವರು. ಮಧ್ಯದಲ್ಲಿ ತಮ್ಮ ಪ್ರತಿಷ್ಠೆಯನ್ನು ತೋರಿಸದೆ ದೊಡ್ಡವರು ಹೇಳಿದಂತೆ ನಡೆಯಿಸುವುದೇ ವಿಧಿಯು. ವೀರಶೈವರಿಂದ ನಡೆಯಿಸಲ್ಪಡಬೇಕಾದ ವಿವಾಹಾದಿಶುಭಕರ್ಮ ಗಳಲ್ಲಿ ಪಂಚಕಲಶಸ್ಥಾಪನೆಯೆಂಬುದು ಪ್ರಬಲವಿಧಿಯಾಗಿರುತ್ತದೆ. ವೀರ ಶೈವಮತಸ್ಥಾಪಕರೂ, ಶ್ರೀಪರಮೇಶ್ವರನ ಸದ್ಯೋಜಾತಾದಿಪಂಚ ಮುಖೋದ್ಭೂತರೂ, ವೀರಶೈವಮತದ ಮೂಲಗುರುಗಳೂ ಆದ ಶ್ರೀಜಗ ದ್ಗುರು ಪಂಚಾಚಾರ್ಯರು ಮಂತ್ರರೂಪದಿಂದ ಋತ್ವಿಗ್ದ್ವಾರಾ ಆ ಕಲಶ ಗಳಲ್ಲಿ ಸಾಕ್ಷಾತ್ಕಾರವಾಗಿದ್ದು ಕರ್ಮಾಧಿಕಾರಿಯನ್ನು ಅನುಗ್ರಹಿಸುತ್ತಾರೆ. ಹೀಗೆ ಪ್ರತಿಯೊಂದು ಕರ್ಮಗಳಲ್ಲಿಯೂ ಐದು ಕಲಶಗಳನ್ನು ಸ್ಥಾಪಿಸ ಬೇಕೆಂದು ಸಿದ್ಧಾಂತವು ಸಾರುತ್ತಿದ್ದರೂ, ಈ ವಿಧಿಯನ್ನು ಮೀರಿ ಅನೇಕರು ದುರಭಿಮಾನಪಿಶಾಚಗ್ರಸ್ತರಾಗಿ ಶಾಸ್ತ್ರಕ್ಕೂ ಶಿವವಾಕ್ಯಕ್ಕೂ ಅಂಜದೆ ಆ ಐದು ಆಚಾರ್ಯಕಲಶಗಳ ಜೊತೆಯಲ್ಲಿ ಗಗನಕುಸುಮಾಯಮಾನವಾದ ಆರನೆಯ ಕಲಶವೊಂದನ್ನು ಇಡಬೇಕೆಂದು ಅಜ್ಞರಲ್ಲಿ ಬೋಧಿಸಲು ಪ್ರಾರಂಭಿಸಿರುತ್ತಾರೆ. ಈ ಆರನೆಯ ಕಲಶವು ಎಲ್ಲಿ ಹೇಳಲ್ಪಟ್ಟಿದೆಯೆಂದು

ಯಾರಾದರೂ ಕೇಳಿದರೆ, ಐದನೆಯ ವೇದದಲ್ಲಿಯೂ ಅಚಿಂತ್ಯಾಗಮದ ಲ್ಲಿಯೂ ಹೇಳಲ್ಪಟ್ಟಿದೆಯೆಂದು ಹೂಂಕರಿಸುವುದನ್ನು ಕಲಿತಿರುವರು. ಈ ವೇದವೂ ಅಚಿಂತ್ಯಾಗಮವೂ ಎಲ್ಲಿದೆಯೋ ತಿಳಿಯದಾಗಿದೆ. ಇಂಥ ಉಚ್ಛೃಂಖಲವೃತ್ತಿಯುಳ್ಳ ಮದೋನ್ಮತ್ತ ಗಜಗಳಿಗೆ ಶಾಸ್ತ್ರವೆಂಬ ಅಂಕುಶದ ಭೀತಿಯು ಸಹ ಇಲ್ಲದಂತಾಗಿದೆ. ಅಯ್ಯಾ ಮಹಾಶಯರೇ! ನೀವು ಹೀಗೆ ಶಾಸ್ತ್ರಕ್ಕೆ ವಿರೋಧವಾಗಿ ನಡೆಯಬಾರದೆಂದು ಯಾರಾದರೂ ನೀತಿಜ್ಞರು ಹೇಳಿದರೆ "ಶಾಸ್ತ್ರ ಹೇಳೋಕೆ ಬೋನ ಉಂಬೋಕೆ" ಎಂದು ಉದ್ಗಾರ ವನ್ನು ತೆಗೆಯುವರು.

ವೀರಶೈವಮತಸ್ಥಾಪಕರು ರೇಣುಕಾದಿಪಂಚಾಚಾರ್ಯರೇ ಹೊರತು ಷಡಾಚಾರ್ಯರೆಂದು ಯಾವ ಗ್ರಂಥದಲ್ಲಿಯೂ ಉಕ್ತವಾಗಿಲ್ಲ. ಹಾಗೆ ಷಡಾಚಾರ್ಯರೆಂದು ಸಿದ್ಧಾಂತದಲ್ಲಿ ಉಕ್ತವಾಗಿದ್ದರೆ ಷಟ್ಕಲಶಸ್ಥಾಪನೆಯು ಸಹ ಸಿದ್ಧವಾಗುತ್ತಲಿತ್ತು. ಈ ಪಂಚಾಚಾರ್ಯರು ಪರಶಿವನ ಪಂಚಮುಖ ಗಳಿಂದ ಅವತರಿಸಿರುತ್ತಾರೆ. ಈ ಆರನೆಯ ಆಚಾರ್ಯರ ಉತ್ಪತ್ತಿಗೆ ಬೇರೆ ಮುಖವನ್ನು ಕಲ್ಪಿಸಲು ಸಾಧ್ಯವೇ? ಶಾಸ್ತ್ರದಲ್ಲಿ ಪರಮೇಶ್ವರನಿಗೆ ಪಂಚ ಮುಖಗಳೆಂದು ಉಕ್ತವಾಗಿದೆಯೆ, ಹೊರತು ಷಣ್ಮುಖಗಳೆಂದು ಉಕ್ತವಾಗಿಲ್ಲ. ಅಂದಮೇಲೆ ಷಟ್ಕಲಶಗಳಿಗೆ ಅವಕಾಶವೆಲ್ಲಿ? ಈ ಕಲಶಸ್ಥಾಪನೆಯ ವಿಷಯ ದಲ್ಲಿ—"ಪಂಚಬ್ರಹ್ಮಮಯೈಸ್ತತ್ರ ಸ್ಥಾಪಿತೈಃ ಕಲಶೋದಕೈಃ ಆಚಾರ್ಯ ಸ್ಸಮವೈತ್ವಿಗ್ಭಿಶ್ಶಿಷ್ಯಮಭಿಷಿಂಚಯೇತ್ ||" ಎಂದು ರೇಣುಕರು ಅಗಸ್ತ್ಯ ಮುನಿಗೆ ಬೋಧಿಸಿದ ಸಿದ್ಧಾಂತಶಿಖಾಮಣಿಯು ಸಹ ಪಂಚಕಲಶಸ್ಥಾಪನೆ ಯನ್ನು ವಿಧಿಸುವುದಲ್ಲವೆ, ವಿರಕ್ತಶಿಖಾಮಣಿಗಳಾದ ಮರಿತೋಂಟದಾ ರ್ಯರು ಸಹ ಭುವನಪ್ರಸಿದ್ಧರಾದ ಶ್ರೀ ಪಂಚಾಚಾರ್ಯ ಸಂಪ್ರದಾಯ ದಿಂದ ಬಂದಿರುವ ಋತ್ವಿಕ್ಕುಗಳೊಂದಿಗೆ ಪಟ್ಟಾಭಿಷಿಕ್ತನಾದ ಶ್ರೀಗುರುವು ಆ ಪಂಚಕಲಶೋದಕಗಳಿಂದಲೇ ಶಿಷ್ಯನನ್ನು ಪ್ರೋಕ್ಷಿಸಿ ಶುದ್ಧಿಗೊಳಿಸ ಬೇಕೆಂದು ವ್ಯಾಖ್ಯಾನವನ್ನು ಬರೆದಿರುತ್ತಾರೆ. ಹೀಗಿದ್ದಾಗ್ಯೂ ಕೆಲವರು ಆರುಕಲಶಗಳನ್ನು ಸ್ಥಾಪಿಸಲು ತವಕಪಡುವುದನ್ನು ನೋಡಿ ಆಶ್ಚರ್ಯ ಪಡಬೇಕಾಗಿದೆ. ಮುಂದೆ ಮತ್ತೊಬ್ಬ ಮಹರ್ಷಿಶಿಖಾಮಣಿಯು ಜನಿಸಿದರೆ ಅವನು ಇವರ ಆರುಕಲಶಗಳ ಜೊತೆಯಲ್ಲಿ ಮತ್ತೊಂದನ್ನು ಸೇರಿಸಲೂ ಬಹುದು. ಹೀಗೆ ಮನಸ್ವಿಯಾಗಿ ಕಲ್ಪಿಸುತ್ತಹೋದರೆ ವೇದಶಾಸ್ತ್ರಮರ್ಯಾದೆ

ಯನ್ನು ತಿಳಿದವರು ಒಪ್ಪುವರೇ? ಇದಕ್ಕೆ ಪರಮಾತ್ಮನು ಪ್ರೀತಿಸುವನೇ? ಆದ್ದರಿಂದ ಪೂರ್ವಾಚಾರ್ಯರಿಂದ ಹೇಳಲ್ಪಟ್ಟ ವಿಧಿಯನ್ನು ಮೀರಿ ನಡೆಯದೆ ಅವರ ಉಪದೇಶದಂತೆ ನಡೆಯುವುದೇ ಆಸ್ತಿಕಮಹಾಜನಗಳ ಧರ್ಮವಾಗಿದೆ. "ಯಃಶ್ಯಾಸ್ತ್ರವಿಧಿಮುತ್ಸೃಜ್ಯವರ್ತತೇಕಾಮಕಾರತಃ। ನಸ ಸಿದ್ಧಿಮವಾಪ್ನೋತಿ ನಸುಖಂ ನಪರಾಂಗತಿಂ॥" ಎಂಬ ಸಿದ್ಧಾಂತೋಕ್ತಿಯಂತೆ ಯಾವನು ಶಾಸ್ತ್ರವಿಧಿಯನ್ನು ಮೀರಿ ಸ್ವೇಚ್ಛೆಯಾಗಿ ವರ್ತಿಸುವನೋ ಅವನು ಯಾವ ಸಿದ್ಧಿಯನ್ನಾಗಲಿ, ಸುಖವನ್ನಾಗಲಿ ಹೊಂದಲಾರನು. ಹೀಗೆ ಕೆಲವರು ವಿಧಿಗಳನ್ನು ಮೀರಿ ನಡೆಯುವುದರಿಂದಲೇ "ಏಕಃಪಾಪಾನಿಕುರುತೇ ಫಲಂಭುಕ್ತೇಮಹಾಜನಃ" ಎಂಬುಕ್ತಿಗನುಗುಣವಾಗಿ ವೀರಶೈವಮತೀಯರೆಲ್ಲರೂ ಕಡಿಮೆಯವರೆಂಬ ಅಪಯಶಸ್ಸಿಗೆ ಭಾಗಿಗಳಾಗುತ್ತಬಂದಿದ್ದಾರೆ. ಪಂಚಕಲಶಸ್ಥಾಪನಾವಸರದಲ್ಲಿ ಆಯಾಯ ಆಚಾರ್ಯರ ಶಾಖಾಸೂತ್ರಗೋತ್ರಾದಿಗಳನ್ನು ಹೇಳಿಕೊಂಡು ಸದ್ಯೋಜಾತಾದಿಮಂತ್ರಪೂರ್ವಕವಾಗಿ ಅಂಗನ್ಯಾಸ, ದೇಹನ್ಯಾಸ, ಕರನ್ಯಾಸಾದಿಗಳನ್ನು ಮಾಡಬೇಕೆಂದು ಸಿದ್ಧಾಂತದಲ್ಲಿ ವಿಧಿಸಿರುವಂತೆ, ಆರನೆಯ ಕಲಶದ ವಿಷಯದಲ್ಲಿ ಗೋತ್ರಸೂತ್ರಪ್ರವರನ್ಯಾಸಾದಿಗಳ ವಿಧಾನವು ಯಾವ ಸಿದ್ಧಾಂತಗ್ರಂಥದಲ್ಲೂ ವಿಧಿಸಲ್ಪಟ್ಟಿಲ್ಲ. ಹಾಗೆ ನ್ಯಾಸಾದಿಗಳಿಲ್ಲದೆಯೂ, ಮಂತ್ರೋಚ್ಚಾರವಿಲ್ಲದೆಯೂ ಸುಮ್ಮನೆ ನೀರುತುಂಬಿದ ತಂಬಿಗೆಯೊಂದನ್ನು ತಂದಿಟ್ಟರೆ ಅದು ಕಲಶಸ್ಥಾಪನೆಯೆನಿಸುವುದೂ ಇಲ್ಲ. ಹಾಗೂ ವೈದಿಕಕಲಶವೂ ಎನಿಸುವುದಿಲ್ಲ. ಯಾವ ಕರ್ಮವು ಪೂರ್ವಮಹರ್ಷಿಗಳಿಂದ ಮಂತ್ರಪೂರ್ವಕವಾಗಿ ಉದಾಹರಿಸಲ್ಪಟ್ಟಿಲ್ಲವೋ ಆ ಕರ್ಮವು ಲೌಕಿಕಕರ್ಮವೆನಿಸುತ್ತದಲ್ಲದೆ ವೈಧಿಕ ಕರ್ಮವೆನಿಸುವುದಿಲ್ಲ. ಇದನ್ನು ತಿಳಿಯದೆ ವಿಧಿಗೆ ವಿರೋಧವಾಗಿ ನಡೆಯುವುದರಿಂದ ಪುಣ್ಯಕರ್ಮವನ್ನಾಚರಿಸಲಿಕ್ಕೆ ಹೋಗಿ ಪಾಪವನ್ನು ಅಂಟಿಸಿಕೊಂಡಂತಾಗುವುದು. ಆದುದರಿಂದ ವೈದಿಕಮಾರ್ಗಾನುಯಾಯಿಗಳಾದ ವೀರಶೈವರು ಇಂಥ ವಿಧಿವಿರುದ್ಧವಾದ ಆರನೆಯ ಕಲಶಕ್ಕೆ ಕೈಹಾಕದೆ ಎಂದಿನಂತೆ ತಮ್ಮ ಗುರುಗಳ ಆಜ್ಞೆಯನ್ನು ಪರಿಪಾಲಿಸುತ್ತ ಅನೂಚಾನವಾಗಿ ಬಂದಿರುವ ವಿಧಿಸಮ್ಮತವಾದ ಪಂಚಕಲಶಸ್ಥಾಪನೆಯಲ್ಲಿಯೇ ಬದ್ಧಾದರರಾಗಿ ವರ್ತಿಸಿ ಜಗದಾಚಾರ್ಯರ ಕೃಪೆಗೆ ಪಾತ್ರರಾಗಬೇಕು.

ಸಾಮಾನ್ಯವಾಗಿ ಧರ್ಮಶಾಸ್ತ್ರದಲ್ಲಿ ಹೇಳಿದಂತೆ ವೇದಾವಲಂಬಿಗಳು ಯಾವಯಾವ ಕಾಲದಲ್ಲಿ ಯಾವಯಾವ ಸಂಸ್ಕಾರಗಳನ್ನು ಹೊಂದುವರೋ ಅಂಥ ಸಂಸ್ಕಾರಗಳನ್ನೆಲ್ಲಾ ವೇದಾವಲಂಬಿಗಳಾದ ವೀರಶೈವರೂ ಸಹ ಅವಶ್ಯಹೊಂದಬೇಕಾಗಿದ್ದರೂ ಈ ಪಂಚ ಕಲಶಸ್ಥಾಪನೆಯನ್ನು ಬಿಟ್ಟು ಹೊಂದುವಂತೆ ಇಲ್ಲವು. ಈ ಮತದಲ್ಲಿ ಇದಕ್ಕೆ ಇಷ್ಟು ಮಹತ್ವವನ್ನು ಕೊಡಲು ಕಾರಣವೇನಿರಬಹುದೆಂದು ವಿಚಾರಮಾಡಿ ತಿಳಿದುಕೊಳ್ಳುವುದು ಸರ್ವರ ಕರ್ತವ್ಯವಾಗಿರುತ್ತದೆ. ವೀರಶೈವಮತವು ಶ್ರೀ ರೇಣುಕಾರಾಧ್ಯ, ದಾರುಕಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ ಎಂಬ ಐದುಜನ ಆಚಾರ್ಯರಿಂದ ಸ್ಥಾಪಿಸಲ್ಪಟ್ಟ ಮತವೆಂಬುವದು ಎಲ್ಲರಿಗೂ ವೇದ್ಯವೇ ಇರುತ್ತದೆ! ಈ ಆಚಾರ್ಯಭಗವತ್ಪಾದರು ವೇದಾಗಮೋಪನಿಷತ್ಪ್ರತಿಪಾದಿತವಾದ ಲಿಂಗಧಾರಣವನ್ನು ಬೋಧಿಸಿ ಮುಕ್ತಿಗೆ ಮೂಲಕಾರಣವಾದ ಶಿವಲಿಂಗವನ್ನನುಗ್ರಹಿಸಿ ಗುರುವಿಗೆ ವಿಶೇಷವಾಗಿ ಪ್ರಾಮುಖ್ಯವನ್ನು ಕೊಟ್ಟು ಗುರುಸಾನ್ನಿಧ್ಯವಿಲ್ಲದೆ ಯಾವ ವೈದಿಕಕರ್ಮಗಳನ್ನೂ ಆಚರಿಸಲಾಗದೆಂದು ಆಜ್ಞೆಯನ್ನಿತ್ತಿರುವುದರಿಂದ ಈ ಪಂಚಕಲಶಗಳು ವೀರಶೈವಮತಸ್ಥರಾದ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳೆಂಬ ನಾಲ್ಕು ಆಶ್ರಮದವರಿಂದ ನಡೆಯಿಸಲ್ಪಡತಕ್ಕ ವ್ರತವೆಂದು ಎಲ್ಲ ಕ್ರಿಯೆಗಳಲ್ಲಿ ಭಗವತ್ಸ್ವರೂಪಿಗಳಾದ ಆ ಶ್ರೀರೇಣುಕಾದಿ ಮೂಲಪಂಚಾಚಾರ್ಯರ ಸ್ಮಾರಕಗಳಾಗಿರುತ್ತವೆ. ನಿತ್ಯನೈಮಿತ್ತಿಕ ಕಾಮ್ಯಪ್ರಾಯಶ್ಚಿತ್ತಗಳೆಂಬ ಕರ್ಮಗಳಲ್ಲಿ ಯಜಮಾನನು ಯಾವ ಕರ್ಮವನ್ನು ನಡೆಯಿಸಬೇಕಾದರೂ ಆಚಮಾನ ಪ್ರಾಣಾಯಾಮ ಸಂಕಲ್ಪಗಳನ್ನು ಪೂರೈಸಿಕೊಂಡು ಆಚಾರ್ಯಪ್ರತಿನಿಧಿಗಳಾದ ಆಯಾಯ ಗೋತ್ರಗುರುಗಳನ್ನು ಋತ್ವಿಜರನ್ನಾಗಿ ನಿಯಮಿಸಿ ಅವರ ಮುಖದಿಂದ ಅಂಗನ್ಯಾಸ ದೇಹನ್ಯಾಸಪೂರ್ವಕವಾಗಿ ಆಯಾಯ ಕಲಶಗಳಲ್ಲಿ ಕ್ರಮತಪ್ಪದೆ ಶ್ರೀ ರೇಣುಕಾದ್ಯಾಚಾರ್ಯರನ್ನು ಆವಾಹಿಸಿ ಭಕ್ತಿನಮ್ರತೆಗಳಿಂದ ಪೂಜೆಗೈದು ಸಂಸ್ಕಾರಗಳು ತೀರಿದಮೇಲೆ ಆ ಋತ್ವಿಜರು ಮಂತ್ರಪುರಸ್ಸರವಾಗಿ ಆ ಕಲಶಂಗಳಲ್ಲಿರುವ ಉದಕದಿಂದ ಯಜಮಾನನಿಗೆ ಪ್ರೋಕ್ಷಿಸಲು ಅಲ್ಲಿಗೆ ಆ ಕರ್ಮವು ಸಾಂಗವಾಗಿ ನೆರವೇರಿತೆಂಬ ಶಾಸ್ತ್ರೀಯ ಭಾವನೆಯು ಜಗತ್ತಿನಲ್ಲಿರುವ ಎಲ್ಲ ವೀರಶೈವ ಸ್ತ್ರೀ ಪುರುಷರಲ್ಲಿಯೂ ಅನಾದಿಕಾಲದಿಂದ ರೂಢಿಯಲ್ಲಿ ಬಂದಿರುತ್ತದೆ. ಇತ್ತೀಚೆಗೆ ಸ್ವಪ್ರತಿಷ್ಠಾಕಾಮಿ.

ಗಳಾದ ಕೆಲ ಹಠವಾದಿಗಳು ಈ ವೀರಶೈವಸಮಾಜದಲ್ಲಿ ತಲೆಯೆತ್ತಿ ಪಂಚ ಕಲಶಗಳಿಗೆ ಪ್ರತಿಯಾಗಿ ಷಟ್ (ಆರು) ಕಲಶಗಳನ್ನು ಸ್ಥಾಪಿಸಬೇಕೆಂದು ವಾದಿಸಹತ್ತಿ ಕೆಲವೆಡೆಯಲ್ಲಿ ತಮ್ಮ ತಮ್ಮ ಬಲಾತ್ಕಾರದಿಂದ ಪಂಚಕಲಶಗಳ ಜೊತೆಗೆ ಮತ್ತೊಂದು ಕಲಶವನ್ನಿಡಿಸಿ ನಾವು ಷಟ್‌ಕಲಶಗಳನ್ನಿಡಿಸಿದೆ ವೆಂದು ಹೊಗಳಿಕೊಳ್ಳಲೆತ್ನಿಸಿದ್ದಾರೆ.

ವೀರಶೈವಸಿದ್ಧಾಂತಗ್ರಂಥಗಳಲ್ಲಿ "ಈ ಷಟ್‌ಕಲಶಸ್ಥಾಪನ" ಎಂಬ ಹೆಸರೂಕೂಡ ಕಂಡುಬರುವದಿಲ್ಲವಾದಪ್ರಯುಕ್ತ ಸ್ವಕಪೋಲಕಲ್ಪಿತವೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ವೀರಶೈವಮತದ ಮೂಲಗುರುಗಳೆನಿಸಿದ ಶ್ರೀರೇಣುಕಾಚಾರ್ಯರು ಅಗಸ್ತ್ಯಮುನಿಗೆ ಬೋಧಿಸಿದ ಗ್ರಂಥದಲ್ಲಿ "ಪಂಚ ಬ್ರಹ್ಮಮಯೈಸ್ತತ್ರ ಸ್ಥಾಪಿತೈಃ ಕಲಶೋದಕೈಃ । ಆಚಾರ್ಯಸ್ಸಮನ್ತ್ರೈಶ್ಚ ಗೃಹ್ಣೀಶಿಷ್ಯಮಭಿಷಿಂಚಯೇತ್ ॥" ಎಂದು ಪಂಚಕಲಶಸ್ಥಾಪನೆಯು ಹೇಳ ಲ್ಪಟ್ಟಿರುತ್ತದೆ. ಶಿವಾಗಮಗಳಲ್ಲಂತೂ ಪಂಚಕಲಶಸ್ಥಾಪನೆಯೇ ಕಂಡುಬರು ತ್ತದೆ. ನಿಜಗುಣಶಿವಯೋಗಿಯು ಲೋಕೋಪಕಾರಕ್ಕಾಗಿ ರಚಿಸಿದ ವಿವೇಕ ಚಿಂತಾಮಣಿಯೆಂಬ ಕನ್ನಡಗ್ರಂಥದಲ್ಲೂ ಸಹ ವೀರಶೈವದೀಕ್ಷಾಕ್ರಮವನ್ನು ಬೋಧಿಸುವ ಸಮಯದಲ್ಲಿ—

"ಸುವರ್ಣಪುಷ್ಪಾದಿಗಳಿಂ ವಿತ್ತಾನುಸಾರವಾಗಿ ಗುರುಪೂಜೆ ಯಂಗೈದು ಮರಳಿ ಗಂಧಪುಷ್ಪಾದಿಗಳಿಂ ಋತ್ವಿಕ್ಕುಗಳಂ ಪೂಜಿಸಿ ತೀರ್ಥಾಂಬುಪೂರ್ಣವಾದ ಸುವರ್ಣಾದಿ ನವೀನ ಪಂಚಕಲಶಗಳಂ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಮಧ್ಯ ಕ್ರಮದಿಂದಾಚಾರ್ಯರಂ ಸ್ಥಾಪಿಸುತ್ತ

ಎಂದು ಶಿವಾಗಮದ ಪಂಗ್ತಿಯನ್ನು ಬೋಧಿಸಿರತ್ತಾರೆ. ಹೀಗಿದ್ದರೂ ಸಿದ್ಧಾಂತೋಕ್ತಿಯಲ್ಲಿಯೂ ಶಿವಾಗಮೋಕ್ತಿಯಲ್ಲಿಯೂ, ಭೀತಿಯಿಲ್ಲದೆ ಶಾಸ್ತ್ರಚಕ್ಷುಸ್ಸನ್ನು ಮುಚ್ಚಿಕೊಂಡು ವಿಧಿಮಾರ್ಗವನ್ನು ಮೀರಿ ನರಕವೆಂಬ ಹಳ್ಳದಲ್ಲಿ ಬಿದ್ದು ಯಮದಂಡನೆಯೆಂಬ ತೀಕ್ಷ್ಣಮುಳ್ಳುಗಳಿಂದ ದೇಹವೆಲ್ಲ ಛಿದ್ರವಾಗಿಸಿ ನಾಸ್ತಿಕರೆನಿಸಿಕೊಂಡು ಹೀನಜೀವಿಗಳಾಗುವುದುಚಿತವಾಗಿ ತೋರಲಿಲ್ಲ. ಯಾವ ಮನುಷ್ಯನು ಯಾವ ಮತದಲ್ಲಿ ಜನ್ಮವನ್ನು ಧರಿಸಿರು ತ್ತಾನೆಯೋ ಅವನು ಆ ಮತಾಚಾರ್ಯರ ನಿಯಮವನ್ನು ಪಾಲಿಸಿ ದೃಢ

ಶೋಧನವನ್ನೂ, ಆತ್ಮಶೋಧನವನ್ನೂ ಪಡೆಯಬೇಕು. ಇಲ್ಲವಾದರೆ ಆ ಮತದ ಹೆಸರನ್ನು ಮಾತ್ರ ಬಾಯಲ್ಲಿ ಹೇಳುತ್ತ ಕೃತಿಯಲ್ಲಿ ಆ ಮತಾಚಾರ್ಯನ ವಿಧಿಗೆ ವಿರೋಧವಾಗಿ ವರ್ತಿಸುತ್ತಿದ್ದರೆ ಅಂಥವನು ಸತ್ಪುರುಷ ವರ್ಗದಲ್ಲಿ ಸೇರಲಾರನು.

ಒಂದುವೇಳೆ " ತುಷ್ಯತು ದುರ್ಜನಃ " ಎಂಬ ನ್ಯಾಯದಂತೆ ಷಟ್ ಕಲಶಗಳನ್ನು ಪುರಸ್ಕರಿಸೋಣವೆಂದರೆ, ಈ ಐದು ಕಲಶಗಳನ್ನು ಸ್ಥಾಪನ ಮಾಡಬೇಕಾದರೆ ವೀರಶೈವಸಿದ್ಧಾಂತದಲ್ಲಿ ಪ್ರತ್ಯೇಕವಾಗಿ ಒಂದೊಂದು ಮಂತ್ರವನ್ನು ವಿನಿಯೋಗಮಾಡಿರುವುದಲ್ಲದೆ ದೇಹನ್ಯಾಸ ಕರನ್ಯಾಸಾದಿ ಗಳನ್ನು ಮಾಡುವ ಕಾಲದಲ್ಲಿ ಆಯಾಯ ಮಂತ್ರಾಧಿದೇವತಾ ಪ್ರತ್ಯಧಿದೇವತಾದಿಗಳನ್ನು ಹೇಳಿ ಆಯಾಯ ಮಂತ್ರವಾಕ್ಯಗಳನ್ನು ವಿನಿಯೋಗಿಸಿದ್ದಾರೆ. ಅದರಂತೆ ಹೊಸದಾಗಿ ಇನ್ನೊಂದು ಕಲಶವನ್ನು ಸ್ಥಾಪಿಸಬೇಕಾದರೆ ಯಾವ ಮಂತ್ರದಿಂದ ಸ್ಥಾಪಿಸಬೇಕೋ? ದೇಹನ್ಯಾಸ ಕರನ್ಯಾಸಾದಿಗಳಲ್ಲಿ ಯಾವ ವಾಕ್ಯಗಳನ್ನುಚ್ಚರಿಸಬೇಕೋ? ಮತ್ತು ನಾಲ್ಕು ದಿಕ್ಕುಗಳಲ್ಲಿಯೂ ಮಧ್ಯ ಭಾಗದಲ್ಲಿಯೂ ಈ ಪಂಚಕಲಶಗಳು ಸ್ಥಾಪಿಸಲ್ಪಟ್ಟ ಮೇಲೆ ಈ ಷಷ್ಠಕಲಶ ವನ್ನು ಇನ್ಯಾವದಿಕ್ಕಿನಲ್ಲಿ ಇಡಬೇಕೋ? ಮತ್ತು ಈ ಪಂಚಕಲಶಗಳಲ್ಲಿ ಒಬ್ಬೊಬ್ಬ ಆಚಾರ್ಯರನ್ನು ಆವಾಹಿಸುವಂತೆ ಈ ಕಲಶದಲ್ಲಿ ಯಾರನ್ನು ಆವಾಹಿಸಬೇಕೋ? ಯಜಮಾನನು ಯಾರ ಗೋತ್ರಸೂತ್ರಶಾಖಾಪ್ರವರಾ ದಿಗಳನ್ನು ಹೇಳಿಕೊಳ್ಳಬೇಕೋ ತಿಳಿಯದಾಗಿದೆ. ಆದ್ದರಿಂದ ಸ್ವಪಕ್ಷವನ್ನು ಸಾಧಿಸುವುದಕ್ಕಾಗಿ ವಿಧಿಗೆ ಲೋಪವನ್ನಾಚರಿಸುವುದು ಯಾರಿಗೂ ಸರ್ವಥಾ ಉಚಿತವಲ್ಲ. ಮಹರ್ಷಿಗಳು ಇಂಥ ಮಂತ್ರದಿಂದಲೇ ಇಂಥ ಕ್ರಮವನ್ನು ನೆರವೇರಿಸಬೇಕೆಂದು ಗೊತ್ತುಪಡಿಸಿ ಅನೇಕ ಗ್ರಂಥಗಳನ್ನು ಬರೆದಿಟ್ಟಿರು ವುದರಿಂದ ಪ್ರತಿಯೊಬ್ಬ ವೈದಿಕಪಂಥಾನುಯಾಯಿಗಳೂ ಕರ್ಮಗಳನ್ನು ಲೋಪವಿಲ್ಲದಂತೆಯೂ ಹೆಚ್ಚಿಸದಂತೆಯೂ ನಡೆಯಿಸಿಕೊಂಡುಬರಬೇಕಲ್ಲದೆ ತನ್ನ ಮನಸ್ಸಿಗೆ ಬಂದ ಹಾಗೆ ನಡೆಯುವುದು ಮಹಾಪಾಪಹೇತುವಾಗುತ್ತದೆ. ಮತ್ತು ದ್ವಿತೀಯಪಕ್ಷದವರು ಈ ಪಂಚಕಲಶಗಳ ಜೊತೆಯಲ್ಲಿ ಆರನೆಯ ದಾದ ಇನ್ನೊಂದು ಕಲಶವನ್ನಿಡಲು ಹತ್ತಿದರೆ ಇನ್ನು ಮುಂದೆ ತೃತೀಯಪಕ್ಷ ದವರು ಏಳನೆಯದಾದ ತಮ್ಮದೊಂದು ಕಲಶವನ್ನೇರ್ಪಡಿಸುತ್ತಾರೆ. ಚತುರ್ಥಪಕ್ಷದವರು ಎಂಟನೆಯದಾದ ಮತ್ತೊಂದು ಕಲಶವನ್ನೇರ್ಪಡಿಸು

ತ್ತಾರೆ. ಹೀಗೆ ಅನವಸ್ಥಾದೋಷವು ಪ್ರಾಪ್ತವಾಗಿ ಸಮಾಜದಲ್ಲಿ ಸ್ವೇಚ್ಛಾಚಾರಗಳು ಬೇರೂರಿ ವೀರಶೈವರು ವಿಧಿಬದ್ಧರಲ್ಲ ಎಂಬ ಅಪಯಶಸ್ಸಿಗೂ ಅಧರ್ಮಾಚರಣೆಯಿಂದುಂಟಾದ ಮಹಾನರ್ಥಕ್ಕೂ ಭಾಗಿಗಳಾಗಬೇಕಾಗುತ್ತದೆ. ಶ್ರೀಪಂಚಾಚಾರ್ಯ ಸ್ಮಾರಕಗಳಾದ ಪಂಚಕಲಶಗಳ ಸಾನ್ನಿಧ್ಯದಲ್ಲಿಯೇ ವೀರಶೈವರ ಪ್ರತಿಯೊಂದು ನಿತ್ಯನೈಮಿತ್ತಿಕಾದಿ ಕರ್ಮಗಳು ನಡೆಯುತ್ತಿರಬೇಕೆಂದು ಪರಶಿವನು ಬೋಧಿಸಿದ ಮಹಾವಾಕ್ಯವನ್ನು ಮೀರಿ ಮನಸ್ಸಿಗೆ ಬಂದಂತೆ ಆಚರಿಸುತ್ತ ಬಂದರೆ "ರಾಜಾಜ್ಞಾಭಂಗಕೃನ್ನೄಣಾಂ ಮಹಾದಂಡೋವಿಧೀಯತೆ । ಶಿವಾಜ್ಞಾಭಂಗಕೃನ್ನೄಣಾಂ ದಂಡೋಹಿ ನರಕಸ್ತಥಾ" ಲೋಕದಲ್ಲಿ ರಾಜನು ವಿಧಿಸಿರುವ ನಿಯಮವನ್ನು ಅತಿಕ್ರಮಿಸಿ ನಡೆಯುವವರಿಗೆ ಹೇಗೆ ಶಿಕ್ಷೆಯು ವಿಧಿಸಲ್ಪಡುತ್ತದೆಯೋ ಹಾಗೆ ಶಿವನು ವಿಧಿಸಿರುವ ವಿಧಿಯನ್ನು ಮೀರಿ ನಡೆಯುವವನು ನರಕವೆಂಬ ಶಿಕ್ಷೆಯನ್ನು ಹೊಂದುವನು.

ವೀರಶೈವಮತೀಯರಿಗೆ ದೀಕ್ಷಾ, ಶಿಕ್ಷಾ, ಮೋಕ್ಷಂಗಳನ್ನೀಯುವ ವೀರಮಾಹೇಶ್ವರರು ತಮ್ಮ ಕರ್ತವ್ಯಕರ್ಮಗಳನ್ನು ಮರೆತು ಕೇವಲ ಲೌಕಿಕರಂತೆ ವ್ಯವಹಾರನಿರತರಾಗುತ್ತ ಬಂದು ತಮ್ಮ ಪವಿತ್ರವಾದ ಅಧಿಕಾರವನ್ನು ತಾವಾಗಿಯೇ ಕಳೆದುಕೊಳ್ಳುತ್ತಿರುವುದನ್ನು ನೋಡಿ ಬಹಳ ವ್ಯಸನವುಂಟಾಗುತ್ತದೆ. ವೀರಶೈವ ಮತದ ಮೇಲೆ ಗುರುತ್ವವನ್ನು ವಹಿಸಿರುವ ಮಾಹೇಶ್ವರರೆಂಬುವರು ವೈದಿಕವಿದ್ಯಾನಿಷ್ಣಾತರಾಗಿರಬೇಕು. ವೈದಿಕ ವಿದ್ಯೆಯೇ ಇವರ ಆಯುಧವು ಇದು ಎಷ್ಟು ತೀಕ್ಷ್ಣವಾಗುತ್ತದೆಯೋ ಅಷ್ಟಷ್ಟು ತಮ್ಮ ಹೃದಯಾಂಗಣದಲ್ಲಿ ಅಂಕುರಿಸುತ್ತಿರುವ ಕಾಮಕ್ರೋಧಾದಿ ಶತ್ರುಗಳು ದಿಕ್ಕೆಟ್ಟು ಓಡಿಹೋಗುತ್ತವೆ. ಇದರಿಂದ ಶಿಷ್ಯರನ್ನು ಅಧೋಗತಿಗೆಳೆಯುತ್ತಿರುವ ಈ ಅಂತಶ್ಶತ್ರುಗಳು ನಾಶವಾಗಿ ಗುರುಶಿಷ್ಯರೀರ್ವರೂ ಸಮ್ಯಗ್‌ಜ್ಞಾನಿಗಳಾಗುವರು. ಗುರುಕುಲದಲ್ಲಿ ತಾವು ಹುಟ್ಟಿ ಆ ಗುರುವಿನ ಗುಣಗಳೊಂದನ್ನೂ ಅಭ್ಯಾಸಮಾಡದೆ ಮಾಹೇಶ್ವರರೆಂದು ಹೇಳಿಸಿಕೊಳ್ಳುತ್ತ ಬಂದರೆ ಅಂಥ ಮಾಹೇಶ್ವರರಿಂದ ಲೋಕಕ್ಕೆ ಯಾವ ಪ್ರಯೋಜನವೂ ಆಗಲಾರದು. ಮಾಹೇಶ್ವರರ ಕುಲದಲ್ಲಿ ಹುಟ್ಟಿದ ಮೇಲೆ ಅದಕ್ಕೆ ತಕ್ಕ ಗುಣಗಳು ಅವರಲ್ಲಿ ಇಲ್ಲದಿದ್ದರೆ ಆ ಕುಲವೂ ಸಹ ಅವರಿಂದ ಭೂಷಿತವಾಗುವುದಿಲ್ಲ. ಪ್ರಪಂಚದಲ್ಲಿ ಶಿಷ್ಯೋದ್ಧಾರಕ್ಕಾಗಿಯೇ ಈಶ್ವರನಿಂದ ಗುರು

ಕುಲವು ಸೃಷ್ಟಿಸಲ್ಪಟ್ಟಿರುವುದರಿಂದ ತಮ್ಮ ಬೋಧಾಶಕ್ತಿಯಿಂದ ಶಿಷ್ಯರನ್ನು ಸದಾಚಾರಿಗಳನ್ನಾಗಿಯೂ ಜ್ಞಾನಿಗಳನ್ನಾಗಿಯೂ, ನೀತಿಯುತರನ್ನಾಗಿಯೂ ದೈವಭಕ್ತಿಯುಳ್ಳವರನ್ನಾಗಿಯೂ, ಪಾಪಭೀರುಗಳನ್ನಾಗಿಯೂ ಮಾಡಿದ್ದಾದರೆ ತಮಗೆ ದೈವಾದತ್ತವಾದ ಮಾಹೇಶ್ವರ ಎಂಬ ಹೆಸರು ಸಾರ್ಥಕವಾಗುವುದು. ಅದಲ್ಲದೆ ತಾವೇ ಹಸಿಮಣ್ಣಿನ ಮುದ್ದೆಯಂತೆ ಕೇವಲ ಜಡಾತ್ಮಕರಾಗುತ್ತ ಕುಲಪಾವಿತ್ರ್ಯಚ್ಛಾಯೆಯಲ್ಲಿ ಮಾತ್ರ ಬದುಕುತ್ತ ಬಂದರೆ, ಆ ಗುರುಕುಲವು ಸಹ ಕ್ರಮೇಣ ನಷ್ಟೋನ್ಮುಖವಾಗುತ್ತ ಹೋಗುವುದರಲ್ಲಿ ಸಂದೇಹವಿಲ್ಲ. ಲೋಕದಲ್ಲಿ ಒಬ್ಬನು ಸತ್ಕುಲಪ್ರಸೂತನಾಗದಿದ್ದರೂ ಲೋಕಕಲ್ಯಾಣಕಾರಿಯಾದ ಗುಣಗಳಿದ್ದರೆ "ಗುಣಾಃ ಪೂಜಾಸ್ಥಾನಂ" ಎಂಬ ಸಾಮಾನ್ಯವಾಕ್ಯದಂತೆ ಅವನು ಪೂಜನೀಯನಾಗುತ್ತಾನೆಂದು ಹೇಳುವಾಗ ಸತ್ಕುಲ ಪ್ರಸೂತನೂ ಆಗಿ ಲೋಕಕಲ್ಯಾಣಕಾರಿಯಾದ ಗುಣಗಳೂ ಸಹ ಅವನಲ್ಲಿದ್ದರೆ ಕೇಳುವುದೇನು? ಮಾಹೇಶ್ವರರು ಆತ್ಮಶುದ್ಧಿಗೆ ಸಾಧಕವಾದ ವಿದ್ಯಾಜ್ಞಾನ ಸದಾಚಾರಾದಿಗುಣಗಳನ್ನು ಅವಶ್ಯವಾಗಿ ಸಂಗ್ರಹಿಸಲೇಬೇಕು. ಶಿಷ್ಯರಿಗೆ ಜ್ಞಾನಕ್ರಿಯೆಗಳನ್ನು ಬೋಧಿಸಬೇಕಾದರೆ ತಮ್ಮಲ್ಲಿ ಅಪಾರವಾದ ವಿದ್ಯಾನಿಧಿಯು ಇರಲೇಬೇಕು.

ನಪುನರ್ನಾಮಮಾತ್ರೇಣ ಸಂವಿತ್ತಿರಹಿತಸ್ತುತಯ ॥ ।
ಅಸ್ಯನ್ನತಾರಯೇದಜ್ಞಃ ಕಿಂಶಿಲಾತಾರಯೇಚ್ಛಿಲಾಂ ॥

ಮುಳುಗುವ ಸ್ವಭಾವವುಳ್ಳ ಒಂದು ಕಲ್ಲಿಗೆ ಮತ್ತೊಂದು ಕಲ್ಲನ್ನು ಗಂಟು ಹಾಕಿದರೆ ಅದು ಆ ಕಲ್ಲನ್ನು ಹೇಗೆ ತೇಲಿಸಲಾರದೋ, ಹಾಗೆ ಜ್ಞಾನಶೂನ್ಯನಾದ ಗುರುವು ಶಿಷ್ಯರನ್ನು ಈ ಭವಸಾಗರದಿಂದ ದಾಂಟಿಸಲಾರನು ಎಂಬ ಪ್ರಮಾಣದಿಂದ ಗುರುತ್ವಕ್ಕೆ ಜ್ಞಾನವೇ ಮುಖ್ಯಗುಣವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಗುರುಕುಲದಲ್ಲಿ ಹುಟ್ಟಿದ ಪ್ರತಿಯೊಬ್ಬ ಬಾಲಕನೂ ಇಂಥ ಜ್ಞಾನಸಾಧಕವಾದ ವೈದಿಕವಿದ್ಯೆಯನ್ನು ಅಭ್ಯಾಸಮಾಡುತ್ತ ತನ್ನ ನಡೆನುಡಿಗಳನ್ನು ತಿದ್ದಿಕೊಳ್ಳುತ್ತ ಕಾಲವರಿತು ದೀಕ್ಷಾಪೂರ್ವಕ ಗುರೂಪದೇಶವನ್ನು ಪಡೆದು ಭಗವಂತನ ಗುಣಾವಳಿಯನ್ನು ವಿಸ್ತರಿಸುತ್ತ ಅಷ್ಟಾವರಣ ಪಂಚಾಚಾರ ಸ್ವರೂಪವನ್ನು ಅನುಷ್ಠಿಸುತ್ತ ಭಕ್ತಿ ಜ್ಞಾನ ವೈರಾಗ್ಯಗಳೆಂಬ ಸೋಪಾನಗಳ ಮೇಲೆ ಮೆಲ್ಲ ಮೆಲ್ಲನೆ ಕಾಲಿಡುತ್ತ ಬಂದರೆ ಆತನಿಗೆ ತನ್ನ

ಪ್ರೌಢ ವಯಸ್ಸಿಗೆ ವೀರಶೈವಮತದ ನಿಜತ್ವವು ಕರತಲಾಮಲಕದಂತೆ ಸ್ಪಷ್ಟ ವಾಗುತ್ತದೆ. ಮುಂದೆ ತನ್ನ ಕರ್ತವ್ಯಕರ್ಮಗಳನ್ನು ಜ್ಞಾಪಿಸಿಕೊಂಡು ಸ್ವಾರ್ಥತ್ಯಾಗಿಯಾಗಿ ಅಹಿಂಸಾ ಮಾರ್ಗದಲ್ಲಿ ಕಾಲಿಡುತ್ತ ಹೂವಿನ ಸರವನ್ನು ಮೇಲಕ್ಕೆತ್ತಿದಂತೆ ಬಹು ಸುಲಭವಾಗಿ ಶಿಷ್ಯೋದ್ಧಾರ ಕರ್ಮದಲ್ಲಿ ತೊಡಗು ತ್ತಾನೆ. ಮಾಹೇಶ್ವರರು ತಮ್ಮ ಮಕ್ಕಳಿಗೆ ಹೀಗೆ ವೈದಿಕ ವಿದ್ಯಾಶಿಕ್ಷಣವನ್ನು ಕೊಡದೆ ನಮಗೇನು ಕಡಿಮೆ? ಸಹಸ್ರಾರು ಜನ ಶಿಷ್ಯಮಂಡಲಿಯು ಅನಾದಿ ಕಾಲದಿಂದಲೂ ನಮಗುಂಟು. ಇದರಿಂದಲೇ ನಮ್ಮ ಮಕ್ಕಳು ಜೀಸುತ್ತಾ ರೆಂದು ಭ್ರಮಿಸಿ ಸುಖನಿದ್ರೆಯಲ್ಲಿದ್ದರೆ ಶಿಷ್ಯರುಉದ್ಧಾರವಾಗುವ ಬಗೆಯೆಂತು? ಶಿಷ್ಯರು ಯಾವಾಗಲೂ ಪ್ರಾಪಂಚಿಕ ವ್ಯವಹಾರದಲ್ಲಿ ಮಗ್ನರಾಗಿರುವುದರಿಂದ ವಿಶೇಷವಾಗಿ ಆತ್ಮೋದ್ಧಾರಸಾಧಕವಾದ ವಿದ್ಯೆಯನ್ನು ಅಭ್ಯಾಸಮಾಡು ಲಾರರು. ಕೇವಲ ಆಧ್ಯಾತ್ಮಿಕವಿದ್ಯೆಯಿಂದಲೇ ತಮ್ಮ ದೇಹಯಾತ್ರೆಯನ್ನು ನಡೆಯಿಸುತ್ತ ಮಹಾಕರ್ಮಠರಾಗಿರುವ ಈ ಮಾಹೇಶ್ವರರು ಆಯಾಯ ಕಾಲಕ್ಕೆ ತಮ್ಮ ಶಿಷ್ಯರ ಮನೆಗೆ ಹೋಗಿ ಶಿವಧ್ಯಾನ ಶಿವಭಕ್ತಿ ಶಿವಯೋಗ ಸ್ವರೂಪವನ್ನು ಬೋಧಿಸುತ್ತ ಶಿಷ್ಯರನ್ನು ಎಚ್ಚರಿಸುತ್ತ ಸನ್ಮಾರ್ಗಿಗಳನ್ನಾಗಿ ಮಾಡುತ್ತಿರಬೇಕು. ಅದಕ್ಕೋಸ್ಕರವಾಗಿಯೇ ಪ್ರತಿಯೊಂದು ಗ್ರಾಮ ದಲ್ಲಿಯೂ, ವೀರಶೈವ ಮತಸ್ಥಾಪಕರಾದ ಶ್ರೀರೇಣುಕಾದ್ಯಾಚಾರ್ಯರು ಒಂದೊಂದು ಮಠವನ್ನು ಅನುಗ್ರಹಿಸಿರುತ್ತಾರೆ. ಪೂರ್ವಕಾಲದಲ್ಲಿ ಮಠ ಗಳೆಂದರೆ ವಿದ್ಯಾಭ್ಯಾಸದ ಪವಿತ್ರ ಆಶ್ರಮಗಳೆನಿಸಿಕೊಂಡಿದ್ದವು. ಮಠಾಧಿ ಪತಿಗಳೆಲ್ಲರೂ ವೈದಿಕವಿದ್ಯಾಪಾರಂಗತರಾಗಿದ್ದುದರಿಂದಲೂ, ತಮ್ಮ ಮಕ್ಕಳು ಮೊಮ್ಮಕ್ಕಳನ್ನು ಸಹ ತಮ್ಮಂತೆ ವಿದ್ವಾಂಸರನ್ನಾಗಿ ಮಾಡುತ್ತ ಬಂದದ್ದ ರಿಂದಲೂ ಭವಸಾಗರಕ್ಕೆ ನಾವೆಯಂತಿರುವ ವೈದಿಕವಿದ್ಯೆಯ ಪ್ರವಾಹವು ವಂಶ ಪಾರಂಪರ್ಯವಾಗಿ ಹರಿದು ಬರುತ್ತಲಿತ್ತು. ಈ ವಿದ್ಯಾ ಪ್ರವಾಹದಲ್ಲಿ ವೀರಶೈವ ಸಮಾಜವೆಲ್ಲಾ ಬ್ರಹ್ಮಾನಂದವೆಂಬ ಅಮೃತವನ್ನು ಪಾನಮಾಡಿ ಶಿವಧರ್ಮದ ಫಲವನ್ನು ಅನುಭವಿಸುತ್ತಿದ್ದಿತು. ಇತ್ತೀಚೆಗೆ ಕಾಲವೈಚಿತ್ರ್ಯದಿಂದ ಕೆಲವೆಡೆ ಯಲ್ಲಿ ಮಠಾಧಿಪತಿಗಳೆಂಬುವರು ಕೇವಲ ಬಹಿರ್ಮುಖರಾಗುತ್ತ ಬಂದರು. ಮೂಲಪೀಠಾಚಾರ್ಯರೂ ಸಹ ಇದಕ್ಕೆ ಗಮನಕೊಡಲಿಲ್ಲ. ಇದರಿಂದ ರಂಧ್ರಾನ್ವೇಷಿಗಳಾದ ನಾಸ್ತಿಕರಿಗೆ ಮನಸ್ವಿಯಾಗಿ ಮಾತನಾಡಿಕೊಳ್ಳಲು ಅವಕಾಶವಾಯಿತು. ಒಬ್ಬನು ಅದೇನು? ನಾವು ಮಾಹೇಶ್ವರರಾಗ

ಲಾರೆವೋ ಎಂದು ಅನ್ನಹತ್ತಿದನು. ಇನ್ನೊಬ್ಬನು ನಾವೇಕೆ ಗುರುತ್ವಾಧಿಕಾರ ಮಾಡಬಾರದೆಂದು ಹೇಳಹತ್ತಿದನು. ಕೆಲವರು ತಮಗೆ ಬೇಕಾದ ಶ್ಲೋಕಗಳನ್ನು ಕಲ್ಪಿಸಿ ಸ್ವಪಕ್ಷವನ್ನು ಸಾಧಿಸಹತ್ತಿದರು. ಅಶಾಸ್ತ್ರೀಯವಾದ ವಿಧವಾವಿವಾಹ ಪ್ರೌಢವಿವಾಹಾದಿಗಳೆಂಬ ಪಿಶಾಚಿಗಳು ಸಮಾಜದಲ್ಲಿ ನಾಟ್ಯ ಮಾಡಲೆತ್ನಿಸಿದವು. ಧರ್ಮಶಾಸ್ತ್ರವನ್ನು ಬದಲಾಯಿಸುವ ಮಹಾವೀರರು ಅವತರಿಸಿದರು. ಹೀಗೆ ಬೇಲಿಯಿಲ್ಲದ ಹೊಲಕ್ಕೆ ಪಶುಗಳು ನಿರರ್ಗಳವಾಗಿ ನುಗ್ಗಿ ಲೂಟಿಮಾಡುವಂತೆ ಧರ್ಮಶಾಸನಮಾಡುವ ಮಾಹೇಶ್ವರರು ತಮ್ಮ ಕರ್ತವ್ಯಪರಾಙ್ಮುಖರಾದುದರಿಂದ ಸಮಾಜವಲ್ಲಿ ಇಂಥ ಅನೇಕ ಉಪದ್ರವಗಳು ಪ್ರಾರಂಭವಾದವು. ಸಮಾಜದಲ್ಲಿ ಶೈಥಿಲ್ಯವು ತಪ್ಪಿ ಗುರುಶಿಷ್ಯಭಾವವು ದೃಢಗೊಳ್ಳಬೇಕಾದರೆ ಸಮಾಜದ ಮೇಲೆ ಗುರುತ್ವವನ್ನು ಮಾಡುವ ಮಾಹೇಶ್ವರರು ಬಿದ್ದುಹೋದ ವೈದಿಕವಿದ್ಯೆಯೆಂಬ ಚಂದ್ರಾಯುಧವನ್ನು ಧರಿಸಬೇಕು. ಜ್ಞಾನಕ್ರಿಯಾನಿಷ್ಠರಾಗಿ ಶಿಷ್ಯವೃಂದದ ಅಜ್ಞಾನವನ್ನು ಹೋಗಲಾಡಿಸಬೇಕು.

ಈಗೀಗ ಮಾಹೇಶ್ವರರು ತಮ್ಮ ಕುಲವೃತ್ತಿಯೆನಿಸಿದ ವೈದಿಕವಿದ್ಯೆಯಲ್ಲಿ ಆಸಕ್ತರಾಗುತ್ತಿರುವುದೊಂದು ಶುಭ ಸೂಚನೆಯೇ ಸರಿ. ಸದ್ಭಕ್ತಶಿಖಾಮಣಿಗಳಾದ ಕೈ|| ಶ್ರೀಮಂತ ವಾರದಮಲ್ಲಪ್ಪನವರು, ಕೈ|| ಶ್ರೀಮಂತ ದಾನವೀರ ಶಂಕರಣ್ಣನವರು ಮುಂತಾದ ವೀರಶೈವಪ್ರಮುಖರು ಮಾಹೇಶ್ವರಾಭಿವೃದ್ಧಿಗೆ ಮನಗೊಟ್ಟು ವೈದಿಕಪಾಠಶಾಲೆಗಳನ್ನು ಸ್ಥಾಪಿಸಿ ಭೂಲೋಕದಲ್ಲಿ ಯಶಃಕಾಯವನ್ನಿರಿಸಿ, ಶಿವಲೋಕವನ್ನು ಹೊಂದಿದರು. ಅಂದಿನಿಂದಲೂ ಗುರುವರ್ಗದ ವಟುಗಳು ವಿದ್ವಾಂಸರಾಗುತ್ತ ಕಾಶೀ ಕಲ್ಕತ್ತಾ ಮುಂತಾದ ಸ್ಥಾನಗಳಿಗೆ ಹೋಗಿ ಪ್ರತಿವರ್ಷವೂ ಬಿರುದಾಂಕಿತರಾಗಿ ಬರುತ್ತಿರುವುದೊಂದು ವೀರಶೈವ ಮತದ ಸುದೈವವೆಂದೇ ಹೇಳಬೇಕಾಗಿದೆ. ಆದರೆ ಈಗ ತಯಾರಾಗಿರುವ ಅಲ್ಪಸಂಖ್ಯೆಯಿಂದ ಬಹು ವಿಸ್ತಾರವಾದ ಸಮಾಜಕ್ಕೆ ಅಷ್ಟು ಪ್ರಯೋಜನವಾಗಲಾರದು. ಇನ್ನೂ ಸಹಸ್ರಾವಧಿ ಮಾಹೇಶ್ವರ ವಟುಗಳು ತಯಾರಾಗಿ ಧರ್ಮಶಾಸ್ತ್ರವನ್ನು ಚೆನ್ನಾಗಿ ತಿಳಿದು ತಮ್ಮ ತಮ್ಮ ಶಿಷ್ಯರಿಗೆ ಬೋಧಿಸುತ್ತ ಬಂದರೆ ಶಿಷ್ಯೋದ್ಧಾರವನ್ನು ಮಾಡಿದಂತಾಗುವುದು. ಇದರಿಂದ ಶಿಷ್ಯರು ಕೊಟ್ಟ ಕಾಣಿಕಾದ್ರವ್ಯವೂ ಸಹ

ಸಫಲವಾದಂತಾಗುವುದು. ಅದಿಲ್ಲದೆ ಸುಮ್ಮನೆ ನಮ್ಮ ಶಿಷ್ಯರ ಮೇಲೆ ನಮಗಧಿಕಾರವುಂಟೆಂದು ಹೆಮ್ಮೆ ಪಡುತ್ತ ಬಂದರೆ ಅದರಿಂದ ಶಿಷ್ಯರೂ ಉದ್ಧಾರವಾಗುವುದಿಲ್ಲ ತಾವೂ ಉದ್ಧಾರವಾಗುವುದಿಲ್ಲ. ನಾಸ್ತಿಕರ ಹಾವಳಿಯಂತೂ ಮೇರೆದಪ್ಪುವುದು. ಆದಕಾರಣ ಮಾಹೇಶ್ವರರೆಲ್ಲರೂ ವಿದ್ವಾಂಸರೂ ತಪೋನಿಷ್ಠರೂ, ಜ್ಞಾನಿಗಳೂ ಆಗುವದು ಶ್ರೇಯಸ್ಕರವು.

## ವೀರಶೈವ ಸಿದ್ಧಾಂತಘೋಷಣೆ

ಧರ್ಮಶಾಸ್ತ್ರದಲ್ಲಿ ಯೋಗ-ಪಾಂಚರಾತ್ರ-ವೇದ-ಪಾಶುಪತ ಎಂಬ ನಾಲ್ಕು ಮತಗಳು ಪ್ರಮಾಣಭೂತಗಳಾದುವೆಂದೂ ಆದುದರಿಂದ ಅವುಗಳು ಯುಕ್ತಿಗಳಿಂದ ಖಂಡಿಸಲ್ಪಡತಕ್ಕವುಗಳಲ್ಲವೆಂದೂ ಹೇಳಲ್ಪಟ್ಟಿರುವುದು. ಈ ನಾಲ್ಕುಮತಗಳಲ್ಲಿ ಪಾಶುಪತ ಮತವನ್ನೇ ಶೈವ ಮತವೆಂದು ಹೇಳುವದುಂಟು. ಪಶು-ಪಾಶ-ಪತಿ ಈ ಮೂರು ಪದಾರ್ಥಗಳ ವಿವೇಕವೇ ಪಾಶುಪತಮತವೆನಿಸುವುದು. ಪಶು ಅಂದರೆ ಜೀವನು, ಪತಿಯೆಂದರೆ ಈಶ್ವರನು, ಪಾಶವೆಂದರೆ ಸಂಸಾರವು. ಲೋಕದಲ್ಲಿ ಬಂಧನದಲ್ಲಿದ್ದ ಪಶುಗಳನ್ನು ಬಿಟ್ಟು ಬಿಡುವಂತೆ ಪತಿಶಬ್ದವಾಚ್ಯನಾದ ಈಶ್ವರನು ತಮ್ಮ ತಮ್ಮ ಪುಣ್ಯಪಾಪ ರೂಪಕರ್ಮಾನುಗುಣವಾಗಿ ನಾನಾವಿಧ ಯೋನಿಜನನಗಳೆಂಬ ಭವಪಾಶದಿಂದ ಕಟ್ಟಲ್ಪಟ್ಟ ಜೀವರನ್ನು ಬಿಡುಗಡೆ ಮಾಡುವನೆಂಬುದೇ "ಪಾಶುಪತ" ಶಬ್ದದ ಸಂಕ್ಷೇಪಾಭಿಪ್ರಾಯವು. ಈ ಪಾಶುಪತ ಮತದಲ್ಲಿ ವೈದಿಕಪಾಶುಪತವೆಂತಲೂ ಅವೈದಿಕಪಾಶುಪತವೆಂತಲೂ ಎರಡು ಪ್ರಕಾರವುಂಟು. ಲಿಂಗಾಕಾರವಾದ ಮುದ್ರೆಯನ್ನು ಕಾಯಿಸಿ ಶರೀರದಲ್ಲಿ ಧಾರಣಮಾಡುವದೇ ಅವೈದಿಕ ಪಾಶುಪತಮತವು. ಇವರು ತಪ್ತಲಿಂಗಧಾರಿಗಳೆಂದು ಕರೆಯಿಸಿಕೊಳ್ಳುತ್ತಾರೆ. ತಪ್ತಲಿಂಗಧಾರಣವು ವೇದವಿರುದ್ಧವಾದುದರಿಂದ ಇದನ್ನು ವೀರಶೈವರು ಅಂಗೀಕಾರ ಮಾಡುವದಿಲ್ಲವು. ಶ್ರೀ ಶಂಕರಾಚಾರ್ಯರೂ ಕೂಡ "ಅಲಿಂಗಾಂಕನು ಚಕ್ರಾಂಕಂ" ಎಂದು ತಪ್ತಲಿಂಗಾಂಕನವನ್ನು ಖಂಡಿಸಿರುತ್ತಾರೆ. ಅಸ್ತು! ಇನ್ನು ವೈದಿಕಪಾಶುಪತಮತದಲ್ಲಿ ಲಿಂಗಿವೈದಿಕ ಪಾಶುಪತವೆಂತಲೂ, ಅಲಿಂಗಿವೈದಿಕ ಪಾಶುಪತವೆಂತಲೂ ಎರಡು ಪ್ರಕಾರವಾಗಿರುವದು. ಶ್ರೀಕಂಠಶಿವಾಚಾರ್ಯ, ಅಪ್ಪಯ್ಯದೀಕ್ಷಿತರೇ ಮೊದಲಾದವರು

ಅಲಿಂಗಿವೈದಿಕಪಾಶುಪತ ಮತಾವಲಂಬಿಗಳಾಗಿದ್ದಾರೆ. ಇವರು ಪೃಥಿವ್ಯಾದಿ ಶಿವಾಂತಗಳಾದ ೩೬ ತತ್ವಗಳನ್ನೂ ಹಾಗೂ ಶಿವನಲ್ಲಿ ಶಕ್ತಿವೈಶಿಷ್ಟ್ಯವನ್ನೂ ಒಪ್ಪಿದರೂ ಸಹ ಕೊನೆಯಲ್ಲಿ "ಮುಕ್ತಶ್ಶಿವಸಮೋಭವೇತ್" ಎಂದು ಸಾರೂಪ್ಯರೂಪವಾದ ಮುಕ್ತಿಯನ್ನು ಹೇಳುತ್ತಾರೆ. ಮುಕ್ತಿಸಾಧನಗಳಾದ ಗುರುಲಿಂಗಜಂಗಮಪಾದೋದಕಪ್ರಸಾದ ವಿಭೂತಿ ರುದ್ರಾಕ್ಷ ಮಂತ್ರಗಳೆಂಬ ಎಂಟು ಪದಾರ್ಥಗಳನ್ನೂ ಪಂಚಾಚಾರಗಳನ್ನೂ ಷಟ್‌ಸ್ಥಲಗಳನ್ನೂ ಅಂಗೀಕಾರಮಾಡುವುದಿಲ್ಲ. ಹಾಗೂ ದೇಹದಲ್ಲಿ ಶಿವಲಿಂಗವನ್ನು ಧರಿಸುವುದೂ ಇಲ್ಲ. ಇನ್ನು ಶಿವದೀಕ್ಷಾಪೂರ್ವಕವಾಗಿ ಪಂಚಸೂತ್ರಘಟಿತವಾದ ಶಿವಲಿಂಗವನ್ನು ಮಸ್ತಕಾದಿ ಸ್ಥಾನಗಳಲ್ಲಿ ಎಡೆಬಿಡದೆ ಧರಿಸುತ್ತ ಪೂಜಿಸುತ್ತಿರುವುದೇ ವೈದಿಕ ಪಾಶುಪತಮತವೆನಿಸುವದು. ಈ ಮೂರುವಿಧಗಳಾದ ಪಾಶುಪತ ವ್ರತಿಗಳು ಸ್ವರ್ಗಸಾಧನಗಳಾದ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಒಪ್ಪುವರು. ಲಿಂಗಪಾಶುಪತವ್ರತಿಗಳು ಸ್ವರ್ಗಸಾಧನಗಳಾದ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಒಪ್ಪುವುದಿಲ್ಲವು. ಅದಕ್ಕೆ ಪ್ರತಿಯಾಗಿ ಮೋಕ್ಷಸಾಧನಗಳಾದ ಅಷ್ಟಾವರಣಗಳನ್ನೂ ಪಂಚಾಚಾರಗಳನ್ನೂ ಷಟ್‌ಸ್ಥಲಗಳನ್ನೂ ಅಂಗೀಕಾರ ಮಾಡುವರು. ಆದರೆ ಲಿಂಗಿಪಾಶುಪತವ್ರತಿಗಳೆನಿಸಿದ ವೀರಶೈವರು ಕ್ರಿಯಾ ಜ್ಞಾನಗಳೆರಡಕ್ಕೂ ಸಮಸಮುಚ್ಚಯವನ್ನು ಅಂಗೀಕರಿಸಿರುವರು. ವೀರಶೈವರು ಕರ್ಮಕ್ಕೆ ವಿಶೇಷವಾಗಿ ಪ್ರಾಬಲ್ಯವನ್ನು ಹೇಳುವದಿಲ್ಲ. ಕರ್ಮೋಪಾಸನೆಯನ್ನು ಒಪ್ಪದಿದ್ದರೆ ಜ್ಞಾನಕ್ರಿಯೆಗಳಿಗೆ ಸಮತ್ವವು ಉಂಟಾಗುವುದಿಲ್ಲ. ಆದುದರಿಂದ ಸಮಸಮುಚ್ಚಯಕ್ಕೆ ಭಂಗವು ಸಂಭವಿಸುವುದೆಂದು ಕರ್ಮಗಳನ್ನು ತ್ಯಜಿಸುವುದಿಲ್ಲವು. ಅಂದರೆ ಸ್ವರ್ಗಾದಿಸಾಧನಗಳಾದ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಮಾತ್ರ ಆಚರಿಸುವುದಿಲ್ಲವೇ ಹೊರತು ಮುಕ್ತ್ಯಂಗಗಳಾದ ಕರ್ಮಗಳನ್ನು ಆಚರಿಸಿಯೇ ಆಚರಿಸುತ್ತಾರೆ. ಲೋಕದಲ್ಲಿ ಯಾರಿಗೆ ಯಾವ ಫಲದಲ್ಲಿ ಆಶೆಯಿರುವುದೋ ಆ ಫಲಾನುಗುಣವಾದ ಕ್ರಿಯೆಯನ್ನು ಮಾಡಲೇಬೇಕು. ವೀರಶೈವರು "ಶಿವಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ" ಏಕಏವರುದ್ರೋನ ದ್ವಿತೀಯಾಯ ತಸ್ಥೇ" ಇತ್ಯಾದಿ ಶ್ರುತಿವಾಕ್ಯಗಳಂತೆ ಕೇವಲ ಶಿವೋಪಾಸಕರಾಗಿ ಶಿವಸಾಯುಜ್ಯರೂಪವಾದ ಫಲವನ್ನು ಮಾತ್ರ ಅಪೇಕ್ಷಿಸುವುದರಿಂದ ಅಂತಹ ಶಿವಸಾಯುಜ್ಯಸಾಧಕಗಳಾದ ಕರ್ಮಗಳನ್ನು ಮಾಡುತ್ತಾರಲ್ಲದೆ ಇತರ ಕರ್ಮೋ

ಪಾಸನೆಗಳನ್ನು ಮಾಡುವುದಿಲ್ಲವು. ಕರ್ಮಗಳಲ್ಲಿ ಪಶುಕರ್ಮಗಳೆಂದೂ ಪತಿಕರ್ಮಗಳೆಂದೂ ಎರಡು ಭಾಗಗಳುಂಟು. ಸ್ವರ್ಗಸಾಧನಗಳಾದ ಕರ್ಮಗಳೇ ಪಶುಕರ್ಮಗಳು. ಪೂರ್ವಮೀಮಾಂಸೋಕ್ತಗಳಾದ ಜ್ಯೋತಿಷ್ಟೋಮಾದಿ ಕರ್ಮಗಳೆಲ್ಲವೂ ಪಶುಕರ್ಮಗಳಲ್ಲಿಯೇ ಸೇರುವವು. ಉಪನಿಷತ್ತಿನಲ್ಲಿ ಹೇಳಲ್ಪಡುವ ಕರ್ಮಗಳೆಲ್ಲವೂ ಮುಕ್ತಿಸಾಧಕಕರ್ಮಗಳಾದ್ದರಿಂದ ಇವುಗಳೆಲ್ಲವೂ ಪತಿಕರ್ಮಗಳೆನಿಸುವವು. ಶಿವಾರ್ಚನೆ, ಶಿವನಿರ್ಮಾಲ್ಯ ಸ್ವೀಕಾರ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಾದಿಗಳು ಉಪನಿಷತ್ಪ್ರತಿಪಾದ್ಯಗಳಾದುದರಿಂದಲೂ ಇವುಗಳು ಕೇವಲ ಪತಿಕರ್ಮಗಳೇ ಆಗಿರುವುದರಿಂದಲೂ ಪತಿಕರ್ಮಾಚರಣವುಳ್ಳವರೇ ವೀರಶೈವರೆನಿಸುವರು.

> ಹೃದಬ್ಜಮಧ್ಯೇ ಲಿಂಗಂ ಧೃತ್ವಾ ಜ್ಯೋತಿಷಿ ಸಂವಿಶಂತಿ ।
> ಆತ್ಮಾಶ್ರಮಸ್ಥಾಃ ಪರಿಮುಚ್ಯಂತಿ ಸರ್ವೇ ಲಿಂಗಾಂಗಶೋಭಾ ಮೋಕ್ಷ
> ಮಾರ್ಗೈಕನಿಷ್ಠಾಃ ॥ ಶಿವಪ್ರಸಾದಾತ್ಪರಿಮುಚ್ಯಂತಿ ಸರ್ವೇ ॥

ಶಿವಲಿಂಗಧಾರಣ ಶಿವಪ್ರಸಾದಗ್ರಹಣಾದಿಗಳೇ ಶಿವಸಾಯುಜ್ಯಕ್ಕೆ ಸಾಕ್ಷಾತ್ಸಾಧನಗಳೆಂದು ವೇದಾಂತಸಾರೋಪನಿಷತ್ತಿನಲ್ಲಿ ಈ ಪತಿಕರ್ಮಾಚರಣೆಯು ಸ್ಪಷ್ಟವಾಗಿ ಹೇಳಲ್ಪಟ್ಟಿರುವದು. ಕೇವಲ ಮೋಕ್ಷೈಕಪರರಾದ ಈ ವೀರಶೈವರು ಪತಿಕರ್ಮಗಳೆನಿಸಿದ ಅಷ್ಟಾವರಣಾದಿ ಕ್ರಿಯೆಗಳನ್ನು ಮಾತ್ರ ಅನುಷ್ಠಿಸಬೇಕಲ್ಲದೆ ಪಶುಕರ್ಮಗಳೆನಿಸಿದ ಜ್ಯೋತಿಷ್ಟೋಮಾದಿಗಳನ್ನು ಆಚರಿಸಲಾಗದೆಂದು "ಅಷ್ಟಾವರ್ಣಸಂಪನ್ನಃ ಪಂಚಾಚಾರಪರಾಯಣಃ । ವೈದಿಕಂ ಕರ್ಮ ಕುರ್ವೀತಜ್ಞಾನೈಕಫಲಸಾಧನಂ ॥ ಇತ್ಯಾದ್ಯನೇಕ ಪ್ರಮಾಣಗಳಿಂದ ಭಗವತ್ಪಾದರು ಪತಿಕರ್ಮಾಚರಣೆಯನ್ನು ಧೃಢಗೊಳಿಸಿರುತ್ತಾರೆ.

ಈ ಎರಡೂ ಕರ್ಮಗಳು ವೇದೋಕ್ತಗಳಾಗಿದ್ದರೂ ವೇದಗಳಲ್ಲಿ ಹೇಳಿದ ಸಕಲ ಕರ್ಮಗಳನ್ನು ಯಾವ ಮತಸ್ಥನೂ ಯಾವಾಗಲೂ ಅನುಷ್ಠಿಸುವದಿಲ್ಲವು. ವೇದವೆಂದರೆ ಒಂದು ದೊಡ್ಡವಾದ ರತ್ನದ ಅಂಗಡಿಯಂತಿರುವದು. ರತ್ನವ್ಯಾಪಾರಕ್ಕೆ ಹೋಗುವವರು ತಮತಮಗುಚಿತಗಳಾದ ರತ್ನಗಳನ್ನು ತೆಗೆದುಕೊಳ್ಳುವರಲ್ಲದೆ ಅಂಗಡಿಯಲ್ಲಿರುವ ರತ್ನಗಳನ್ನೆಲ್ಲಾ ತೆಗೆದುಕೊಳ್ಳಲಾರರು. ಅಂಗಡಿಯಲ್ಲಿ ಕೃತ್ರಿಮರತ್ನಗಳೂ ಹಾಗೂ ನಿಜರತ್ನ

ಗಳೂ ಇರುತ್ತವೆ. ಅವರವರಿಗೆ ಬೇಕಾದ ರತ್ನಗಳನ್ನು ತೆಗೆದುಕೊಳ್ಳುವದು ಅವರವರ ಸ್ವಭಾವವಾಗಿದೆ. ಅದರಂತೆ ಅತ್ಯಂತ ವಿಸ್ತಾರವಾದ ವೇದದಲ್ಲಿ ಅಮೂಲ್ಯರತ್ನಗಳಂತಿರುವ ಶಿವೋಪಾಸನೆಯನ್ನೂ ಶಿವೋಪಾಸನಾಸಾಮಗ್ರಿಗಳನ್ನೂ ಮಾತ್ರ ವೀರಶೈವರು ಪರಿಗ್ರಹಿಸಿರುವರು. "ನಕರ್ಮಣಾ ನ ಪ್ರಜಯಾ" ಇತ್ಯಾದಿ ಶ್ರುತಿಗಳೂ ಕೂಡ ಪಶುಕರ್ಮವನ್ನು ನಿರಾಕರಿಸುವವೇ ಹೊರತು ಪತಿಕರ್ಮವನ್ನು ನಿರಾಕರಿಸುವುದಿಲ್ಲವು. ಪತಿಕರ್ಮ, ಪಶುಕರ್ಮಗಳೆರಡನ್ನೂ ನಿರಾಕರಿಸುವವೆಂದು ಹೇಳುವದಾದರೆ "ವಿದ್ಯಾಂಚಾವಿದ್ಯಾಂಚಯಸ್ತದ್ವೇದೋಭಯಗ್ಂಸಃ । ಅವಿದ್ಯಯಾಮೃತ್ಯುಂತೀರ್ತ್ವಾ ವಿದ್ಯಯಾಮೃತಮಶ್ನುತೇ ॥ ಎಂದು ಜ್ಞಾನಕರ್ಮಗಳೆರಡೂ ಅವಶ್ಯಕಗಳೆಂದು ಹೇಳುವ ಈಶಾವಾಸ್ಯೋಪನಿಷತ್ತಿಗೆ ವೈಯರ್ಥ್ಯವನ್ನು ಹೇಳಬೇಕಾಗುವದು. ಆದುದರಿಂದ ಕರ್ಮನಿಷೇಧವನ್ನು ಮಾಡುವ ಶ್ರುತಿಗಳಿಗೆ ಅವು ಪಶುಕರ್ಮವಿಷಯಕಗಳೆಂದು ಅರ್ಥಸಂಕೋಚವನ್ನು ಮಾಡಿ ಉಳಿದ ಶ್ರುತಿಗಳಿಗೆ ಸಾಂಗತ್ಯವನ್ನು ಹೇಳುವದು ಉಚಿತವಾಗಿದೆ. ಹೀಗೆ ಅರ್ಥಸಂಕೋಚವನ್ನು ಮಾಡುವದರಿಂದ "ವೈದಿಕಂ ಕರ್ಮಕುರ್ವೀತ ಜ್ಞಾನೈಕಫಲಸಾಧನಂ" ಇತ್ಯಾದಿ ಪ್ರಮಾಣವಾಕ್ಯಗಳಿಗೆ ಸಾಫಲ್ಯವು ಪ್ರಾಪ್ತವಾಗುವದು.

## ಜೀವಾತ್ಮವಿಚಾರ

ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವನಾಮಕಃ ॥೩॥

(ಸಿ. ಶಿ. ಪರಿಚ್ಛೇದ ೫)

ಎಂದು ರೇಣುಕಭಗವತ್ಪಾದರು ಅಪ್ಪಣೆಕೊಡಿಸಿರುವಂತೆ, ಜೀವನು ಶಿವಾಂಶರೂಪನಾಗಿರುವನು. ಇದೇ ಅಭಿಪ್ರಾಯವನ್ನು ಬ್ರಹ್ಮಸೂತ್ರವು "ಅಂಶೋ ನಾನಾವ್ಯಪದೇಶಾತ್" ಎಂಬ ಸೂತ್ರದಿಂದ ಸಮರ್ಥಿಸುತ್ತಿರುವುದು. ಮುಂಡಕಶ್ರುತಿಯು—

ಯಥಾ ಸುದೀಪ್ತಾತ್ ಪಾವಕಾತ್ ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ । ತಥಾಽಕ್ಷರಾದ್ವಿವಿಧಾಃ ಸೋಮ್ಯಭಾವಾಃ ಪ್ರಜಾಯಂತೇ ತತ್ರ ಚೈವಾಪಿಯಂತಿ ॥ (೨-೧-೧)

ಅಗ್ನಿಯಿಂದ ಅಗ್ನ್ಯಂಶರೂಪಗಳಾದ ಅನಂತಾನಂತಾಗ್ನಿಕಣಗಳು ಹೇಗೆ ಆವಿರ್ಭವಿಸುವವೋ, ಹಾಗೆಯೇ ಪರಬ್ರಹ್ಮದಿಂದ ತದಂಶಭೂತರಾದ

ಅನಂತಾನಂತ ಜೀವರು ಆವಿರ್ಭವಿಸುವರೆಂದೂ, ಅಲ್ಲಿಯೇ ಲಯವನ್ನು ಹೊಂದುವರೆಂದೂ ಸಾರುತ್ತಿರುವುದು.

ವೀರಶೈವಸಿದ್ಧಾಂತದಲ್ಲಿ ಶಿವಜೀವರಿಗೆ ಪಾರಮಾರ್ಥಿಕಭೇದಾಭೇದವು ಅಂಗೀಕೃತವಾಗಿರುವುದು.

ಅಗ್ನಿಯಿಂದಾವಿರ್ಭವಿಸಿದ ಕಣಗಳಿಗೂ ಅಗ್ನಿಗೂ ಅತ್ಯಂತ ಭೇದವನ್ನಾಗಲಿ ಅಥವಾ ಅತ್ಯಂತಾಭೇದವನ್ನಾಗಲಿ ಹೇಳಲಿಕ್ಕೆ ಬಾರದಿರುವಂತೆ, ಶಿವನಿಂದಾವಿರ್ಭವಿಸಿ ಶಿವಾಂಶರೆನಿಸಿದ ಜೀವರಿಗೂ ಶಿವನಿಗೂ ಅತ್ಯಂತ ಭೇದವನ್ನಾಗಲಿ ಅಥವಾ ಅತ್ಯಂತಾಭೇದವನ್ನಾಗಲಿ ಹೇಳಲಿಕ್ಕೆ ಬರುವುದಿಲ್ಲ. ಆದರೆ ಬೇದಾಭೇದವನ್ನು ಮಾತ್ರ ಹೇಳಬೇಕಾಗುವುದು. ಅಂಶಾಂಶಿಗಳಿಗೆ ಅತ್ಯಂತಾಭೇದವನ್ನು ಹೇಳಿದರೆ, ಅಗ್ನಿಯಿಂದಾಗುವ ಪಾಕಾದಿಕ್ರಿಯೆಗಳು ಅಗ್ನ್ಯಂಶಗಳಾದ ಕಿಡಿಗಳಿಂದಲೂ ಆಗಬೇಕಾದೀತು! ಅತ್ಯಂತ ಭೇದವನ್ನು ಹೇಳಿದರೆ ಅಗ್ನಿಗೆ ಅತ್ಯಂತ ಭಿನ್ನವಾದ ಜಲಾದಿಗಳಿಂದ ದಾಹಕಾರ್ಯವಾಗದಿರುವಂತೆ, ಅಗ್ನಿಯ ಕಿಡಿಗಳಿಂದಲೂ ದಾಹಕಾರ್ಯವಾಗದೆ ಹೋಗಬೇಕಾದೀತು! ಅಗ್ನಿಯ ಕಿಡಿಗಳು ಅರಳೆಯನ್ನು ಪ್ರವೇಶಿಸಿ ದಾಹಕಾರ್ಯವನ್ನುಂಟುಮಾಡುವುದು ಲೋಕಪ್ರಸಿದ್ಧವಷ್ಟೆ! ಇದರಂತೆಯೇ ಶಿವನಿಗೂ ಶಿವಾಂಶರೂಪರಾದ ಜೀವರಿಗೂ ಅತ್ಯಂತಾಭೇದವನ್ನು ಹೇಳಿದರೆ, ಶಿವನಲ್ಲಿರುವ ಸರ್ವಜ್ಞತ್ವ-ಸರ್ವಕರ್ತೃತ್ವಾದಿಗಳು ಜೀವರಲ್ಲಿಯೂ ಇರಬೇಕಾದೀತು. ಅತ್ಯಂತಭೇದವನ್ನು ಹೇಳಿದರೆ ಶಿವನಿಗೆ ಭಿನ್ನವಾದ ಘಟಪಟಾದಿಗಳಿಂದ ಜ್ಞಾನರೂಪಕಾರ್ಯವಾಗದಿರುವಂತೆ ಜೀವರಿಂದಲೂ ಆಗಬಾರದಾದೀತು! ಜೀವರಿಗೆ ಘಟಪಟಾದಿವಸ್ತುಗಳ ಜ್ಞಾನವಿರುವುದು ಸರಿಯಷ್ಟೆ! ಆದುದರಿಂದ ವೀರಶೈವಾಚಾರ್ಯರು ಶಿವನಿಗೂ ಜೀವನಿಗೂ ಪಾರಮಾರ್ಥಿಕವಾದ ಭೇದಾಭೇದವನ್ನು ಒಪ್ಪಿರುವರು. ಇದರಿಂದಲೇ ವೀರಶೈವಮತಕ್ಕೆ ದ್ವೈತಾದ್ವೈತಮತವೆಂತಲೂ ನಾಮಾಂತರವು ಪ್ರಾಪ್ತವಾಗಿರುವುದು.

ಶ್ರುತಿಗಳಲ್ಲಿ "ದ್ವಾಸುಪರ್ಣಾ ಸಯುಜಾ ಸಖಾಯಾಸಮಾನಂ ವೃಕ್ಷಂ ಪರಿಷಸ್ವಜಾತೇ" ಇತ್ಯಾದಿವಾಕ್ಯಗಳು ದ್ವೈತವನ್ನು ಪ್ರತಿಪಾದಿಸತಕ್ಕವುಗಳಾಗಿರುವುವು. "ತತ್ತ್ವಮಸಿ." "ಅಹಂಬ್ರಹ್ಮಾಸ್ಮಿ" "ನೇಹನಾನಾಸ್ತಿ ಕಿಂಚನ" ಇತ್ಯಾದಿವಾಕ್ಯಗಳು ಅದ್ವೈತವನ್ನು ಪ್ರತಿಪಾದಿಸತಕ್ಕವುಗಳಾಗಿ

ರುವುವು. ಈ ಉಭಯವಿಧವಾಕ್ಯಗಳಿಗೂ ಸುಗಮಮಾರ್ಗದಿಂದ ಸಾಮಂಜಸ್ಯವನ್ನು ಉಂಟುಮಾಡುವುದು ವೈದಿಕಮತಾನುಯಾಯಿಗಳ ಮುಖ್ಯ ಕರ್ತವ್ಯವಾಗಿರುವುದರಿಂದಲೂ, ಇದೇ ಮಾರ್ಗವನ್ನು ವೀರಶೈವಮತಾಚಾರ್ಯರು ಅನುಸರಿಸಿರುವುದರಿಂದಲೂ ಈ ವೀರಶೈವಸಿದ್ಧಾಂತವು ಸರ್ವಶ್ರುತಿ ಸಮ್ಮತವಾಗಿರುವುದು.

ಇದೇ ವಿಷಯವನ್ನು ವೀರಶೈವಮತಭಾಷ್ಯಕಾರರಾದ ಶ್ರೀಪತಿ ಪಂಡಿತರು ತಮ್ಮಿಂದ ರಚಿಸಲ್ಪಟ್ಟ ಶ್ರೀಕರಭಾಷ್ಯದಲ್ಲಿ—

ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತಸಂಜ್ಞಕೇ ।
ವೀರಶೈವೈಕಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ ॥

ಎಂದು ಉಲ್ಲೇಖಿಸಿರುವರು. ಇದರಿಂದ ವೀರಶೈವಮತವು ಭೇದಾಭೇದಾತ್ಮಕವಾದುದೆಂದು ಸಿದ್ಧವಾಗುವುದು.

ಪರಶಿವನಲ್ಲಿ ಅವಿನಾಭಾವಸಂಬಂಧದಿಂದಿರುವ ವಿಮರ್ಶಶಕ್ತಿಯು ಸತ್ತ್ವರಜಸ್ತಮೋಗುಣಗಳ ತಾರತಮ್ಯದಿಂದ ಶುದ್ಧಚಿದ್ರೂಪನಾದ ಪರಶಿವನಲ್ಲಿ ಭೋಕ್ತೃ-ಭೋಜ್ಯ-ಪ್ರೇರಕರೂಪವಾಗಿ ಪರಿಣಮಿಸುವುದು. ಕಿಂಚಿತ್ಸತ್ತ್ವರಜೋಗುಣರೂಪವಾದ ಜೀವಚೈತನ್ಯವು "ಭೋಕ್ತೃ" ವೆನಿಸುವುದು. ಅತ್ಯಂತ ತಾಮಸೋಪಾಧಿವಿಶಿಷ್ಟವಾದ ಚೈತನ್ಯವು ರಸಾದಿರೂಪವಾದ 'ಭೋಜ್ಯ' ವೆನಿಸುವುದು. ಪರತತ್ತ್ವರೂಪಶುದ್ಧಸತ್ತ್ವಗುಣೋಪಾಧಿ ವಿಶಿಷ್ಟಬ್ರಹ್ಮಚೈತನ್ಯವುಳ್ಳ ಮಹೇಶ್ವರನು 'ಪ್ರೇರಕ' ನೆನಿಸುವನು. ಮಾಯೋಪಾಧಿಯು ಶುದ್ಧ ಮತ್ತು ಅಶುದ್ಧವೆಂದು ಎರಡು ಪ್ರಕಾರವಾಗಿರುವುದು. ಶುದ್ಧೋಪಾಧಿರೂಪಪರಾಮಾಯೆಯು ಶಿವನನ್ನು ಆಶ್ರಯಿಸಿಕೊಂಡಿರುವುದು. ಆದರೂ ಅದು ಅವನಿಗೆ ಮೋಹವನ್ನುಂಟುಮಾಡುವುದಿಲ್ಲ. ಇದೇ "ಊರ್ಧ್ವಮಾಯೆ" ಯೆನಿಸುವುದು. ಅಶುದ್ಧೋಪಾಧಿರೂಪವಾದ ಅವಿದ್ಯೆಯು ಜೀವನನ್ನು ಆಶ್ರಯಿಸಿಕೊಂಡಿದ್ದು, ಅವನನ್ನು ಮೋಹಗೊಳಿಸುವುದು. ಇದೇ "ಅಧೋಮಾಯೆ" (ಪ್ರಕೃತಿ)ಯೆನಿಸುವುದು. ಅವಿದ್ಯಾ ಶಕ್ತಿಭೇದದಿಂದ ಜೀವನು ನಾನಾಪ್ರಕಾರನಾಗುವನು. ಅವಿದ್ಯೆಯಿಂದ ಮೋಹಿತನಾದ ಜೀವನು "ಅಹಂ ಬ್ರಹ್ಮಾಸ್ಮಿ" ಎಂಬ ತಾದಾತ್ಮ್ಯಜ್ಞಾನದಿಂದ ದೂರನಾಗಿರುವನು. ಶಿವಾಂಶಭೂತನಾದ ಜೀವನು

ಕಿಂಚಿಜ್ಜ್ಞನೂ, ಕಿಂಚಿತ್ಕರ್ತೃವೂ, ಕಿಂಚಿಚ್ಛಕ್ತಿಸಮನ್ವಿತನೂ, ಅನಾದಿಕರ್ಮರೂಪಾವಿದ್ಯಾಮೋಹಿತನೂ, ಬ್ರಹ್ಮೈಕ್ಯಜ್ಞಾನವರ್ಜಿತನೂ, ಘೋರಾಪಾರನಿಸ್ಸಾರಸಂಸಾರತಾಪತ್ರಯಾನಲದಂದಹ್ಯಮಾನನೂ, ಜನನಮರಣಾನ್ವಿತನೂ, ಬದ್ಧನೂ ಆಗಿರುವನು.

ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ।
ಭಾಗೋ ಜೀವಃ ಸ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪತೇ ॥
(ಶ್ವೇತಾಶ್ವತರ ೫-೯)

ಎಂಬ ಶ್ರುತಿಪ್ರಮಾಣದಂತೆ ಜೀವಾತ್ಮನು ಕೂದಲಿನ ಅಗ್ರಭಾಗದ ಸಾವಿರದಲ್ಲೊಂದುಭಾಗದಷ್ಟು ಸೂಕ್ಷ್ಮನಾಗಿದ್ದು, ಸಮಸ್ತಪ್ರಾಣಿಗಳ ಹೃದಯದಲ್ಲಿ ದೀಪದಂತೆ ಪ್ರಕಾಶಿಸುತ್ತಿರುವನು. ದೀಪವು ಮನೆಯ ಯಾವುದಾದರೊಂದು ಭಾಗದಲ್ಲಿದ್ದರೂ ತನ್ನ ಪ್ರಭೆಯಿಂದ ಮನೆಯನ್ನೆಲ್ಲಾ ಪ್ರಕಾಶಪಡಿಸುವಂತೆ, ಜೀವಾತ್ಮನು ಹೃದಯಸ್ಥಾನದಲ್ಲಿದ್ದರೂ ತನ್ನ ಜ್ಞಾನ ಪ್ರಭೆಯಿಂದ ಶರೀರವನ್ನೆಲ್ಲಾ ವ್ಯಾಪಿಸಿ, ಸರ್ವಾವಯವವರ್ತಿಸುಖದುಃಖಗಳನ್ನು ಅನುಭವಿಸುವವನಾಗುವನು. ಅಣುರೂಪನಾದ ಜೀವಾತ್ಮನು ಸಮಸ್ತಪ್ರಾಣಿಗಳ ಅಂತಃಕರಣವನ್ನು ಆಶ್ರಯಿಸಿಕೊಂಡು, ಆಣವಾದಿಮಲತ್ರಯಸಂಬಂಧದಿಂದ ಪ್ರಾಚೀನಕರ್ಮಪಾಶಬದ್ಧನಾಗಿರುವನು. ಜೀವಾತ್ಮನು ಸ್ವಭಾವತಃ ಶರೀರ ರಹಿತನಾಗಿದ್ದರೂ, ಮಾಯಾಮಯಶರೀರದಲ್ಲಿರುವವನಾಗಿ ಜನನಮರಣರೂಪಸಂಸಾರದಲ್ಲಿ ಚಕ್ರನೇಮಿಕ್ರಮದಿಂದ ಸದಾ ಸುತ್ತುತ್ತಿರುವನು. ಸ್ಫಟಿಕಮಣಿಗೆ ಜಪಾಕುಸುಮದ (ಕೆಂಪುದಾಸವಾಳದ ಹೂವಿನ) ಸಂಬಂಧದಿಂದ ಕೆಂಪುಬಣ್ಣವು ಹೇಗೆ ಪ್ರಾಪ್ತವಾಗುವುದೋ, ಹಾಗೆಯೇ ಅಹಂಕಾರಸಂಬಂಧದಿಂದ ಜೀವಾತ್ಮನಿಗೆ ದೇಹಾತ್ಮಾಭಿಮಾನವು ಪ್ರಾಪ್ತವಾಗುವುದು. ಶರೀರರಹಿತನಾದ ಜೀವಾತ್ಮನಿಗೆ ಸ್ವಾಭಾವಿಕವಾಗಿ ದೇಹಸಂಬಂಧವಿರುವುದಿಲ್ಲ; ಆದರೆ ಜೀವಾತ್ಮನು ಅಜ್ಞಾನ ಕರ್ಮಸಂಬಂಧದಿಂದ ಕರ್ಮಫಲವನ್ನು ಅನುಭವಿಸುವುದಕ್ಕಾಗಿ ನಾನಾಶರೀರಗಳುಳ್ಳನಾಗುವನು. ಆತ್ಮನು ದೇವನಲ್ಲ; ಗಂಧರ್ವನಲ್ಲ; ರಾಕ್ಷಸನಲ್ಲ; ಮನುಷ್ಯನಲ್ಲ; ಪಶುಪಕ್ಷ್ಯಾದಿರೂಪತಿರ್ಯಕ್ಪ್ರಾಣಿಯಲ್ಲ; ಆದರೆ ಆಯಾ ಹೆಸರಿನಿಂದ ವ್ಯವಹರಿಸಲ್ಪಡುತ್ತಿರುವನು. ಜೀವನು ದೇವ-ಮನುಷ್ಯ-ಪಶು-

ಪಕ್ಷಿ-ಜಲಚರ-ಕ್ರಿಮಿ-ಕೀಟ ಮೊದಲಾದ ೮೪ ಲಕ್ಷ ಜೀವಯೋನಿಗಳಲ್ಲಿ ಜನಿಸುವುದಕ್ಕೂ ಆಯಾ ಯೋನಿಗಳಲ್ಲಿ ಪ್ರಾಪ್ತವಾಗುವ ಸುಖದುಃಖಗಳನ್ನು ಅನುಭವಿಸುವುದಕ್ಕೂ ಅವನ ಕರ್ಮವೇ ಮೂಲಕಾರಣವಾಗಿರುವುದು. ಕರ್ಮಯಂತ್ರನಿಯಂತ್ರಿತವಾದ ಸಂಸಾರಚಕ್ರದಲ್ಲಿ ಯಾವಾಗಲೂ ಸುತ್ತುತ್ತಿರುವ ಜೀವನಿಗೆ ಪರಮೇಶ್ವರನು ಹಿತಮಾರ್ಗವನ್ನುಪದೇಶಿಸುವವನೂ, ಪುನರಾವೃತ್ತಿರಹಿತವಾದ ಮೋಕ್ಷಮಾರ್ಗವನ್ನು ತೋರಿಸುವವನೂ ಆಗಿರುವನು. ಜೀವನು ತನ್ನ ಕರ್ಮಪರಿಪಾಕದಿಂದ ಅನಾದಿ ಮಲವಾಸನೆಯನ್ನು ಕಳೆದುಕೊಂಡು ಶಿವಪ್ರಸಾದದಿಂದ ಶಿವಸ್ವರೂಪನಾಗಿ ಶಿವನಲ್ಲಿ ಸಾಮರಸ್ಯವನ್ನು ಹೊಂದುವನು.

## ಲಿಂಗಾಂಗಸಾಮರಸ್ಯ

ವೀರಶೈವಸಿದ್ಧಾಂತದಲ್ಲಿ ಪರಶಿವಬ್ರಹ್ಮವು "ಸ್ಥಲ" ಎಂಬ ಅಭಿಧಾನದಿಂದ ನಿರ್ದೇಶಿಸಲ್ಪಟ್ಟಿರುವುದು.

ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ ।
ತದ್ಬ್ರಹ್ಮ ಸ್ಥಲಮಿತ್ಯುಕ್ತಂ ಸ್ಥಲತತ್ತ್ವವಿಶಾರದೈಃ

ಚರಾಚರಾತ್ಮಕವಾದೀ ಜಗತ್ತು ಯಾವುದರಲ್ಲಿ ಸ್ಥಿತಿಯನ್ನೂ ಲಯವನ್ನೂ ಹೊಂದುವುದೋ, ಆ ಬ್ರಹ್ಮವು "ಸ್ಥಲ"ವೆಂದು ಹೇಳಿಸಿಕೊಳ್ಳುವುದು. ಈ ಸ್ಥಲರೂಪ ಪರಶಿವಬ್ರಹ್ಮವು ಸ್ವಲೀಲೆಯಿಂದ ಅಂಗಸ್ಥಲ-ಲಿಂಗಸ್ಥಲವೆಂದು ಎರಡು ಪ್ರಕಾರವಾಗುವುದು. ಚಿತ್ತಶಕ್ತಿವಿಶಿಷ್ಟಜೀವನೇ ಅಂಗಪದವಾಚ್ಯನೆನಿಸುವನು. ಚಿಚ್ಛಕ್ತಿವಿಶಿಷ್ಟ ಪರಶಿವನೇ ಲಿಂಗಪದವಾಚ್ಯನೆನಿಸುವನು. ಲಿಂಗವು ಭಕ್ತಾನುಗ್ರಹಕ್ಕಾಗಿ ಸ್ಥೂಲ-ಸೂಕ್ಷ್ಮ-ಕಾರಣ ನಾಮಕಶರೀರಸ್ಥಾನಭೇದದಿಂದ ಇಷ್ಟಲಿಂಗ-ಪ್ರಾಣಲಿಂಗ, ಭಾವಲಿಂಗವೆಂದು ಮೂರು ಪ್ರಕಾರವಾಗುವುದು. ಅಂಗವಾದರೂ ತ್ಯಾಗಾಂಗ-ಭೋಗಾಂಗ-ಯೋಗಾಂಗವೆಂದು ಮೂರು ಪ್ರಕಾರವಾಗುವುದು. ಇಷ್ಟಲಿಂಗವು—ಆಚಾರ ಲಿಂಗ-ಗುರುಲಿಂಗವೆಂದೂ, ಪ್ರಾಣಲಿಂಗವು—ಶಿವಲಿಂಗ-ಚರಲಿಂಗವೆಂದೂ, ಭಾವಲಿಂಗವು-ಪ್ರಸಾದಲಿಂಗ-ಮಹಾಲಿಂಗವೆಂದೂ ಆರು ಪ್ರಕಾರವಾಗುವುವು. ಇದರಂತೆ ತ್ಯಾಗಾಂಗವು—ಭಕ್ತ-ಮಹೇಶನೆಂದೂ, ಭೋಗಾಂಗವು ಪ್ರಸಾದಿ-

ಪ್ರಾಣಲಿಂಗಿಯೆಂದೂ, ಯೋಗಾಂಗವು—ಶರಣ ಐಕ್ಯನೆಂದೂ ಆರು ಪ್ರಕಾರವಾಗುವುವು. ಅಂಗಸ್ಥಲವು ಅವಾಂತರ ಭೇದದಿಂದ ೪೪ ಪ್ರಕಾರವಾಗುವುದು. ಲಿಂಗಸ್ಥಳಲವು ಅವಾಂತರಭೇದದಿಂದ ೫೭ ಪ್ರಕಾರವಾಗುವುದು. ಈ ಎರಡು ಸ್ಥಲಗಳೂ ಸೇರಿ ೧೦೧ ಸ್ಥಲಗಳಾಗುವುವು. ಏಕೋತ್ತರಶತಸ್ಥಲಾತ್ಮಕವಾದೀ ಲಿಂಗಾಂಗ ಸಾಮರಸ್ಯಜ್ಞಾನವೇ ವೀರಶೈವ ಸಿದ್ಧಾಂತದಲ್ಲಿ ಮೋಕ್ಷ ಮೂಲಭೂತವಾಗಿರುವುದು.

ಇನ್ನು ಲಿಂಗಸ್ಥಲವನ್ನು ವಿಮರ್ಶಿಸೋಣ!

ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇ ಧಾರ್ಯತೇ ತನೌ ।
ಪ್ರಾಣಲಿಂಗಂ ತು ತತ್ಸೂಕ್ಷ್ಮಂ ಯದಂತರ್ಭಾವನಾಮಯಂ ॥
ಪರಾತ್ಪರಂ ತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ ॥

ಸ್ಥೂಲದೇಹದಲ್ಲಿ ಧರಿಸಲ್ಪಡುವುದೇ ಇಷ್ಟಲಿಂಗವೆಂದೂ, ಸೂಕ್ಷ್ಮ ಶರೀರದಲ್ಲಿ ಧರಿಸಲ್ಪಡುವುದೇ ಪ್ರಾಣಲಿಂಗವೆಂದೂ, ಕಾರಣ ಶರೀರದಲ್ಲಿ ಧರಿಸಲ್ಪಡುವುದೇ ಭಾವಲಿಂಗವೆಂದೂ ಹೇಳಿಸಿಕೊಳ್ಳುವುವು. ಈ ತ್ರಿವಿಧ ಲಿಂಗಗಳಿಂದ ಆರು ಬಗೆಯಾಗಿರುವ ಆಚಾರಾದಿಲಿಂಗಗಳ ಸ್ವರೂಪವೆಂತೆಂದರೆ—

ಆಚಾರಲಿಂಗಂ ಘ್ರಾಣಾಖ್ಯಂ ಭಕ್ತಸ್ಥಲಸಮಾಶ್ರಯಂ
ನಿವೃತ್ತಿಕಲಯೋಪೇತಂ ಗಂಧಗ್ರಹಣಸಾಧನಂ ॥೧॥
ಗುರುಲಿಂಗ ತು ಜಿಹ್ವಾಖ್ಯಂ ಮಹೇಶಸ್ಥಲಸಂಶ್ರಯಂ ।
ಪ್ರತಿಷ್ಠಾಕಲಯೋಪೇತಂ ರಸಗ್ರಹಣಸಾಧನಂ ॥೨॥
ಶಿವಲಿಂಗಂ ತು ನೇತ್ರಾಖ್ಯಂ ಪ್ರಸಾದಿಸ್ಥಲಸಂಶ್ರಯಂ ।
ವಿದ್ಯಾಕಲಾಸಮಾಯುಕ್ತಂ ರೂಪಗ್ರಹಣಸಾಧನಂ ॥೩॥
ತ್ವಗಾಖ್ಯಂ ಜಂಗಮಂಲಿಂಗಂ ಪ್ರಾಣಲಿಂಗಿಸ್ಥಲಾಶ್ರಯಂ ।
ಶಾಂತ್ಯಾಖ್ಯಕಲಯೋಪೇತಂ ಸ್ಪರ್ಶಗ್ರಹಣಸಾಧನಂ ॥೪॥
ಪ್ರಸಾದಲಿಂಗಂ ಶ್ರೋತ್ರಾಖ್ಯಂ ಶರಣಸ್ಥಲಸಂಶ್ರಯಂ ।
ಶಾಂತ್ಯತೀತಕಲೋಪೇತಂ ಶಬ್ದಗ್ರಹಣಸಾಧನಂ ॥೫॥
ಮಾನಸಂ ತು ಮಹಾಲಿಂಗಮೈಕ್ಯಸ್ಥಲಸಮಾಶ್ರಯಂ ।
ಶಾಂತ್ಯತೀತೋತ್ತರೋಪೇತಂ ಸರ್ವಗ್ರಹಣಸಾಧನಂ ॥೬॥

ಘ್ರಾಣರೂಪವಾದ ಆಚಾರಲಿಂಗವು ಭಕ್ತಸ್ಥಲವನ್ನಾಶ್ರಯಿಸಿ, ನಿವೃತ್ತಿ ಕಲಾಯುಕ್ತವಾಗಿ, ಗಂಧಗ್ರಹಣಸಾಧನವಾಗಿರುವುದು. ಘ್ರಾಣವು ಇಡಾ ಪಿಂಗಳಾನಾಡೀದ್ವಾರಾ ಪ್ರಾಣವಾಯುವಿನ ಸಂಚಾರಕ್ಕೆ ಆಶ್ರಯವಾಗಿರುವುದ ರಿಂದಲೂ, ದೇಹಶುದ್ಧಿಗೆ ಹೇತುಭೂತವಾದ ಪ್ರಾಣಾಯಾಮಾಚರಣೆಗೆ ಸಾಧನವಾದುದರಿಂದಲೂ ಇದಕ್ಕೆ "ಆಚಾರಲಿಂಗ" ಎಂಬ ನಾಮವು ಪ್ರಾಪ್ತ ವಾಗಿದೆ.

ಜಿಹ್ವಾರೂಪವಾದ ಗುರುಲಿಂಗವು ಮಹೇಶ್ವರಸ್ಥಲವನ್ನಾಶ್ರಯಿಸಿ, ಪ್ರತಿಷ್ಠಾಕಲಾಯುಕ್ತವಾಗಿ ರಸಗ್ರಹಣ ಸಾಧನವಾಗಿರುವುದು. ಜಿಹ್ವೆಯು ಷಡಕ್ಷರ ಮಂತ್ರದ ಉಚ್ಚಾರಕ್ಕೆಸಾಧನವಾದುದರಿಂದಲೂ, ಈ ಮಹಾ ಮಂತ್ರವು ಮಂತ್ರಮೂರ್ತಿಯಾದ ಗುರುವಿನ ಮುಖದಿಂದ ಪ್ರಾಪ್ತವಾಗು ವುದರಿಂದಲೂ ಇದಕ್ಕೆ "ಗುರುಲಿಂಗ" ಎಂಬ ನಾಮವು ಪ್ರಾಪ್ತವಾಗಿದೆ.

ನೇತ್ರರೂಪವಾದ ಶಿವಲಿಂಗವು ಪ್ರಸಾದಿಸ್ಥಲವನ್ನಾಶ್ರಯಿಸಿ, ವಿದ್ಯಾ ಕಲಾಯುಕ್ತವಾಗಿ, ರೂಪಗ್ರಹಣ ಸಾಧನವಾಗಿರುವುದು. ನೇತ್ರವು ತನ್ನ ಗೋಳಕದಲ್ಲಿರುವ ಶಿವಪ್ರಕಾಶದಿಂದ ಸಂಯುಕ್ತವಾಗಿ ಸಕಲ ರೂಪಪದಾರ್ಥ ಪ್ರಕಾಶಕ್ಕೆ ಸಾಧನವಾದುದರಿಂದ ಇದಕ್ಕೆ "ಶಿವಲಿಂಗ" ಎಂಬ ನಾಮವು ಪ್ರಾಪ್ತವಾಗಿದೆ.

ತ್ವಗ್ರೂಪವಾದ ಚರಲಿಂಗವು ಪ್ರಾಣಲಿಂಗಿಸ್ಥಲವನ್ನಾಶ್ರಯಿಸಿ, ಶಾಂತಿ ಕಲಾಯುಕ್ತವಾಗಿ, ಸ್ಪರ್ಶಗ್ರಹಣಸಾಧನವಾಗಿರುವುದು. ತ್ವಕ್ಕು ಸರ್ವಾಂಗ ವನ್ನು ವ್ಯಾಪಿಸಿ, ಶೀತ ಸ್ಪರ್ಶಾದಿಜ್ಞಾನಕ್ಕೆ ಸಾಧನವಾದುದರಿಂದಲೂ, ಇದು ಸಂಚರಣಶೀಲವಾದ ವಾಯುವಿನ ಅಂಶವಾಗಿರುವುದರಿಂದಲೂ ಇದಕ್ಕೆ "ಚರಲಿಂಗ" ಎಂಬ ನಾಮವು ಪ್ರಾಪ್ತವಾಗಿದೆ.

ಶ್ರೋತ್ರರೂಪವಾದ ಪ್ರಸಾದಲಿಂಗವು ಶರಣಸ್ಥಲವನ್ನಾಶ್ರಯಿಸಿ, ಶಾಂತ್ಯತೀತಕಲಾಯುಕ್ತವಾಗಿ ಶಬ್ದಗ್ರಹಣಕ್ಕೆ ಸಾಧನವಾದುದರಿಂದಲೂ, ನಾದ-ಸುನಾದ-ನಿನಾದ-ಮಹಾನಾದರೂಪ ಪರಾ-ಪಶ್ಯಂತೀ-ಮಧ್ಯಮಾ-ವೈಖರೀಕ್ರಮದಿಂದ ಪ್ರಾಪ್ತವಾಗುವ ಅನುಗ್ರಹರೂಪ ಪ್ರಸಾದಕ್ಕೆ ಹೇತು ವಾಗಿರುವುದರಿಂದಲೂ ಇದಕ್ಕೆ "ಪ್ರಸಾದಲಿಂಗ" ಎಂಬ ನಾಮವು ಪ್ರಾಪ್ತವಾಗಿದೆ.

ಮನೋರೂಪವಾದ ಮಹಾಲಿಂಗವು ಐಕ್ಯಸ್ಥಲವನ್ನಾಶ್ರಯಿಸಿ, ಶಾಂತ್ಯತೀತೋತ್ತರಕಲಾಯುಕ್ತವಾಗಿ, ಸರ್ವಗ್ರಹಣಸಾಧನವಾಗಿರುವುದು. ಮನಸ್ಸು ಶ್ರೋತ್ರಾದೀಂದ್ರಿಯಗಳಂತೆ ಒಂದೊಂದು ವಿಷಯವನ್ನು ಗ್ರಹಿಸದೆ ಸರ್ವ ವಿಷಯಗಳನ್ನೂ ಗ್ರಹಿಸುವುದರಿಂದಲೂ, ಇಂದ್ರಿಯಗಳಿಗೆಲ್ಲಾ ಮಹಾರಾಜನಾಗಿರುವುದರಿಂದಲೂ ಇದಕ್ಕೆ "ಮಹಾಲಿಂಗ" ಎಂಬ ನಾಮವು ಪ್ರಾಪ್ತವಾಗಿದೆ.

ಅಂಗಸ್ಥಲಂ ತಥಾ ಪ್ರೋಕ್ತಮಾಚಾರ್ಯೈಃ ಸೂಕ್ಷ್ಮದರ್ಶಿಭಿಃ । ಯೋಗಾಂಗಂ ಪ್ರಥಮಂ ಪ್ರೋಕ್ತಂ ಭೋಗಾಂಗಂ ಚ ದ್ವಿತೀಯಕಂ ॥ ತ್ಯಾಗಾಂಗಂ ಚ ತೃತೀಯಂ ಸ್ಯಾದಿತ್ಯೇವಂ ತ್ರಿವಿಧಂ ಸ್ಮೃತಂ ॥

ಅಂಗಸ್ಥಲವು ಯೋಗಾಂಗ-ಭೋಗಾಂಗ-ತ್ಯಾಗಾಂಗವೆಂದು ಮೂರು ವಿಧವಾಗಿರುವುದು. ವೀರಶೈವನು ತನಗೂ ಗುರುಲಿಂಗಜಂಗಮರಿಗೂ ಐಕ್ಯ ಯೋಗಾನುಸಂಧಾನವನ್ನು ಮಾಡುವುದರಿಂದ ಇದಕ್ಕೆ "ಯೋಗಾಂಗ" ಎಂಬ ನಾಮವು ಪ್ರಾಪ್ತವಾಗಿದೆ. ಗುರುಲಿಂಗಜಂಗಮಾರ್ಪಿತಪ್ರಸಾದ ಸ್ವೀಕಾರದ್ವಾರಾ ಸುಖಭೋಗವನ್ನನುಭವಿಸುವುದರಿಂದ ಇದಕ್ಕೆ "ಭೋಗಾಂಗ" ಎಂಬ ನಾಮವು ಪ್ರಾಪ್ತವಾಗಿದೆ. ಗುರುಲಿಂಗಜಂಗಮರಿಗೆ ನಿರ್ವಂಚನೆಯಿಂದ ತನುಮನೋಧನಗಳನ್ನು ತ್ಯಾಗಮಾಡುವುದರಿಂದ ಇದಕ್ಕೆ "ತ್ಯಾಗಾಂಗ" ಎಂಬ ನಾಮವು ಪ್ರಾಪ್ತವಾಗಿದೆ.

ಸದಾಚಾರಃ ಶಿವೇ ಭಕ್ತಿರ್ಲಿಂಗೇ ಜಂಗಮ ಏಕಧೀಃ ।<br>
ಲಾಂಛನೇ ಶರಣೇ ಭಕ್ತಿರ್ಭಕ್ತಸ್ಥಲಮನುತ್ತಮಂ ॥

ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ।<br>
ಬ್ರಹ್ಮಾದಿಸ್ಥಾನವಿಮುಖೋ ಭಕ್ತೋ ಮಾಹೇಶ್ವರಃ ಸ್ಮೃತಃ ॥

ಮನಃಪ್ರಸಾದಸಿದ್ಧ್ಯರ್ಥಂ ನಿರ್ಮಲಜ್ಞಾನಕಾರಣಂ ।<br>
ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀತ್ಯೇಷ ಕಥ್ಯತೇ ॥

ಲಿಂಗಂ ಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣರೂಪಿಣೀ ।<br>
ತದ್ರೂಪಲಿಂಗವಿಜ್ಞಾನೀ ಪ್ರಾಣಲಿಂಗೀತಿ ಕಥ್ಯತೇ ॥

ಸತೀ ಚಾಹಂ ಪತಿರ್ಲಿಂಗಂ ಹೃದಿ ಯುಕ್ತಃ ಸ್ವಯಂಪ್ರಭುಃ ।<br>
ಪ್ರಾಪಂಚಿಕಸುಖಂ ನಾಸ್ತಿ ಶರಣಸ್ಥಲಮುತ್ತಮಂ ॥

ಪ್ರಾಣಲಿಂಗಾದಿಯೋಗೇನ ಸುಖಾತಿಶಯಮೇಯಿವಾನ್ ।
ಶರಣಾಖ್ಯಃ ಶಿವೇನೈಕ್ಯಭಾವನಾದೈಕ್ಯವಾನ್ ಭವೇತ್ ॥

ಸದಾಚಾರಶೀಲನೂ, ಶಿವನಲ್ಲಿ ಭಕ್ತಿಯುಳ್ಳವನೂ, ಗುರುಲಿಂಗ ಜಂಗಮರಲ್ಲಿ ಒಂದೇ ವಿಧವಾದ ಬುದ್ಧಿಯುಳ್ಳವನೂ, ಶಿವಲಾಂಛನದಲ್ಲಿಯೂ ಶಿವಶರಣರಲ್ಲಿಯೂ ಭಕ್ತಿಯುಳ್ಳವನೂ "ಭಕ್ತ"ನೆನಿಸುವನು. ಸಹಜದಾನ ದಲ್ಲಿ ನಿಷ್ಣಾತನೂ, ಶಿವಾಸಕ್ತನೂ,ಬ್ರಹ್ಮಾದಿಸ್ಥಾನವಿಮುಖನೂ ಆದ ಭಕ್ತನೇ "ಮಾಹೇಶ್ವರ" ನೆನಿಸುವನು. ಈ ಮಾಹೇಶ್ವರನು ತನ್ನ ಮನಃ ಪ್ರಸನ್ನತೆ ಗಾಗಿ ನಿರ್ಮಲಜ್ಞಾನಕಾರಣವಾದ ಶಿವಪ್ರಸಾದವನ್ನು ಸ್ವೀಕರಿಸುವುದರಿಂದ "ಪ್ರಸಾದಿ" ಯೆನಿಸುವನು. ಪರಶಿವ ಬ್ರಹ್ಮವು ಚಿತ್ಸ್ವರೂಪವೆಂದೂ, ಆ ಪರಶಿವಬ್ರಹ್ಮದಲ್ಲಿರುವ ಶಕ್ತಿಯು ಪ್ರಾಣಸ್ವರೂಪವೆಂದೂ, ಲಿಂಗವು ಈ ಎರಡರ ಸ್ವರೂಪವಾಗಿರುವುದೆಂದೂ ತಿಳಿಯುವ ಪ್ರಸಾದಿಯೇ "ಪ್ರಾಣ ಲಿಂಗಿ" ಯೆನಿಸುವನು. ಲಿಂಗವು ಪತಿಯೆಂದೂ, ತಾನು ಸತಿಯೆಂದೂ ಭಾವಿಸಿ ಪ್ರಾಪಂಚಿಕ ಸುಖಶೂನ್ಯನಾಗಿರುವ ಪ್ರಾಣಲಿಂಗಿಯೇ "ಶರಣ" ನೆನಿಸುವನು. ಈಶರಣನು ಪ್ರಾಣಲಿಂಗಾದಿಯೋಗದಿಂದ ಸುಖಾತಿಶಯವನ್ನು ಹೊಂದಿ ಶಿವೋಹಂಭಾವನೆಯಿಂದ ಶಿವನಲ್ಲಿ ಏಕತ್ವವನ್ನು ಹೊಂದುವುದ ರಿಂದ "ಐಕ್ಯ" ನೆನಿಸುವನು. ಈ ಭಕ್ತಾದಿಷಟ್ಸ್ಥಲಗಳು ಮುಕ್ತಿಮಂದಿರಕ್ಕೆ ಸೋಪಾನ ರೂಪಗಳಾಗಿರುವುವು.

ಅಂಗಸ್ಥಲಪ್ರತಿಪಾದ್ಯನಾದ ಭಕ್ತನು ಲಿಂಗಸ್ಥಲ ಪ್ರತಿಪಾದ್ಯವಾದ ಆಚಾರಲಿಂಗಕ್ಕೆ ಅಂಗವಾಗಿರುವುದರಿಂದ, ಈ ಭಕ್ತನು ಆಚಾರಲಿಂಗದಲ್ಲಿ ಸಾಮರಸ್ಯವನ್ನು ಹೊಂದುವನು. ಇದರಂತೆಯೇ ಮಾಹೇಶ್ವರನು ಗುರು ಲಿಂಗದಲ್ಲಿಯೂ, ಪ್ರಸಾದಿಯು ಶಿವಲಿಂಗದಲ್ಲಿಯೂ, ಪ್ರಾಣಲಿಂಗಿಯು ಜಂಗಮಲಿಂಗದಲ್ಲಿಯೂ, ಶರಣನು ಪ್ರಸಾದಲಿಂಗದಲ್ಲಿಯೂ, ಐಕ್ಯನು ಮಹಾಲಿಂಗದಲ್ಲಿಯೂ ಸಾಮ್ಯರಸವನ್ನು ಹೊಂದುವರು.

ಇದೇ ರೀತಿಯಾಗಿ ಆಚಾರಲಿಂಗವು ಗುರುಲಿಂಗದಲ್ಲಿಯೂ, ಗುರು ಲಿಂಗವು ಶಿವಲಿಂಗದಲ್ಲಿಯೂ, ಶಿವಲಿಂಗವು ಜಂಗಮಲಿಂಗದಲ್ಲಿಯೂ, ಜಂಗಮಲಿಂಗವು ಪ್ರಸಾದಲಿಂಗದಲ್ಲಿಯೂ, ಪ್ರಸಾದಲಿಂಗವು ಮಹಾಲಿಂಗ ದಲ್ಲಿಯೂ ಮಹಾಲಿಂಗವು ಪರಶಿವರೂಪಘನಲಿಂಗದಲ್ಲಿಯೂ ಸಾಮರಸ್ಯ ವನ್ನು ಹೊಂದಿ ಅಖಂಡಾನಂದಾನುಭವವುಳ್ಳದಾಗುವುದು.

ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ।
ಪರೇ ಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥೩॥

ಎಂದು ಶ್ರೀಜಗದ್ಗುರು ರೇಣುಕಾಚಾರ್ಯರು ಸಿದ್ಧಾಂತ ಶಿಖಾಮಣಿಯಲ್ಲಿ ಅಪ್ಪಣೆಕೊಡಿಸಿರುವಂತೆ ಲಿಂಗಾಂಗಿಯಾದ ವೀರಶೈವನು ಷಟ್ಸ್ಥಲಾಚರಣೆಯಿಂದ, ನೀರಿನಲ್ಲಿ ನೀರನ್ನು ಕೂಡಿಸಿದಂತೆಯೂ ಬೆಂಕಿಯಲ್ಲಿ ಬೆಂಕಿಯನ್ನು ಕೂಡಿಸಿದಂತೆಯೂ ಪರಶಿವಬ್ರಹ್ಮದಲ್ಲಿ ಸಮರಸಗೊಂಡು ಏಕಾಕಾರನಾಗುವನು. ಶುದ್ಧಾತ್ಮನಾದ ಅಂಗನಾಮಕ ಜೀವನು ಲಿಂಗನಾಮಕಶಿವನಲ್ಲಿ ಸಾಮರಸ್ಯವನ್ನು ಹೊಂದುವುದೇ ಲಿಂಗಾಂಗಸಾಮರಸ್ಯವೆನಿಸುವುದು.

## ಶಕ್ತಿವಿಚಾರ

ಶಕ್ತಿಯೆಂದರೆ ಪರಶಿವಬ್ರಹ್ಮದಲ್ಲಿ ಅಪೃಥಕ್ಸಿದ್ಧವಾಗಿರುವ ವಿಶೇಷಣವು. ಪರಬ್ರಹ್ಮವು ಸ್ವಾಭಾವಿಕವಾಗಿ ಇಂತಹ ಅಪೃಥಕ್ಸಿದ್ಧ ವಿಶೇಷಣವಿಶಿಷ್ಟವಾಗಿರುವುದು. ಶಕ್ತಿರೂಪಾಪೃಥಕ್ಸಿದ್ಧ ವಿಶೇಷಣವಿಶಿಷ್ಟಬ್ರಹ್ಮತತ್ತ್ವವನ್ನು ಪ್ರತಿಪಾದಿಸುವುದೇ ಶಕ್ತಿವಿಶಿಷ್ಟಾದ್ವೈತದ ರಹಸ್ಯವಾಗಿರುವುದು. ಶಕ್ತಿಯು ಪರಶಿವಬ್ರಹ್ಮದಲ್ಲಿ ಅವಿನಾಭಾವಸಂಬಂಧದಿಂದಿದ್ದು ನಿತ್ಯವೆನಿಸಿರುವುದು. ಈ ವಿಷಯವನ್ನು ಶ್ವೇತಾಶ್ವತರ ಶ್ರುತಿಯು—

ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥ (೬-೮)

ಎಂಬ ಮಂತ್ರದಿಂದ ಪ್ರತಿಪಾದಿಸುತ್ತಿರುವುದು. ಈ ಮಂತ್ರಾರ್ಥವನ್ನು ಪರ್ಯಾಲೋಚಿಸಿದರೆ, ಪರಬ್ರಹ್ಮದಲ್ಲಿ ಶಕ್ತಿಯು ಸ್ವಭಾವಸಿದ್ಧವಾಗಿರುವುದೆಂದೂ, ಈ ಶಕ್ತಿಯು ಜ್ಞಾನಶಕ್ತಿ-ಕ್ರಿಯಾಶಕ್ತ್ಯಾದಿರೂಪದಿಂದ ನಾನಾ ಪ್ರಕಾರವಾಗಿರುವುದೆಂದೂ ಸಿದ್ಧವಾಗುವುದು. "ಸ್ವಾಭಾವಿಕೀ" ಎಂಬ ಪದವು ಶಕ್ತಿನಿತ್ಯತ್ವವನ್ನು ಘಂಟಾಘೋಷವಾಗಿ ಉದ್ಘೋಷಿಸುತ್ತಿರುವುದು. ಇದೇ ಶ್ರುತಿಯು ಬೇರೊಂದೆಡೆಯಲ್ಲಿ—

ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ ।
ಯಃ ಕಾರಣಾನಿ ನಿಖಿಲಾನಿ ತಾನಿ ಕಾಲಾತ್ಮಯುಕ್ತಾನ್ಯಧಿತಿಷ್ಠತ್ಯೇಕಃ ॥ (೧-೩)

ಎಂಬೀ ಮಂತ್ರದಿಂದ ಶಕ್ತಿಯು ಪರಶಿವಬ್ರಹ್ಮದಲ್ಲಿ ಬಹು ಗೋಪ್ಯವಾಗಿರುವುದೆಂದು ಬೋಧಿಸುತ್ತ ಶಕ್ತಿನಿತ್ಯತ್ವವನ್ನು ಸಾರುತ್ತಿರುವುದು. ಇದೇ ವಿಷಯವನ್ನು ಇದೇ ಶ್ರುತಿಯು ಮತ್ತೊಂಪೆಡೆಯಲ್ಲಿ—

ಯದಾ ತಮಸ್ತನ್ನ ದಿವಾ ನ ರಾತ್ರಿರ್ನಸನ್ನಚಾಸಚ್ಛಿವ ಏವ ಕೇವಲಃ ।
ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ ॥
(೪-೧೮)

ಎಂಬ ಮಂತ್ರದಿಂದ ಸಮರ್ಥಿಸುತ್ತಿರುವುದು. ಪುರಾಣೀ-ಅನಾದಿಸಂಸಿದ್ಧವಾದ, ಪ್ರಜ್ಞಾ-ಚಿಚ್ಛಕ್ತಿಯು, ಆ ಪರಶಿವಬ್ರಹ್ಮದಿಂದ ಪ್ರಸೃತಾ-ಕ್ರಿಯಾಶಕ್ತ್ಯಾದ್ಯನಂತರೂಪದಿಂದ ಪ್ರಸೃತವಾಯಿತು. ಎಂದು ಬೋಧಿಸುವುದು. ಈ ಶ್ರುತಿವಾಕ್ಯದಲ್ಲಿ ಶಕ್ತಿವಿಕಾಸವು ಸ್ಫುಟವಾಗಿ ತೋರಿಸಲ್ಪಟ್ಟಿರುವುದು. ಇದೇ ಶ್ರುತಿಯಲ್ಲಿರುವ—

ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ ।
ತಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ॥ (೪-೧೦)

ಎಂಬ ಮಂತ್ರವೂ ಸಹ ಪರಮಾತ್ಮನು ಶಕ್ತಿವಿಶಿಷ್ಟನೆಂದು ಬೋಧಿಸುತ್ತಿರುವುದು. ಪೂರ್ವಾಚಾರ್ಯರು ಮಾಯಾಶಬ್ದಕ್ಕೆ "ಮಂ-ಶಿವಂ ಅಯತಿ-ಸ್ವಭಾವತಃ ಪ್ರಾಪ್ನೋತೀತಿ ಮಾಯಾ" ಎಂದು ವಿಗ್ರಹವನ್ನು ಮಾಡಿರುವುದರಿಂದ ಈ ಮಾಯೆಯು ಅದ್ವೈತಿಗಳು ಹೇಳುವಂತೆ ಮೂಲಾವಿದ್ಯಾರೂಪಮಾಯೆಯಾಗಿರದೆ, ವಿಮರ್ಶಶಕ್ತಿರೂಪಮಾಯೆಯಾಗಿರುವುದು. ಈ ಮಂತ್ರಾಭಿಪ್ರಾಯವನ್ನು ಸಿದ್ಧಾಂತಾಗಮವು—

ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ ।
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ॥

ಎಂಬೀ ಶ್ಲೋಕದಿಂದ ಬೋಧಿಸುತ್ತಿರುವುದು. ಯಜುರ್ವೇದತೈತ್ತಿರೀಯಸಂಹಿತೆಯು—

ಆಖುಸ್ತೇ ರುದ್ರ ಪಶುಸ್ತಂ ಜುಷಸ್ವೈಷ ತೇ ರುದ್ರಭಾಗಃ ಸಹ ಸ್ವಸ್ರಾಂಬಿಕಯಾ ತಂ ಜುಷಸ್ವ ॥ (೧-೮-೬)

ಎಂಬೀ ಮಂತ್ರದಿಂದ ಶಕ್ತಿನಿತ್ಯತ್ವವನ್ನು ಪ್ರತಿಪಾದಿಸುತ್ತಿರುವುದು. ಈ ಮಂತ್ರದಲ್ಲಿರುವ "ಸ್ವಸ್ರಾ-ಅಂಬಿಕಯಾ" ಎಂಬ ಪದಗಳನ್ನು ಪರ್ಯಾಲೋಚಿಸಿದರೆ, ಪರಮಾತ್ಮನಲ್ಲಿ ಶಕ್ತಿಯು ಸ್ವಾಭಾವಿಕವಾಗಿರುವುದೆಂದು ಸಿದ್ಧವಾಗುವುದು.

ನಮಃ ಸೋಮಾಯ ಚ ರುದ್ರಾಯ ಚ । (ಯಜುಃ, ತೈ, ಸಂಹಿತಾ ೪-೫-೮)

ಎಂಬ ಶ್ರೀರುದ್ರಮಂತ್ರವೂ ಸಹ ಪರಮೇಶ್ವರನು ಉಮಾರೂಪ ಶಕ್ತಿಯುಕ್ತನಾಗಿರುವನೆಂದು ಬೋಧಿಸುತ್ತಿರುವುದು.

ಇದೇ ರೀತಿಯಾಗಿ ಅನೇಕ ಶ್ರುತಿವಾಕ್ಯಗಳು ಶಕ್ತಿಗೆ ನಿತ್ಯತ್ವವನ್ನೂ, ಶಿವಸಮವೇತತ್ವವನ್ನೂ ಪ್ರತಿಪಾದಿಸುತ್ತಿರುವುವು.

ತದೀಯಾ ಪರಮಾ ಶಕ್ತಿಃ ಸಚ್ಚಿದಾನಂದಲಕ್ಷಣಾ ।
ಸಮಸ್ತ ಲೋಕನಿರ್ಮಾಣಸಮವಾಯಸ್ವರೂಪಿಣೀ ॥
ತದಿಚ್ಛಯಾಽಭವತ್ಸಾಕ್ಷಾತ್ತತ್ಸ್ವರೂಪಾನುಕಾರಿಣೀ ॥೧೨॥

(ಸಿ. ಪರಿಚ್ಛೇದ ೨)

ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ ।
ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಂ ॥೩೪॥
ಅಂತಃಕರಣರೂಪೇಣ ಜಗದಂಕುರರೂಪತಃ ।
ಯಸ್ಮಿನ್ ವಿಭಾತಿ ಚಿಚ್ಛಕ್ತಿರ್ಬ್ರಹ್ಮಭೂತಃ ಸ ಉಚ್ಯತೇ ॥೩೪॥
ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥೩೫॥

(ಸಿ. ಪರಿಚ್ಛೇದ ೨೦)

ಸಚ್ಚಿದಾನಂದರೂಪವಾದ ಪರಶಿವಶಕ್ತಿಯು ಸಮಸ್ತ ಲೋಕಗಳ ನಿರ್ಮಾಣಕ್ಕಾಗಿ ಪರಶಿವನಲ್ಲಿ ಸಮವಾಯ ಸಂಬಂಧದಿಂದಿದ್ದು, ಅವನ ಇಚ್ಛೆಗನುಸಾರವಾಗಿ ಸಾಕ್ಷಾತ್ ಅವನ ಸ್ವರೂಪವೇ ಆಗುವುದೆಂದೂ, ಚಿತ್ರ ವಿಚಿತ್ರವಾದ ವಿಶ್ವಸೃಷ್ಟಿಯನ್ನುಂಟುಮಾಡುವ ವಿಮರ್ಶನಾಮಕವಾದ ಪರಾಶಕ್ತಿಯು ಯಾವುದರಲ್ಲಿ ಸಮವಾಯಸಂಬಂಧದಿಂದ ಪ್ರತಿಷ್ಠಿತವಾಗಿರುವುದೋ, ಆ ಬ್ರಹ್ಮವೇ "ವಿಶ್ವಭಾಜನ" ವೆನಿಸುವುದೆಂದೂ, ಚಿಚ್ಛಕ್ತಿಯು ಮೂಲಾಹಂಕಾರರೂಪದಿಂದಲೂ ಜಗದಂಕುರರೂಪದಿಂದಲೂ ಯಾವನಲ್ಲಿ ಪ್ರಕಾಶಿಸುತ್ತಿರುವುದೋ, ಅವನೇ ಪರಬ್ರಹ್ಮನಾಮಕಪರಶಿವನೆಂದು ಹೇಳಿಸಿಕೊಳ್ಳುವನೆಂದೂ, ಸಮಸ್ತವಸ್ತುಗಳನ್ನು ಪ್ರಕಾಶಪಡಿಸುವ ಚಂದ್ರಿಕೆಯು ಚಂದ್ರನಲ್ಲಿ ಹೇಗೆ ಸ್ಥಿರವಾಗಿರುವುದೋ, ಹಾಗೆಯೇ ವಿಮರ್ಶನಾಮಕವಾದ ಪರಾಶಕ್ತಿಯು ಪ್ರಕಾಶಸ್ವರೂಪವಾದ ಪರಬ್ರಹ್ಮದಲ್ಲಿ ಸ್ಥಿರವಾಗಿರುವುದೆಂದೂ ಸಿದ್ಧಾಂತಶಿಖಾಮಣಿಯಲ್ಲಿ ಶಕ್ತಿಸ್ವರೂಪವು ಸ್ಫುಟವಾಗಿ ಪ್ರತಿಪಾದಿಸಲ್ಪಟ್ಟಿರುವುದು.

ಲೋಕವಿಖ್ಯಾತನಾದ ಕಾಲಿದಾಸಮಹಾಕವಿಯು ತನ್ನಿಂದ ರಚಿಸಲ್ಪಟ್ಟ ರಘುವಂಶಕಾವ್ಯದ ಆರಂಭದಲ್ಲಿ,

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥೧॥

ಎಂದು ಮಂಗಲವನ್ನಾಚರಿಸಿ, ಈ ಮಂಗಲಶ್ಲೋಕದಲ್ಲಿ ಪಾರ್ವತೀಪರಮೇಶ್ವರರು ಶಬ್ದಾರ್ಥಗಳಂತೆ ನಿತ್ಯಸಂಬಂಧದಿಂದಿರುವರೆಂದು ಉಲ್ಲೇಖಿಸಿರುತ್ತಾನೆ. ಪಾರ್ವತೀಪರಮೇಶ್ವರರೆಂದರೆ ಶಕ್ತಿ-ಶಿವರೆಂದರ್ಥವು. ಶಬ್ದವನ್ನು ಬಿಟ್ಟು ಅರ್ಥವು ಹೇಗೆ ಇರುವುದಿಲ್ಲವೋ, ಅರ್ಥವನ್ನು ಬಿಟ್ಟು ಶಬ್ದವು ಹೇಗೆ ಇರುವುದಿಲ್ಲವೋ, ಹಾಗೆಯೇ ಶಿವನನ್ನು ಬಿಟ್ಟು ಶಕ್ತಿಯೂ, ಶಕ್ತಿಯನ್ನು ಬಿಟ್ಟು ಶಿವನೂ ಇರುವುದಿಲ್ಲವೆಂದು ಈ ಮಹಾಕವಿಯ ಅಭಿಪ್ರಾಯವಾಗಿರುವುದು.

ವೀರಶೈವಸಿದ್ಧಾಂತದಲ್ಲಿ ಶಿವನಿಗೂ ಶಕ್ತಿಗೂ ಅವಿನಾಭಾವಸಂಬಂಧವು (ಸಮವಾಯಸಂಬಂಧವು) ಹೇಳಲ್ಪಟ್ಟಿರುವುದು. ಪೃಥಕ್ಕರಿಸಲು ಬಾರದಿದ್ದು ನಿತ್ಯವಾಗಿರುವ ಸಂಬಂಧವೇ ಸಮವಾಯಸಂಬಂಧವೆನಿಸುವುದು. ಸೂರ್ಯನಲ್ಲಿ ಪ್ರಭೆಯೂ, ಚಂದ್ರನಲ್ಲಿ ಚಂದ್ರಿಕೆಯೂ, ಅಗ್ನಿಯಲ್ಲಿ ದಾಹವೂ, ಸಮುದ್ರದಲ್ಲಿ ಸೌಭಾಗ್ಯವೂ, ಕುಸುಮದಲ್ಲಿ ಗಂಧವೂ, ಸಕ್ಕರೆಯಲ್ಲಿ ಸವಿಯೂ ಅವಿನಾಭಾವಸಂಬಂಧದಿಂದಿರುವುದು. ಇದೇ ವಿಷಯವು ಮೃತ್ಯುಂಜಯಭಟ್ಟಾರಕದಲ್ಲಿ—

ಸಾ ಮಮೇಚ್ಛಾ ಪರಾಶಕ್ತಿರವಿಯುಕ್ತಾ ಸ್ವಭಾವಜಾ ।
ವಹ್ನೇರೂಷ್ಮೇವ ವಿಜ್ಞೇಯಾ ರಶ್ಮಿರೂಪಾ ರವೇರಿವ ॥
ಸರ್ವಸ್ಯ ಜಗತೋಽಪಿ ಸಾ ಶಕ್ತಿಃ ಕಾರಣಾತ್ಮಿಕಾ ॥

ಎಂದು ಹೇಳಲ್ಪಟ್ಟಿರುವುದು.

ವೀರಶೈವಸಿದ್ಧಾಂತದಲ್ಲಿ ಶಕ್ತಿ ಮತ್ತು ಶಕ್ತಿಮತ್ಪದಾರ್ಥಗಳಿಗೆ ಭೇದಾಭೇದಗಳು ಹೇಳಲ್ಪಟ್ಟಿರುವುವು.

ಏಷಾ ಶಕ್ತಿಃ ಶಿವಾ ಹ್ಯೇತಚ್ಛಕ್ತಿಮಾನುಚ್ಯತೇ ಶಿವಃ ।
ಶಕ್ತಿಶಕ್ತಿಮತೋರ್ಭೇದಂ ವದಂತಿ ಪರಮಾರ್ಥತಃ ॥
ಅಭೇದಂ ಚಾನುಪಶ್ಯಂತಿ ಯೋಗಿನಸ್ತತ್ತ್ವಚಿಂತಕಾಃ ॥

ಎಂಬ ಕೂರ್ಮಪುರಾಣವಾಕ್ಯಾನುಸಾರವಾಗಿ ಶಿವಶಕ್ತಿಯರಿಗೆ ಪಾರ ಮಾರ್ಥಿಕವಾಗಿ ಭೇದಾಭೇದಗಳು ಉಕ್ತವಾಗಿರುವುವು.

ವೀರಶೈವಸಿದ್ಧಾಂತದಲ್ಲಿ ಬ್ರಹ್ಮವು ನಿರ್ವಿಶೇಷವಾಗಿರದೆ ಸವಿಶೇಷ ವಾಗಿರುವುದು. ಪರಶಿವಬ್ರಹ್ಮವು ಶಕ್ತಿವಿಶಿಷ್ಟವಾದುದರಿಂದ ಸವಿಶೇಷವೆನಿಸಿ ಕೊಳ್ಳುವುದು. ಬ್ರಹ್ಮವು ಸವಿಶೇಷವಾದುದರಿಂದಲೇ ಚರಾಚರಾತ್ಮಕ ಜಗದು ತ್ಪತ್ತಿಗೆ ಕಾರಣೀಭೂತವಾಗಿರುವುದು. ಶಕ್ತಿವಿಶಿಷ್ಟಬ್ರಹ್ಮದಿಂದುತ್ಪನ್ನವಾದೀ ಜಗತ್ತೂ ಕೂಡ ಶಕ್ತಿವಿಶಿಷ್ಟವಾಗಿರುವುದು. ನಾವು ಈ ಜಗತ್ತಿನಲ್ಲಿರತಕ್ಕ ಪ್ರತಿಯೊಂದು ಪದಾರ್ಥವನ್ನೂ ಪರ್ಯಾಲೋಚಿಸಿದ್ದಾದರೆ, ಪ್ರತಿಯೊಂದು ಪದಾರ್ಥದಲ್ಲಿಯೂ ಒಂದೊಂದು ವಿಧವಾದ ಶಕ್ತಿಯಿರುವುದು ಕಂಡುಬರು ವುದು. ಪೃಥಿವಿಯಲ್ಲಿ ಧಾರಣಶಕ್ತಿಯೂ, ಜಲದಲ್ಲಿ ಆಪ್ಯಾಯನಶಕ್ತಿಯೂ, ತೇಜಸ್ಸಿನಲ್ಲಿ ಉಜ್ಜ್ವಲನಶಕ್ತಿಯೂ, ವಾಯುವಿನಲ್ಲಿ ಸ್ಪಂದನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ, ಆತ್ಮನಲ್ಲಿ ಬುದ್ಧಿಶಕ್ತಿಯೂ ಇರುವುವಷ್ಟೆ! ಅಲ್ಲದೆ ವೃಕ್ಷಾದಿಗಳಲ್ಲಿ ಜಲಾಕರ್ಷಣಾದಿಶಕ್ತಿಗಳೂ, ಅಗ್ನ್ಯಾದಿಗಳಲ್ಲಿ ದಾಹಾದಿಶಕ್ತಿಗಳೂ, ವನಸ್ಪತಿಗಳಲ್ಲಿ ಮಹಾಮಹಾರೋಗಗಳನ್ನು ಗುಣಪಡಿ ಸುವ ಶಕ್ತಿಯೂ, ಪಾದರಸದಲ್ಲಿ ತಾಮ್ರವನ್ನು ಸುವರ್ಣವನ್ನಾಗಿ ಮಾಡುವ ಶಕ್ತಿಯೂ, ವಜ್ರದಲ್ಲಿ ಶಿಲೆಯನ್ನು ಭೇದಿಸುವ ಶಕ್ತಿಯೂ, ಮಣಿಮಂತ್ರಾದಿ ಗಳಲ್ಲಿ ವಿಷಬಾಧೆಯನ್ನೂ ಭೂತಪ್ರೇತ ಪಿಶಾಚಾದಿಗಳಿಂದುಂಟಾದ ಬಾಧೆ ಯನ್ನೂ ಪರಿಹರಿಸುವ ಶಕ್ತಿಯೂ, ರೇಡಿಯೋ(ಧ್ವನ್ಯಾಕರ್ಷಕಯಂತ್ರ)ದಲ್ಲಿ ಧ್ವನಿಯನ್ನು ಆಕರ್ಷಿಸಿ ಅದನ್ನು ವಿಸ್ತಾರಗೊಳಿಸುವ ಶಕ್ತಿಯೂ, ವಿದ್ಯುತ್ತಿ ನಲ್ಲಿ ನಾನಾವಿಧ ಯಂತ್ರಚಾಲನಶಕ್ತಿಯೂ, ಸೂಜಿಗಲ್ಲಿನಲ್ಲಿ ಸೂಜಿಯನ್ನು ಆಕರ್ಷಿಸುವ ಶಕ್ತಿಯೂ, ಇರುವೆಗಳಲ್ಲಿ ವೃಕ್ಷಮೂಲಾಘ್ರಾಣನದಿಂದ ವೃಕ್ಷಾ ಗ್ರದಲ್ಲಿರುವ ಫಲವನ್ನು ಕಂಡುಹಿಡಿಯುವ ಶಕ್ತಿಯೂ, ಶಿಂಗಳಿಕಪ್ರಾಣಿಯಲ್ಲಿ ವಿಷವನ್ನು ಪರೀಕ್ಷಿಸುವ ಶಕ್ತಿಯೂ, ಒಂಟೆಯಲ್ಲಿ ಶ್ವಾಸದ್ವಾರಾ ಸರ್ಪಾ ಕರ್ಷಣಶಕ್ತಿಯೂ ಇದೇ ರೀತಿಯಾಗಿ ಬ್ರಹ್ಮಸೃಷ್ಟ್ಯಂತರ್ಗತ ಸಕಲ ಪದಾರ್ಥಗಳಲ್ಲಿಯೂ ಒಂದೊಂದು ವಿಧವಾದ ಶಕ್ತಿಯು ಇರುವುದು ಲೋಕ ದಲ್ಲಿ ಪ್ರತಿಯೊಬ್ಬರಿಗೂ ಸ್ಫುಟವಾಗಿ ಕಂಡುಬರುವುದಷ್ಟೆ! ಇದರಿಂದ ಸಕಲ ಚರಾಚರಾತ್ಮಕವಾದ ಜಗತ್ತು ಶಕ್ತಿವಿಶಿಷ್ಟವಾಗಿರುವುದೆಂದೂ, ಇಂಥ

ಶಕ್ತಿವಿಶಿಷ್ಟ ಜಗತ್ತನ್ನು ನಿರ್ಮಿಸಿದ ಬ್ರಹ್ಮವು ಸಹ ಶಕ್ತಿವಿಶಿಷ್ಟವಾದುದೆಂದೂ ಸರ್ವರಿಗೂ ಅನುಭವದಿಂದ ವೇದ್ಯವಾಗುವುದು.

## ತತ್ತ್ವಮಸಿಮಹಾವಾಕ್ಯಾರ್ಥ ವಿಚಾರ

ತತ್ತ್ವಮಸಿ ಮಹಾವಾಕ್ಯವು ಲಿಂಗಾಂಗಸಾಮರಸ್ಯವನ್ನು ಬೋಧಿಸುವದು. ಲಿಂಗ-ಅಂಗ-ಸಾಮರಸ್ಯ ಎಂಬಿವು ಕ್ರಮದಿಂದ "ತತ್ತ್ವಮಸಿ" ವಾಕ್ಯದಲ್ಲಿರುವ ತತ್-ತ್ವಂ-ಅಸಿ ಎಂಬ ಮೂರು ಪದಗಳ ಅರ್ಥವನ್ನು ಕೊಡುವವು. "ಲೀನಂ ಗಚ್ಛತೀತಿ ಲಿಂಗಂ" ಎಂಬ ವ್ಯುತ್ಪತ್ತಿಯಿಂದ ಚರಾಚರಾತ್ಮಕವಾದೀ ಪ್ರಪಂಚವು ಸರ್ವಕರ್ತೃವಾದ ಯಾವ ಬ್ರಹ್ಮದಲ್ಲಿಯೇ ತಿರೋಹಿತವಾಗುವುದೋ ಅದುವೇ ಲಿಂಗವೆನಿಸಿಕೊಳ್ಳುತ್ತದೆ. ಈ ವಿಷಯದಲ್ಲಿ ಶಿಷ್ಯನು ಗುರುವಿನ ಬಳಿಗೆ ಹೋಗಿ ನಾನಾರೆಂದು ಪ್ರಾರ್ಥಿಸಲು, ಗುರುವು ಆತನ ನಿಜಸ್ವರೂಪವನ್ನು ತಿಳಿಯಪಡಿಸುವುದಕ್ಕಾಗಿ ಮಾಡಬೇಕಾದ ಅಂಗಲಿಂಗ ಸಂಸ್ಕಾರರೂಪವಾದ ಶಿವದೀಕ್ಷೆಯನ್ನು ಮಾಡುವುದಕ್ಕಾರಂಭಿಸಿ ವೇಧಾದೀಕ್ಷೆಯನ್ನೂ ಮನುದೀಕ್ಷೆಯನ್ನೂ ಕ್ರಿಯಾದೀಕ್ಷೆಯನ್ನೂ ಮಾಡುವನು. ಗುರುವು ಹಸ್ತಮಸ್ತಕಸಂಯೋಗವನ್ನು ಮಾಡಿ ಯೋಗಾಂಗವೆಂಬ ಬೇರೊಂದು ಹೆಸರುಳ್ಳ ಕಾರಣಶರೀರದಲ್ಲಿ ವಾಸವಾಗಿರುವ ಜೀವನಿಗೆ ಅತಿಸೂಕ್ಷ್ಮವಾದ ಭಾವಲಿಂಗವನ್ನು ಸಂಬಂಧಿಸುವುದೇ ವೇಧಾದೀಕ್ಷೆಯೆನಿಸುತ್ತದೆ. ಭೋಗಾಂಗವೆಂಬ ಬೇರೊಂದು ಹೆಸರುಳ್ಳ ಸೂಕ್ಷ್ಮಶರೀರದಲ್ಲಿ ವಿಹರಿಸುತ್ತಿರುವ ಜೀವನಿಗೆ ಪ್ರಾಣಲಿಂಗವನ್ನು ಸಂಬಂಧಿಸುವುದೇ ಮನುದೀಕ್ಷೆಯೆನಿಸುತ್ತದೆ. ತ್ಯಾಗವೆಂಬ ಬೇರೊಂದು ಹೆಸರುಳ್ಳ ಸ್ಥೂಲಶರೀರದಲ್ಲಿ ವಿಹರಿಸುವ ಜೀವನಿಗೆ ಇಷ್ಟಲಿಂಗವನ್ನು ಸಂಯೋಜಿಸುವುದೇ ಕ್ರಿಯಾದೀಕ್ಷೆಯೆನಿಸುತ್ತದೆ. ಹೀಗೆ ಮೂರು ವಿಧವಾದ ದೀಕ್ಷೆಗಳನ್ನು ಮಾಡಿ, ಮೂರು ದೇಹಗಳಿಗೆ ಲಿಂಗವನ್ನು ಧರಿಸಿದ ಮೇಲೆ ಕ್ರಮದಿಂದ ಆ ಜೀವರನ್ನು ಆವರಿಸಿರುವ ಅನಾದಿ ಮಲಗಳು ನಷ್ಟವಾಗುವವು.

ತುಷಕಂಬುಕಕಿಂಶಾರುಕಮುಕ್ತಂ ಬೀಜಂ ಯಥಾಂಕುರಂ ನಕುರುತೇ ।
ನೈವ ತಥಾಣವಮಾಯಾಕರ್ಮವಿಮುಕ್ತೋಭವಾಂಕುರಂ ಹ್ಯಾತ್ಮಾ ॥

ಕಿಂಶಾರುಕ ತುಷ ಕಂಬುಕ ಎಂದು ಮೂರು ವಿಧವಾದ ಹೊಟ್ಟು ಅಕ್ಕಿಯ ಮೇಲಿರುತ್ತದೆ. ಇವುಗಳಲ್ಲಿ ಬಹುಸೂಕ್ಷ್ಮರೂಪದಿಂದ ಹತ್ತಿರುವ ಹೊಟ್ಟಿಗೆ ಕಂಬುಕವೆಂದು ಹೆಸರು. ಅದರ ಮೇಲೆ ಆವರಿಸಿರುವ ಸ್ವಲ್ಪ ಒರಟಾದ ಹೊಟ್ಟಿಗೆ ತುಷವೆಂದು ಹೆಸರು. ಮೇಲೆ ದಪ್ಪವಾಗಿರುವ ಹೊಟ್ಟಿಗೆ ಕಿಂಶಾರುಕವೆಂದು ಹೆಸರು. ಈ ಮೂರು ಪದರುಗಳು ಅಕ್ಕಿಯನ್ನು ಆವರಿಸಿರುವವರೆಗೂ ಆ ಅಕ್ಕಿಯಲ್ಲಿ ಅಂಕುರಿಸುವ ಶಕ್ತಿಯು ಕಂಡು ಬರುತ್ತದೆ. ಅವು ಇಲ್ಲದಿದ್ದರೆ ಅಂಕುರೋತ್ಪತ್ತಿಯಾಗುವದಿಲ್ಲ. ಅದರಂತೆ, ಆತ್ಮನನ್ನು ಆಣವಮಾಯೀಯ ಕಾರ್ಮಿಕ ಎಂಬ ಮೂರು ಮಲಗಳು ಅನಾದಿಕಾಲದಿಂದ ಆವರಿಸಿರುತ್ತವೆ. ಈ ಮಲಾವೃತವಾದ ಜೀವಾತ್ಮನು ಪುಣ್ಯಪಾಪಾನುಸಾರವಾಗಿ ಅನೇಕ ಜನ್ಮಗಳನ್ನು ಧರಿಸುತ್ತ ಬಂದಿರುವನು. ಯಾವಾಗ ಈ ಮೂರು ಮಲಗಳು ನಾಶಹೊಂದುವವೋ ಅಂದೇ ಆತ್ಮನು ಪರಿಶುದ್ಧನಾಗಿ ಬ್ರಹ್ಮದ ಸ್ವರೂಪವನ್ನೇ ಪಡೆಯುತ್ತಾನೆ. ಮುಂದೆ ಅವನಿಗೆ ಸಂಸಾರಸಂಬಂಧವೇ ಇರುವುದಿಲ್ಲ.

"ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶತ್"॥ ಎಂಬ ಆಗಮಪ್ರಮಾಣಾನುಸಾರವಾಗಿ ವೇಧಾದೀಕ್ಷೆಯಿಂದ ಕಾರಣಶರೀರವೃತ್ತಿಯಾದ ಆಣವಮಲವೂ ಮನುದೀಕ್ಷೆಯಿಂದ ಸೂಕ್ಷ್ಮಶರೀರವೃತ್ತಿಯಾದ ಮಾಯೀಯ ಮಲವೂ ಕ್ರಿಯಾದೀಕ್ಷೆಯಿಂದ ಕಾರ್ಮಿಕಮಲವೂ ನಾಶವಾಗುತ್ತವೆ. ಹೀಗೆ ಶಿಷ್ಯನ ಆತ್ಮವು ಪರಿಶುದ್ಧಿಗೊಂಡ ಮೇಲೆ ಗುರುವು "ತತ್ತ್ವಮಸಿ" ಎಂಬ ವೇದದ ಮಹಾವಾಕ್ಯಾಧಾರದಿಂದ ಲಿಂಗಾಂಗಸಾಮರಸ್ಯವನ್ನುಪದೇಶಮಾಡುವರೀತಿಯನ್ನು ಪರಿಶೀಲಿಸಿದರೆ ತತ್ತ್ವಮಸಿ ಮಹಾವಾಕ್ಯಾರ್ಥದ ರಹಸ್ಯವು ಸ್ಪಷ್ಟವಾಗುತ್ತದೆ. "ಅಂ ಗಚ್ಛತೀತಿ ಅಂಗಂ" ಅಂದರೆ ಪರಮಾತ್ಮನನ್ನು ಸೇರುವ ಸ್ವಭಾವವುಳ್ಳದಾದುದರಿಂದ ಜೀವನಿಗೆ ಅಂಗವೆಂದು ಹೆಸರು. ಲಿಂಗ, ಅಂಗ ಎಂಬ ಶಬ್ದಗಳು ಕ್ರಮದಿಂದ ತತ್-ತ್ವಂ ಪದವಾಚ್ಯ ಬ್ರಹ್ಮ ಜೀವ ಎಂಬ ಅರ್ಥವನ್ನೂ ಸಾಮರಸ್ಯವೆಂಬ ಪದವು ಅಸಿ ಪದವಾಚ್ಯವಾದ ಐಕ್ಯವನ್ನೂ ಬೋಧಿಸುತ್ತವೆ. ಈ ವಿಷಯದಲ್ಲಿ—

ಲೀನಂ ಗಚ್ಛತಿ ಯಸ್ಮಿನ್ ಸಾ ಮಾಯಾ ದುರ್ಘಟಕಾರಿಣೀ।
ತಲ್ಲಿಂಗಮಿತಿ ಸನ್ಮಾತ್ರಂ ರೂಪ್ಯತೇ ಪಾರಮಾರ್ಥಿಕೈಃ।

ಅಮಿತಿ ಬ್ರಹ್ಮ ಸನ್ಮಾತ್ರಂ ಗಚ್ಛತೀತ್ಯಂಗಮುಚ್ಯತೆ ।
ರೂಪ್ಯತೇಽಂಗಮಿತಿ ಪ್ರಾಜ್ಞೈಃ ಅಂಗತತ್ವವಿಚಿಂತಕೈಃ ॥
ತಸ್ಮಾದೇವಾಂಗ ರೂಪೋಽಸೌ ಜೀವಸ್ಸಂಸಾರವೃತ್ತಿಭಾಕ್ ॥

ಇತ್ಯಾದ್ಯನಂತಪ್ರಮಾಣಗಳು ಜಾಗರೂಕಗಳಾಗಿರುತ್ತವೆ. ಅಂಗವೆಂದರೆ ಶರೀರವೆಂದರ್ಥವಾಗುವುದಲ್ಲದೆ ಆ ಶರೀರದಲ್ಲಿರುವ ಜೀವವೆಂದು ಅರ್ಥವಾಗದಿರುವುದರಿಂದ ಸ್ಥೂಲವಾದ ಅಂಗಕ್ಕೂ ಸೂಕ್ಷ್ಮವಾದ ಲಿಂಗಕ್ಕೂ ಏಕತ್ವವೆಂಬುದು ಸಿದ್ಧಿಸಲಾರದೆಂಬ ಶಂಕೆಯುತ್ಪನ್ನವಾಗುವುದೆಂದರೆ ಅದು ಸಮಂಜಸವಾದುದಲ್ಲ. ಏಕೆಂದರೆ—

ಯ ಏಷ ಆತ್ಮನಿ ತಿಷ್ಠನ್ನಾತ್ಮಾನಮಂತರೋ ಯಮಯತಿ ಯಸ್ಯ ಚಾತ್ಮಾ ಶರೀರಂ ।

ಇತ್ಯಾದಿ ಅಂತರ್ಯಾಮಿ ಬ್ರಾಹ್ಮಣದಲ್ಲಿ ಪೃಥಿವಿ ಮೊದಲುಮಾಡಿಕೊಂಡು ಜೀವಾತ್ಮಪರ್ಯಂತವಾಗಿರುವ ಸಕಲವಸ್ತುಗಳೂ ಲಿಂಗಶಬ್ದವಾಚ್ಯವಾದ ಬ್ರಹ್ಮದ ಶರೀರವಾಗಿರುವುದರಿಂದ ಜೀವನೂ ಸಹ ಪರಮಾತ್ಮನ ಅಂಗವೆಂದು ಸಿದ್ಧವಾಗುವುದು. ಆದುದರಿಂದ "ತತ್ತ್ವಮಸಿ" ಎಂಬ ಮಹಾವಾಕ್ಯವು ಲಿಂಗಾಂಗಸಾಮರಸ್ಯವನ್ನು ಬೋಧಿಸುವುದೆಂಬುದನ್ನು ತಿಳಿದು ಅದರಂತೆ ಆಚರಿಸಿ ಕೈವಲ್ಯಸುಖವನ್ನು ಅನುಭವಿಸುವುದು ವೀರಶೈವರ ಮುಖ್ಯ ಧರ್ಮವಾಗಿದೆ.

ಶ್ರೀಪರಮೇಶ್ವರನು ಲೋಕೋದ್ಧಾರಕ್ಕಾಗಿ ಅನೇಕ ಶಾಸ್ತ್ರಗಳನ್ನು ನಿರ್ಮಿಸಿರುವನು. ಅವುಗಳಲ್ಲಿ ವೇದಗಳೂ ಶಿವಾಗಮಗಳೂ ಮುಖ್ಯವಾಗಿರುವವು. ವೀರಶೈವ ಮತದ ವಿಷಯವು ವೇದಗಳಲ್ಲಿಯೂ ಶಿವಾಗಮಗಳಲ್ಲಿಯೂ ವಿಶೇಷವಾಗಿ ವರ್ಣಿತವಾಗಿರುವುದು. ಅದರಲ್ಲಿಯೂ ಶಿವಾಗಮಗಳಲ್ಲಂತೂ ಈ ಮತದ ಮಹಿಮೆಯು ಅಪಾರವಾಗಿರುವುದು. ಆಗಮಗಳು ಕಾಮಿಕ-ಯೋಗಜ-ಚಿಂತ್ಯ-ಕಾರಣ-ಅಜಿತ-ದೀಪ್ತ-ಸೂಕ್ಷ್ಮ-ಸಹಸ್ರ-ಅಂಶುಮತ್-ಸುಪ್ರಭೇದ-ವಿಜಯ-ನಿಃಶ್ವಾಸ-ಸ್ವಾಯಂಭುವ-ಅನಲ-ವೀರ-ರೌರವ ಮಕುಟ-ವಿಮಲ-ಚಂದ್ರಜ್ಞಾನ-ಬಿಂಬ-ಪ್ರೋದ್ಗಿತ-ಲಲಿತ-ಸಿದ್ಧ-ಸಂತಾನ ಸರ್ವೋಕ್ತ -ಲಲಿತ-ಸಿದ್ಧ- ಸಂತಾನ-ಸರ್ವೋಕ್ತ- ಪಾರಮೇಶ್ವರ - ಕಿರಣ ವಾತುಲ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುತ್ತವೆ.

ಆಗಮಾ ಬಹುಧಾ ಪ್ರೋಕ್ತಾ ಶೈವೇನ ಪರಮಾತ್ಮನಾ ।
ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ ॥

ತೇಷು ಶೈವಂ ಚತುರ್ಭೇದಂ ತಂತ್ರಂ ಸರ್ವವಿನಿಶ್ಚಿತಂ ।
ವಾಮಂ ಚಂ ದಕ್ಷಿಣಂ ಚೈವ ಮಿಶ್ರಂ ಸಿದ್ಧಾಂತಸಂಜ್ಞಕಂ ॥

ಶಕ್ತಿಪ್ರದಾನಂ ವಾಮಾಖ್ಯಂ ದಕ್ಷಿಣಂ ಭೈರವಾತ್ಮಕಂ ।
ಸಪ್ತಮಾತೃಪರಂ ಮಿಶ್ರ ಸಿದ್ಧಾಂತಂ ವೇದಸಮ್ಮತಂ ॥

ವೇದಧರ್ಮಾಭಿಧಾಯಿತ್ವಾತ್ಸಿದ್ಧಾಂತಾಖ್ಯಶ್ಶಿವಾಗಮಃ ।
ವೇದಬಾಹ್ಯವಿರೋಧಿತ್ವಾವೇದಸಮ್ಮತ ಉಚ್ಯತೇ ॥

ವೇದ ಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್ ।
ಪ್ರಾಮಾಣ್ಯಂ ಸದೃಶಂ ಯಜ್ಞೇಯಂ ಪಂಡಿತೈರೇತಯೋಸ್ಸದಾ ॥

ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ ॥

(ಸಿ. ಶಿ. ಪರಿ. ೫)

ಶಿವಾಗಮಗಳು ಶಿವಕರ್ತೃಕಗಳಾಗಿರುವುದರಿಂದ ವೇದಗಳಂತೆ ಸ್ವತಂತ್ರ ಪ್ರಮಾಣಗಳಾಗಿರುತ್ತವೆ. ಆಗಮಗಳು, ಶೈವ, ಪಾಶುಪತ, ಸೋಮ, ಲಾಕುಲ ಇತ್ಯಾದಿ ಭೇದಗಳನ್ನು ಪಡೆದು ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತ ಎಂದು ನಾಲ್ಕು ಭಾಗಗಳಾಗಿರುತ್ತವೆ. ಇವುಗಳಲ್ಲಿ ಶಕ್ತಿಪ್ರಧಾನವಾದುದೇ ವಾಮತಂತ್ರವು. ಭೈರವ ಪರವಾದುದೇ ದಕ್ಷಿಣ ತಂತ್ರವು. ಸಪ್ತಮಾತೃಕಾ ಪರವಾದುದೇ ಮಿಶ್ರತಂತ್ರವು. ವೇದಸಮ್ಮತವಾದುದೇ ಸಿದ್ಧಾಂತ ತಂತ್ರವು. ಈ ಸಿದ್ಧಾಂತತಂತ್ರವು ಆದ್ಯಂತವಾಗಿ ವೇದಾಭಿಪ್ರಾಯವನ್ನೇ ಪ್ರತಿಪಾದಿಸುತ್ತಿರುವುದರಿಂದ ವೇದಸಿದ್ಧಾಂತಗಳೆರಡೂ ಏಕಾಭಿಪ್ರಾಯವುಳ್ಳವುಗಳಾಗಿವೆ. ಉಳಿದ ವಾಮ-ದಕ್ಷಿಣ-ಮಿಶ್ರ-ತಂತ್ರಗಳು ವೇದವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವುದರಿಂದ ಪ್ರಮಾಣಭೂತವೆನಿಸುವುದಿಲ್ಲ.

ಶಿವಾಗಮಗಳು ಪೂರ್ವಭಾಗ ಉತ್ತರಭಾಗಗಳೆಂಬ ಎರಡು ಭಾಗಗಳಿಂದೊಡಗೂಡಿರುತ್ತವೆ. ಪೂರ್ವಭಾಗದಲ್ಲೆಲ್ಲ ಸಾಮಾನ್ಯವಾಗಿ ಶೈವವಿಭಾಗದ ರಹಸ್ಯವೆಲ್ಲ ಹೇಳಲ್ಪಟ್ಟಿರುತ್ತದೆ. ಉತ್ತರ ಭಾಗದಲ್ಲೆಲ್ಲ ಶಿವಲಿಂಗಧಾರಣ ರೂಪವಾದ ವೀರಶೈವತತ್ತ್ವವು ಹೇಳಲ್ಪಟ್ಟಿರುತ್ತದೆ. ಶ್ರೀಜಗದ್ಗುರುರೇಣುಕಾದಿ ಪಂಚಾಚಾರ್ಯರು ಕಾಮಿಕಾದಿ ವಾತುಲಾಂತವಾದ ಶಿವಾಗಮಗಳ

ಉತ್ಕೃಷ್ಟತೆಯನ್ನೂ ಶಿವಾಗಮೋಕ್ತವಾದ ಶಿವಲಿಂಗಧಾರಣ ಪ್ರಾಶಸ್ತ್ಯವನ್ನೂ ಚೆನ್ನಾಗಿ ಬೋಧಿಸಿರುತ್ತಾರೆ.

ವಿದ್ಯಾಯಾಂ ಶಿವರೂಪಾಯಾಂ ವಿಶೇಷಾದ್ರಮಣಂ ಯತಃ ॥
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿಸ್ಮೃತಾಃ ॥
ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥

ಶಿವರೂಪವಾದ ವೇದಾಂತ ವಿದ್ಯೆಯಲ್ಲಿ ಅಹೋರಾತ್ರಿ ವಿಹರಿಸುವವರೂ, ಲಿಂಗಧಾರಣರೂಪವಾದ ಶಿವಜೀವೈಕ್ಯಬೋಧಕ ಬ್ರಹ್ಮವಿದ್ಯೆಯಲ್ಲಿ ರಮಿಸುವವರೂ ವೀರಶೈವರೆನಿಸಿಕೊಳ್ಳುವರೆಂದು ಶ್ರೀರೇಣುಕಭಗವತ್ಪಾದರು ವೀರಶೈವ ಶಬ್ದದ ನಿರ್ವಚನವನ್ನು ಮಾಡಿರುತ್ತಾರೆ.

ಶ್ರೌತಾಶ್ರೌತವಿಭೇದೇನ ದ್ವಿಧಾ ಲಿಂಗಸ್ಯ ಧಾರಣಂ ।
ಷಡಧ್ವಶಿದ್ಧಿಲಿಂಗಂ ತು ಶ್ರೌತಮಿತ್ಯಭಿಧೀಯತೇ ॥
ಅಶ್ರೌತಂ ತಪ್ತಲಿಂಗಾದಿಧಾರಣಂ ಪ್ರೋಚ್ಯತೇ ಶಿವೇ ॥
ಶ್ರೌತಾನಾಂ ವೀರಶೈವಾನಾಂ ವೇದಮಾರ್ಗೈಕವರ್ತಿನಾಂ ।
ತಪ್ತಲಿಂಗಪರಿಗ್ರಾಹೇ ಪ್ರತ್ಯವಾಯೋ ಮಹಾನ್ ಭವೇತ್ ॥

ಶಿವಲಿಂಗಧಾರಣವು ಶ್ರೌತಲಿಂಗಧಾರಣವೆಂತಲೂ ಅಶ್ರೌತಲಿಂಗಧಾರಣವೆಂತಲೂ ಎರಡು ಪ್ರಕಾರವಾಗಿರುವುದು. ಷಡಧ್ವಶೋಧನಪೂರ್ವಕವಾದ ಲಿಂಗಧಾರಣವು ಶ್ರೌತಲಿಂಗಧಾರಣವೆನಿಸುತ್ತದೆ. ತಪ್ತಲಿಂಗಮುದ್ರಾಧಾರಣವು ಅಶ್ರೌತಲಿಂಗಧಾರಣವೆನಿಸುತ್ತದೆ. ವೀರಶೈವರು ಕೇವಲ ವೇದಮಾರ್ಗದಲ್ಲಿ ನಿರತರಾಗಿರುವುದರಿಂದ ಶ್ರೌತರೆನಿಸಿಕೊಳ್ಳುತ್ತಾರೆ. ಪರಮವೈದಿಕರಾದ ವೀರಶೈವರು ತಪ್ತಲಿಂಗಧಾರಣವನ್ನು ಅಂಗೀಕಾರಮಾಡಿಕೊಳ್ಳಬಾರದೆಂಬುದೇ ಶಾಸ್ತ್ರಸಿದ್ಧಾಂತವು.

ಧಾರಯೇದ್ಯಸ್ತು ಹಸ್ತೇನ ಲಿಂಗಾಕಾರಂ ಶಿವಂಸದಾ ।
ತಸ್ಯ ಹಸ್ತಸ್ಥಿತಂ ವಿದ್ಧಿ ಮತ್ಪದಂ ಸಂಪದಾಂ ಪದಂ ॥

ಓ ದೇವಿಯೇ ! ಲಿಂಗಾಕಾರವಾದ ಪರಶಿವನನ್ನು ಯಾವಾಗಲೂ ಯಾರು ತಮ್ಮ ಹಸ್ತದಲ್ಲಿ ಧರಿಸಿರುತ್ತಾರೆಯೋ, ಅವರಿಗೆ ನನ್ನ ಸ್ಥಾನವು ಕರಗತವಾದುದೆಂದು ಪರಶಿವನು ಲಿಂಗಧಾರಣದ ಮಹಿಮೆಯನ್ನು ಬೋಧಿಸಿರುವನು.

ಲಿಂಗಸ್ಯ ಧಾರಣಂ ಯಸ್ಯ ಸ್ಥೂಲದೇಹೇ ನ ವಿದ್ಯತೇ ।
ತದ್ದೇಹಂ ನಿಷ್ಫಲಂ ಜ್ಞೇಯಂ ಜೀವತ್ಯಕ್ತಶರೀರವತ್ ॥
ತಸ್ಮಾತ್ತದ್ಧಾರಣಂ ಪ್ರೋಕ್ತಂ ಯಾವ ಜೀವಾಗ್ನಿಹೋತ್ರವತ್ ।
ಯಥಾ ಸ್ಮಶಾನಗಂ ಕಾಷ್ಠಮನರ್ಹಂ ಸರ್ವಕರ್ಮಸು ।
ತಥಾ ಲಿಂಗವಿಹೀನಸ್ತು ಸರ್ವಕರ್ಮಬಹಿಷ್ಕೃತಃ ॥

ವೀರಶೈವ ಮತದಲ್ಲಿ ಹುಟ್ಟಿ ಯಾವನು ತನ್ನ ಸ್ಥೂಲದೇಹದಲ್ಲಿ ಇಷ್ಟ ಲಿಂಗವನ್ನು ಧರಿಸಿರುವುದಿಲ್ಲವೋ ಅಂಥವನ ದೇಹವು ಜೀವಶೂನ್ಯವಾದ ಹೆಣದಂತೆ ನಿಷ್ಫಲವಾದುದೆಂದು ತಿಳಿಯಬೇಕು. ತನ್ನ ಜೀವವಿರುವವರೆಗೂ ಅಗ್ನಿಹೋತ್ರವಿನಂತೆ ಪ್ರತಿದಿವಸವೂ ತಪ್ಪದೆ ಲಿಂಗವನ್ನು ಧರಿಸಿ ಪೂಜಿಸುತ್ತಿರಬೇಕು. ಸ್ಮಶಾನದಲ್ಲಿ ಬಿದ್ದಿರುವ ಕಟ್ಟಿಗೆಯು ಪಾಕಾದಿಕರ್ಮಗಳಿಗೆ ಹೇಗೆ ಯೋಗ್ಯವಲ್ಲವೋ, ಹಾಗೆಯೇ ಲಿಂಗವಿಲ್ಲದೆ ವೀರಶೈವನೆಂದು ಹೇಳಿಸಿಕೊಳ್ಳುವವನು ಯಾವ ಕೆಲಸಕ್ಕೂ ಯೋಗ್ಯನಾಗುವುದಿಲ್ಲವೆಂದು ಕಾಮಿಕಾದ್ಯಾಗಮಗಳು ವೀರಶೈವರ ಮುಖ್ಯ ತತ್ತ್ವವಾದ ಶಿವಲಿಂಗಧಾರಣದ ಪ್ರಾಶಸ್ತ್ಯವನ್ನು ಮುಕ್ತಕಂಠದಿಂದ ಉದ್ಘೋಷಿಸುತ್ತಿರುವುವು.

## ಪಂಡಿತರ ಸಂಚಾರವಿಜಯ

ವೇ॥ ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರು, ಬೇಲೂರು ಕಲ್ಯಾಣ ಕಟ್ಟಿಮನೆ ಬೃಹನ್ಮಠಾಧ್ಯಕ್ಷರಾದ ಶ್ರೀಗುರುಲಿಂಗಶಿವಾಚಾರ್ಯರು ಮತ್ತು ನಿಜಾಂರಾಜ್ಯ ಪಾಯಿಗಾಇಲಾಖಾ ದುಬಲಗುಂಡಿ ಗ್ರಾಮದ ಶ್ರೀಮಂತ ಶರಣಪ್ಪಣ್ಣ ಫತ್ತೇಪುರ ಇವರ ಪ್ರಾರ್ಥನೆಯ ಮೇರೆಗೆ ಮೈಸೂರು ರಾಜಧಾನಿಯಿಂದ ರೇವಗಿ ಕ್ಷೇತ್ರಕ್ಕೆ ತಾ॥ ೧೧-೩-೯೪೧ ನೆಯ ದಿವಸ ಆಗಮಿಸಿದರು. ಪಂಡಿತರು ಮಾರ್ಚಿ ೮ ನೆಯ ತಾರೀಖಿನ ದಿವಸ ಮೈಸೂರು ರಾಜಧಾನಿಯನ್ನು ಬಿಟ್ಟು ಬೆಂಗಳೂರು, ಕುಂದಗೋಳ, ಹುಬ್ಬಳ್ಳಿ, ಗದಗ ನಗರಗಳ ಮಾರ್ಗವಾಗಿ ಹೋಟಗಿ ಜಂಕ್ಷನ್ನಿಗೆ ೧೧ ನೆಯ ತಾರೀಖು ಬೆಳಗಿನ ಜಾವ ೪-೩೦ ಘಂಟೆಗೆ ಆಗಮಿಸಿದರು. ಅಲ್ಲಿ ಸೊಲ್ಲಾಪುರದಿಂದ ಆಗಮಿಸಿದ್ದ ಬಾರ್ಶಿ ಶ್ರೀಪರಾಂಡಕರ್ ಸ್ವಾಮಿಗಳವರು, ಜೈನಾಪುರಸ್ವಾಮಿಗಳವರು, ಜೇವುರಗಿ ಸ್ವಾಮಿಗಳವರು, ಹೊಟಗಿ ಪಂಚಾಚಾರ್ಯ ಭಜನಾಮಂಡಳಿಯವರು

ಪಂಡಿತರಿಗೆ ಅದ್ಭುತವಾದ ಸ್ವಾಗತವನ್ನಿತ್ತರು. ಹೋಟಗಿ ಭಜನಾಮಂಡ ಳಿಯವರು ಕರ್ಣಾನಂದಕರವಾದ ಜಗದಾಚಾರ್ಯ ಸ್ತೋತ್ರಗಳನ್ನು ಅರ್ಧ ಘಂಟೆಯವರೆಗೆ ಹಾಡಿ ಸರ್ವರಿಗೂ ಪರಮಾನಂದವನ್ನುಂಟುಮಾಡಿದರು. ಪಂಡಿತರು ಅಲ್ಲಿಂದ ೬ ಘಂಟೆಗೆ ಪ್ಯಾಸಂಜರ್ ರೈಲುಮೂಲಕ ಪ್ರಯಾಣ ಮಾಡಿ ಸೊಲ್ಲಾಪುರದ ಸ್ಟೇಷನ್ನಿನಲ್ಲಿಳಿಯುತ್ತಲೇ, ಸೊಲ್ಲಾಪುರದ ಅಸಂಖ್ಯ ಜನ ವೀರಶೈವರು ಅಭೂತ ಪೂರ್ವವಾದ ಸ್ವಾಗತವನ್ನು ನೀಡಿದರು. ೩೦-೪೦ ಸಂಘಗಳ ವತಿಯಿಂದ ಪುಷ್ಪಹಾರಗಳು ಸಮರ್ಪಿಸಲ್ಪಟ್ಟವು. ಆ ಸಮಯ ದಲ್ಲಿ ಜಗದಾಚಾರ್ಯರ ಜಯಘೋಷವೂ, ಪಂಡಿತರ ವಿಷಯಕವಾದ ಜಯ ಘೋಷವೂ ದಶದಿಕ್ಕುಗಳನ್ನು ವ್ಯಾಪಿಸಿದ್ದಿತು. ಸ್ಟೇಷನ್ನಿನ ಹೊರಭಾಗದಲ್ಲಿ ಬರುತ್ತಲೇ ಪ್ರಚಂಡ ಜನಸ್ತೋಮದ ಮಧ್ಯದಲ್ಲಿ ಪಂಡಿತರ (ಫೋಟೋ) ಭಾವಚಿತ್ರವು ತೆಗೆದುಕೊಳ್ಳಲ್ಪಟ್ಟಿತು. ಬಳಿಕ ಪಂಡಿತರು ಸೊಲ್ಲಾಪುರದ ಶ್ರೀಮನ್ಮಥಸ್ವಾಮಿಮಠದಲ್ಲಿ ಅನುಷ್ಠಾನಕ್ಕೆ ಕುಳಿತಿರುವ ಹೋಟಗಿ ಬಾಲ ತಪಸ್ವಿ ಶ್ರೀ ಪಟ್ಟದಸ್ವಾಮಿಗಳವರಲ್ಲಿಗೆ ಪ್ರಯಾಣಬೆಳಸಿ ಮುಂದಿನ ಕಾರ್ಯ ಕ್ರಮವನ್ನು ನಿಶ್ಚೈಸಿದರು. ಮನ್ಮಥಸ್ವಾಮಿಮಠದಲ್ಲಿ ಅಸಂಖ್ಯಜನರು ಸೇರಿ ದ್ದರು. ಪಂಡಿತರ ಮತ್ತು ಹೋಟಗಿ ಶ್ರೀಗಳವರ ಸಾನ್ನಿಧ್ಯದಲ್ಲಿ ಜನಸ್ತೋ ಮದ ಫೋಟೋ ತೆಗೆಯಲ್ಪಟ್ಟಿತು. ಕಾರ್ಯಕ್ರಮವು ಮುಗಿಯುವವರೆಗೂ ಪಂಡಿತರ ಜಯಘೋಷವು ಒಂದೇಸಮನೆ ನಡೆಯುತ್ತಿತ್ತು. ಅಲ್ಲಿಂದ ಸೊಲ್ಲಾಪುರದ ವೀರಶೈವರಲ್ಲಿ ಅತ್ಯಂತ ಪ್ರಮುಖರೂ ಅಸಾಧಾರಣ ಗುರು ಭಕ್ತಿ ಸಂಪನ್ನರೂ ಆದ ಶ್ರೀಮಂತ ಮಲ್ಲಿಕಾರ್ಜುನಪ್ಪ ಗಂಭೀರೆ ಇವರಲ್ಲಿಗೆ ದಯಮಾಡಿಸಿದರು. ಅಲ್ಲಿ ಶಿವಾರ್ಚನಾದಿಗಳನ್ನು ತೀರಿಸಿಕೊಂಡು ಅದೇ ದಿವಸ ಪ್ರಾತಃಕಾಲ ೧೦ ಘಂಟೆಯ ಗಾಡಿಗೆ ಗುಲ್ಬರ್ಗಾಕ್ಕೆ ಪ್ರಯಾಣಮಾಡಿ ದರು. ಪಂಡಿತರ ಸಂಗಡ ಸೊಲ್ಲಾಪುರದಿಂದ ವೇ॥ ಪಂ॥ ಶ್ರೀಜಗದೀಶಶಾಸ್ತ್ರಿ ಗಳವರೂ ವೇ॥ ಪಂ॥ ಮಣೂರು ಮಲ್ಲಿಕಾರ್ಜುನಶಾಸ್ತ್ರಿಗಳವರೂ ಅನೇಕ ಜನ ಪಟ್ಟಚರಮೂರ್ತಿಸ್ವಾಮಿಗಳವರೂ ಪಾಠಶಾಲೆಯ ವಿದ್ಯಾರ್ಥಿಗಳೂ, ಬಾಲಿಕೆಯರೂ ಪ್ರಯಾಣಮಾಡಿದರು. ಗುಲ್ಬರ್ಗಾಸ್ಟೇಷನ್ನಿನಲ್ಲಿ ಪಂಡಿತರು ಇಳಿಯುತ್ತಲೇ ಶ್ರೀಮಂತಶರಣಪ್ಪಣ್ಣ ಛತ್ರೇಪೂರ ದೊರೆಗಳು ಪುಷ್ಪಹಾರ ವನ್ನು ಸಮರ್ಪಿಸಿದರು. ಅಲ್ಲಿಂದ ಪಂಡಿತರು ಸದರಿ ದೊರೆಗಳ ಮೋಟಾರ್ ಕಾರಿನಲ್ಲಿ ಶ್ರೀಅಪ್ಪಾಸಾಧು ಶರಣಬಸವೇಶ್ವರ ಇವರ ವಾಡೆಗೆ ಆಗಮಿಸಿದರು.

ಅಲ್ಲಿ ಒಂದೆರಡು ಘಂಟೆಗಳ ಕಾಲ ವಿಶ್ರಾಂತಿಯನ್ನು ಪಡೆದು ಸರ್ವಮಂಡಳಿಯೊಡನೆ ರೇವಗಿ ಕ್ಷೇತ್ರಕ್ಕೆ ಪ್ರಯಾಣ ಬೆಳೆಯಿಸಿದರು.

ಶ್ರೀರೇವಣಸಿದ್ಧೇಶ್ವರನ ಆವಾಸಭೂಮಿಯಾದ ಶ್ರೀರೇವಣಗಿರಿ ಕ್ಷೇತ್ರದ ಮಾರ್ಗವು ಬೆಟ್ಟಗಳ ಮಧ್ಯದಲ್ಲಿ ಬಹುದುರ್ಗಮವಾಗಿದ್ದರೂ ಸರ್ವರೂ ಅತ್ಯಾನಂದದಿಂದ ಆ ದುರ್ಗಮ ಪ್ರದೇಶವನ್ನು ದಾಟಿ ಶ್ರೀ ಸ್ವಾಮಿಯ ದೇವಸ್ಥಾನಕ್ಕೆ ಸಾಯಂಕಾಲ ೬ ಘಂಟೆಗೆ ತಲಪಿದರು. ಈ ಪವಿತ್ರಕ್ಷೇತ್ರಕ್ಕೆ ಪಂಡಿತರು ಆಗಮಿಸುವರೆಂಬ ಮಂಗಲವಾರ್ತೆಯನ್ನು ಕೇಳಿ ನಿಜಾಮ ಇಲಾಖೆಯ ಸಮಸ್ತ ಭಾಗಗಳಿಂದಲೂ ಅಸಂಖ್ಯವೀರಶೈವರು ಆಗಮಿಸಿದ್ದರು. ರಾತ್ರಿಯೆಲ್ಲವೂ ಜನರ ಆಗಮನದಿಂದಲೂ ಜಗದಾಚಾರ್ಯರ ಜಯಜಯಕಾರಗಳಿಂದಲೂ ಯುಕ್ತವಾಗಿ ವಿಲಕ್ಷಣವಾದ ಶೋಭೆಯಿಂದ ಕೂಡಿತ್ತು.

ಈ ಮಹಾ ಕಾರ್ಯಕ್ಕಾಗಿ ಆಗಮಿಸಿದ್ದ ಅಗಣಿತಜನಸಮುದಾಯಕ್ಕೆಲ್ಲ ಬೇಲೂರು ಶ್ರೀಗಳವರು ಭೋಜನಾದಿಗಳ ಏರ್ಪಾಡನ್ನು ಬಹು ತೃಪ್ತಿಕರವಾಗಿ ಮಾಡಿದ್ದರು. ಶ್ರೀಶರಣಪ್ಪದೊರೆಗಳವರು ಪಂಡಿತರ ಬಗ್ಗೆ ದುರ್ಗಮವಾದ ಆ ಅರಣ್ಯದ ಮಧ್ಯಭಾಗದಲ್ಲಿ ರಾಜಯೋಗ್ಯವಾದ ಏರ್ಪಾಡನ್ನು ಮಾಡಿದ್ದರು. ಸದರಿ ದೊರೆಗಳ ಏರ್ಪಾಡು ಅವರ್ಣನೀಯವಾಗಿತ್ತು. ಅಸಾಧಾರಣವಾದ ಸಂಪತ್ತಿನಿಂದಲೂ ಅದ್ವಿತೀಯವಾದ ಆತ್ಮತೇಜಃ ಪ್ರಭಾವದಿಂದಲೂ ಶಾಂತಿದಾಂತ್ಯಾದಿ ಸದ್ಗುಣಸಮುದಾಯಕ್ಕೆಲ್ಲಾ ಮುಕುಟಪ್ರಾಯರಾಗಿ ಮೆರೆಯುತ್ತಿರುವ ಶ್ರೀಶರಣಪ್ಪದೊರೆಗಳವರ ಸುವ್ಯವಸ್ಥೆಯಿಂದ ಜಯಂತಿಯ ಕಾರ್ಯಕ್ರಮಗಳು ಬಹು ಅಟ್ಟಹಾಸದಿಂದ ನೆರವೇರಿದವು. ಪಂಡಿತರ ಭಾಷಣಕ್ಕಾಗಿ ಸಭೆಯು ಸುವ್ಯವಸ್ಥಿತವಾಗಿ ನಡೆಯಲೆಂಬ ಉದ್ದೇಶದಿಂದ ನಿಜಾಂ ಸರ್ಕಾರದವರು, ಸರ್ಕಾರಿ ಅಧಿಕಾರಿಗಳನ್ನು ಕಳುಹಿಸಿ ಸಭಾಕಾರ್ಯವನ್ನು ಬಹು ತೃಪ್ತಿಕರವಾಗಿ ನೆರವೇರಿಸಿದರು.

೧೨ ನೆಯ ತಾರೀಖಿನ ಸಾಯಂಕಾಲ ೬ ಘಂಟೆಗೆ ಶ್ರೀರೇವಣಸಿದ್ಧೇಶ್ವರ ಬೆಟ್ಟದ ಸಾನು ಪ್ರದೇಶದಲ್ಲಿ ಪ್ರಚಂಡಸಭೆಯು ಕೂಡಿತು. ಸುಮಾರು ೧೦-೧೫ ಸಹಸ್ರ ಜನರು ಕೂಡಿದ್ದರು. ಬಾರ್ಸಿ, ಮುಖೇಡ, ಭೂಸನೂರು, ಮೊರಬ, ಮುಳ್ಳೂರು, ಬೇಲೂರು, ಗುಲ್ಬರ್ಗಾ, ಕಮತಾಣ, ನಂದೂರು,

ಸತ್ತಿಗೇರಿ, ದಿಗ್ಗಾವಿ, ಮೈಂದರಿಗಿ, ಜೈನಾಪುರ, ಆಳಂದ, ಹರಸೂರು, ರಂಭೇರಿ, ದುಬಲಗುಂಡಿ, ಅಣದೂರು, ಚಿಂಚನಸೂರು, ಸೋಲಾಪುರ, ಚಿಂಚೋಳಿ ಮೊದಲಾದ ನೂರಾರು ಗ್ರಾಮಗಳ ಪಟ್ಟಚರಮೂರ್ತಿಸ್ವಾಮಿಗಳೂ, ದೇಶಿಕ ಮೂರ್ತಿಗಳೂ, ಪಂಡಿತಮಂಡಲಿಯವರೂ, ಆಗಮಿಸಿದ್ದರಿಂದ ಸಭೆಗೆ ಅಭೂತಪೂರ್ವವಾದ ಶೋಭೆಯುಂಟಾಗಿತ್ತು. ಪಂಡಿತರು ಜನಸ್ತೋಮದ ಜಯಜಯಕಾರದ ಮಧ್ಯದಲ್ಲಿ ಸಭೆಗೆ ಆಗಮಿಸಿದ ಕೂಡಲೇ ಸಭಾಕಾರ್ಯವು ಆರಂಭವಾಯಿತು. ಆರಂಭದಲ್ಲಿ ಸೊಲ್ಲಾಪುರದಿಂದ ಆಗಮಿಸಿದ್ದ ಕುಂ|| ಸುಗ್ಗಲಾದೇವಿ ತಮಶೆಟ್ಟಿ, ಕುಂ|| ತಾಯಿಬಾಯಿ ಚವ್ಹಾಣ, ಕುಂ|| ಗೌರಾಬಾಯಿ ಕಟಾಪ, ಕುಂ|| ಶಾಂತಾಬಾಯಿ ಮಾಳಗೆ, ಕುಂ|| ಇಂದುಕಲಾ ಗಂಭೀರೆ, ಈ ಬಾಲಿಕೆಯರು ತಮ್ಮ ಮಂಜುಲವಾದ ಧ್ವನಿಯಿಂದ ಜಗದಾಚಾರ್ಯರ ಸ್ತೋತ್ರಗಳನ್ನೂ ಪಂಡಿತರ ಸ್ವಾಗತಪರ ಪದ್ಯಗಳನ್ನೂ ಪಾಡಿ ಸರ್ವಸಭಿಕರನ್ನು ಸಂತೋಷಗೊಳಿಸಿದರು. ಅನಂತರ ಬಾರ್ಸಿ ಶ್ರೀಪರಾಂಡಕರ್ ಸ್ವಾಮಿಗಳವರು ಸಭೆಯು ನಡೆದ ಉದ್ದೇಶವನ್ನೂ ಜಯಂತಿಯ ವಿಷಯವನ್ನೂ ಪಂಡಿತರ ಪ್ರಭಾವದಿಂದ ಜಗದಾಚಾರ್ಯರ ವಿಷಯದಲ್ಲಿ ಉದ್ಭವಿಸಿದ ಭಕ್ತಿಯ ಬೆಳವಣಿಗೆಯ ವಿಷಯವನ್ನೂ ಕುರಿತು ಮಹಾರಾಷ್ಟ್ರ ಭಾಷೆಯಲ್ಲಿ ಹೇಳಿದರು. ಆಮೇಲೆ ಶ್ರೀಗಂಗಾಧರಶಿವಾಚಾರ್ಯ ಮೊರಬ ಇವರು ಜಯಂತಿಯ ಮಹತ್ವವನ್ನೂ ಕೆಲವು ಧಾರ್ಮಿಕ ವಿಷಯಗಳನ್ನೂ ಕುರಿತು ಮಾತನಾಡಿದರು. ಬಳಿಕ ಪಂಡಿತ ಶ್ರೀಜಗದೀಶಶಾಸ್ತ್ರಿಗಳವರು, ಧಾರ್ಮಿಕ ವಿಷಯದ ಮೇಲೆ ಸುಶ್ರಾವ್ಯವಾದ ಭಾಷಣವನ್ನು ಮಾಡಿದರು. ತರುವಾಯ ಶ್ರೀಮುಣಜಿರು ಮಲ್ಲಿಕಾರ್ಜುನಶಾಸ್ತ್ರಿಗಳವರು ಧಾರ್ಮಿಕ ವಿಷಯವನ್ನು ಮನೋಹರವಾಗಿ ವರ್ಣಿಸಿದರು. ಆ ಮೇಲೆ ಸೌ|| ಭಾಗೀರಥೀಭಾಯಿ ಕಟಾಪ ಇವರು ತಮ್ಮ ಅಸ್ಖಲಿತವಾಣಿಯಿಂದ ಜಯಂತೀ ವಿಷಯವನ್ನೂ ಗುರುಪ್ರಭಾವವನ್ನೂ ವಿಶದೀಕರಿಸಿ ಸರ್ವಜನಸ್ತೋಮವನ್ನು ಆನಂದಭರಿತವನ್ನಾಗಿ ಮಾಡಿದರು.

ಆಮೇಲೆ ಪಂಡಿತರು ಪ್ರಚಂಡಕರತಾಡನ ಮಧ್ಯದಲ್ಲಿ ಭಾಷಣವನ್ನು ಮಾಡಲುಪಕ್ರಮಿಸಿದರು. ಸಮುದ್ರದಂತಿದ್ದ ಜನಸ್ತೋಮವು ನಿಶ್ಶಬ್ದತೆಯಿಂದ ಕೂತಿತು. ಪಂಡಿತರು ಭಾಷಣದಲ್ಲಿ ಜಯಂತಿಯ ಪ್ರಭಾವನ್ನು

ವರ್ಣಿಸುತ್ತ, ಆಚಾರ್ಯರ ಅವತಾರ ವಿಷಯವನ್ನೆತ್ತಿಕೊಂಡು ಶಂಕಾಸಮಾ ಧಾನಗಳನ್ನು ವಿವರಿಸುತ್ತ ಪ್ರತಿಯೊಬ್ಬರ ಮನಸ್ಸು ಪರಮಾನಂದಭರಿತ ವಾಗುವಂತೆ ಬೋಧಿಸಿದರು. ಆನಂತರ ಶ್ರೀರೇಣುಕಾಚಾರ್ಯರು, ಕೃತಾದಿ ಚತುರ್ಯುಗಗಳಲ್ಲಿಯೂ ಲಿಂಗಮುಖದಿಂದವತರಿಸಿ ಭೂಲೋಕದಲ್ಲಿ ಯುಗಾ ನುಗುಣವಾಗಿ ಅಗಸ್ತ್ಯಾದಿಮಹರ್ಷಿಗಳನ್ನೂ ವಿಭೀಷಣಾದಿ ಚಕ್ರವರ್ತಿ ಗಳನ್ನೂ ಗೋರಕ್ಷನಾಥಾದಿಸಿದ್ಧರನ್ನೂ ಉದ್ಧರಿಸಿದ ವಿಷಯವನ್ನು ಬಹು ವಿಸ್ತಾರವಾಗಿ ಪ್ರತಿಪಾದಿಸಿದರು. ಶ್ರೀಜಗದ್ಗುರು ರೇಣುಕಭಗವತ್ಪಾದರ ಅದ್ಭುತಲೀಲೆಗಳನ್ನು ಕೇಳಿ ಜನರ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಅಂದಿನ ದಿನವು ಆನಂದದ ಸಾಮ್ರಾಜ್ಯದಂತೆ ಮೆರೆಯುತ್ತಿತ್ತು. ಜನರು ಆನಂದಾಬ್ಧಿಯಲ್ಲಿ ಮುಳುಗಿಹೋಗಿದ್ದರು. ಅನಂತರ ಸೊಲ್ಲಾಪುರದ ಬಾಲಿಕೆ ಯರು ಆಕಾಶವಾಣೀ ರೂಪವಾದ ಸಂವಾದವನ್ನು ನಡೆಯಿಸಿದರು. ಈ ಸಂವಾದವು ರೋಮಾಂಚಕರವಾಗಿತ್ತು. ಈ ಸಂವಾದವನ್ನು ರಚಿಸಿದ ಸಾ॥ ಭಾಗೀರಥೀಬಾಯಿಯವರನ್ನು ಸಭಿಕರೆಲ್ಲರೂ ಮುಕ್ತಕಂಠದಿಂದ ಹೊಗಳಿದರು. ಅಷ್ಟುಹೊತ್ತಿಗೆ ರಾತ್ರಿ ೧೦-೩೦ ಘಂಟೆಯಾದುದರಿಂದ ಸಭಾಕಾರ್ಯಕ್ರಮವು ಪೂರ್ತಿಗೊಂಡಿತು. ಬಳಿಕ ಮೈಂದರಿಗಿ, ಸುಲೇಪೇಟೆ ಮೊದಲಾದ ಗ್ರಾಮಗಳಿಂದ ಬಂದಿದ್ದ ಆಚಾರ್ಯಭಜನಾಸಂಘದವರ ಮನೋ ಹರವಾದ ಸ್ತೋತ್ರಗಳನ್ನು ಕೇಳುತ್ತ ಸರ್ವಸಭಿಕರೂ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು.

೧೩ ನೆಯ ತಾರೀಖು ಗುರುವಾರ ದಿವಸ ಪ್ರಾತಃಕಾಲ ಪಂಡಿತರು ಇಳಿದುಕೊಂಡಿದ್ದ ಡೇರಾದಲ್ಲಿ ಸಮಸ್ತ ಗುರುಭಕ್ತರಿಗೂ ಶ್ರೀಜಗದ್ಗುರು ರೇಣುಕಾಚಾರ್ಯರ ಲಿಂಗಾವತಾರದ ಮತ್ತು ಪಂಡಿತರ ಸಾವಿರಾರು ಭಾವ ಚಿತ್ರಗಳು ಉಚಿತವಾಗಿ ಕೊಡಲ್ಪಟ್ಟವು. ಈ ಜಯಂತಿಯ ಕಾರ್ಯಕ್ರಮ ಕ್ಕೆಲ್ಲಾ ಮೂಲಾಧಾರಭೂತರಾದ ಬೇಲೂರು ಶ್ರೀ ಸ್ವಾಮಿಗಳವರು ರೇಣುಕ ವಿಜಯ ಮಹಾಪುರಾಣದ ಪ್ರವಚನಕ್ಕಾಗಿ ಆಗಮಿಸಿದ್ದ ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನವಿದ್ವಾನ್ ವೇ॥ ಪಂ॥ ಬಿದರೆ ಬಸವಲಿಂಗ ಶಾಸ್ತ್ರಿಗಳವರಿಗೂ ಶ್ರೀ ಸ್ವಾಮಿಯ ಅಭಿಷೇಕಕ್ಕಾಗಿ ಆಗಮಿಸಿದ್ದ ಪಿ. ಎಂ. ಗಂಗಾಧರಶರ್ಮರಿಗೂ, ಪಂಡಿತ ಮಂಡಲಿಗೂ, ಪಾಠಶಾಲಾ ವಿದ್ಯಾರ್ಥಿ

ಗಳಿಗೂ, ಸಂಭಾವನೆಯನ್ನು ಕೊಟ್ಟು ಗೌರವಿಸಿದರು. ಒಟ್ಟಿಗೆ ಈ ಮಹಾ ಕಾರ್ಯವು ಬೇಲೂರು ಶ್ರೀಗಳವರ ಅಸಾಧಾರಣಶ್ರಮದಿಂದಲೂ, ದುಬಲ ಗುಂಡಿ ಫತ್ತೇಪುರ್ ಶ್ರೀಶರಣಪ್ಪ ದೊರೆಗಳ ಅದ್ಭುತ ಕರ್ತೃತ್ವಶಕ್ತಿ ಯಿಂದಲೂ ವೇ|| ಪಿ. ಎಂ. ಕೊಟ್ರಪ್ಪಯ್ಯಶಾಸ್ತ್ರಿಗಳವರ ಪ್ರೋತ್ಸಾಹ ವಿಶೇಷದಿಂದಲೂ "ನಭೂತೋ ನಭವಿಷ್ಯತಿ" ಎಂಬಂತೆ ನೆರವೇರಿತು. ಇದಕ್ಕೆಲ್ಲಾ ಅಗಣಿತಮಹಿಮಾಶಾಲಿಯಾದ ಶ್ರೀಜಗದ್ಗುರು ರೇಣುಕಗಣ ನಾಥನ ಕೃಪಾವಿಶೇಷವೇ ಮೂಲಕಾರಣವೆಂದು ಘಂಟಾಘೋಷವಾಗಿ ಉದ್ಘೋಷಿಸಬೇಕಾಗಿದೆ. ಪಂಡಿತರು ಈ ವಿಧವಾಗಿ ನೆರವೇರಿದ ಕಾರ್ಯ ಕ್ರಮವನ್ನು ಪೂರೈಸಿಕೊಂಡು ಶ್ರೀಶರಣಪ್ಪದೊರೆಗಳ ಪ್ರಾರ್ಥನೆಯಮೇರೆಗೆ ದುಬಲಗುಂಡಿಯಲ್ಲಿರುವ ಅವರ ರಾಜವಾಡೆಗೆ ಪ್ರಯಾಣಮಾಡಿದರು.

## ದುಬಲಗುಂಡಿ

ಪಂಡಿತರು ತಾರೀಖು ೧೩-೩-೧೯೪೧ ನೆಯ ಗುರುವಾರದಿವಸ ರೇವಣಗಿರಿಕ್ಷೇತ್ರದಿಂದ ಶ್ರೀಮಂತ ಫತ್ತೇಪುರ ಶರಣಪ್ಪದೊರೆಗಳವರ ಪ್ರಾರ್ಥನೆಯ ಮೇರೆಗೆ ಅವರ ಸ್ವಗ್ರಾಮವಾದ ದುಬಲಗುಂಡಿಗೆ ಪ್ರಯಾಣ ಮಾಡಿದರು. ಪಂಡಿತರೊಡನೆ ಬಾರ್ಸಿ ಪರಾಂಡಕರ್ ಸ್ವಾಮಿಗಳು, ಜೈನಾ ಪುರ ಚರಮೂರ್ತಿಸ್ವಾಮಿಗಳು, ಭೂಸನೂರುಸ್ವಾಮಿಗಳು, ಮೊರಬದ ಗಂಗಾಧರಶಿವಾಚಾರ್ಯರು, ಕಾಶೀಕರ್ ಮಹಾಲಿಂಗಸ್ವಾಮಿಗಳು, ಪಂಡಿತ ಮಣೂರು ಮಲ್ಲಿಕಾರ್ಜುನಶಾಸ್ತ್ರಿಗಳು, ಗಂಗಾಧರಸ್ವಾಮಿ ವಾಂಗಿ ಮೊದಲಾ ದವರು ಆಗಮಿಸಿದರು. ರೇವಣಗಿರಿ ಕ್ಷೇತ್ರದಲ್ಲಿ ಬಿಸಿಲಿನ ತಾಪದಿಂದ ಪರಿತಪ್ತವಾಗಿದ್ದ ಈ ವರ್ಗವೆಲ್ಲವೂ ಶ್ರೀಶರಣಪ್ಪದೊರೆಗಳ ರಾಜವಾಡೆ ಯನ್ನು ಪ್ರವೇಶಿಸಿದ ಕೂಡಲೆ ಪರಮಶಾಂತಿಯನ್ನು ಪಡೆಯಿತು. ಶ್ರೀಶರಣಪ್ಪ ನವರ ರಾಜವಾಡೆಯು ಮಹಾರಾಜಮಂದಿರದಂತೆ ರಾರಾಜಿಸುತ್ತಿದ್ದಿತು. ಪೂರ್ವಕಾಲದ ವೀರಶೈವರಾಜರ ವೈಭವವನ್ನು ಆ ಕಾಲದಲ್ಲಿ ಕಾಣ ಬೇಕಾದರೆ ಶ್ರೀಶರಣಪ್ಪದೊರೆಗಳೇ ಸಾಕ್ಷಿಭೂತರೆಂದು ಬರೆದರೆ ಅತಿಶಯೋಕ್ತಿ ಯೆನಿಸಲಾರದು. ಸದರಿ ದೊರೆಗಳು ಅಸಾಧಾರಣವಾದ ಭಕ್ತಿಯಿಂದಲೂ, ಅಪ್ರತಿಹತವಾದ ಶಕ್ತಿಯಿಂದಲೂ, ಅನ್ಯಾದೃಶವಾದ ಶಿಸ್ತಿನಿಂದಲೂ, ಅನುಕರಣೀಯವಾದ ಯುಕ್ತಿಪ್ರಯುಕ್ತಿಗಳಿಂದಲೂ ಯುಕ್ತರಾಗಿ ನಿಜವಾ

ರಾಜ್ಯದಲ್ಲಿ ಅನುಪಮವಾದ ಕೀರ್ತಿಯನ್ನು ಪಡೆದು ಸರ್ವಜನಮಾನ್ಯರಾಗಿ ಮೆರೆಯುತ್ತಿರುವುದನ್ನು ನೋಡಿದರೆ ಅದು ಅವರ ಪೂರ್ವಜನ್ಮಕೃತ ಪುಣ್ಯ ವಿಶೇಷವೆಂದೇ ಹೇಳಬೇಕಾಗಿದೆ. ಶ್ರೀಶರಣಪ್ಪದೊರೆಗಳ ಸಂಪತ್ತು ಅವರ್ಣ ನೀಯವಾಗಿತ್ತು. ಅದರಂತೆಯೇ ಅವರಲ್ಲಿ ನೆಲೆಗೊಂಡಿರುವ ಮತಾಭಿ ಮಾನವೂ ಗುರುಭಕ್ತಿಯೂ ಅವರ್ಣನೀಯವಾಗಿದ್ದವು. ಇವರ ಧರ್ಮ ಪತ್ನಿಯವರಾದ ಪತಿವ್ರತಾಶಿರೋಮಣಿ ಸೌ|| ಬಸವಲಿಂಗಮ್ಮನವರು ಮಹಾಸಾತ್ತ್ವಿಕಸ್ವಭಾವದವರಾಗಿದ್ದು ಆ ರಾಜಮಂದಿರದಲ್ಲಿ ಸಾಕ್ಷಾತ್ ಅನ್ನಪೂರ್ಣಾದೇವಿಯಂತೆ ರಾರಾಜಿಸುತ್ತಿದ್ದರು. ಈ ದಾಂಪತ್ಯವು ಸುವರ್ಣಕ್ಕೆ ಸುಗಂಧವನ್ನು ಬೆರೆಯಿಸಿದಂತಿತ್ತು. ಇಂತಹ ಅನುಕೂಲ ದಾಂಪತ್ಯವು ದೊರೆತಿರುವುದಕ್ಕೆ ಪರಮೇಶ್ವರನ ಅನುಗ್ರಹವೇ ಮುಖ್ಯ ಕಾರಣವಾಗಿರುವುದು. ಈ ದಂಪತಿಗಳ ಅಸಾಧಾರಣ ಭಕ್ತಿಯನ್ನು ಕಂಡು ಪಂಡಿತರು ಅವರ ರಾಜಮಂದಿರದಲ್ಲಿ ಶ್ರೀರೇಣುಕರ ಮೂರ್ತಿಯನ್ನು ಸ್ಥಾಪಿಸಿದರು. ನಿಜಾಂರಾಜ್ಯದಲ್ಲಿ ಧರ್ಮವೀರರೆಂದೂ ದಾನಶೂರರೆಂದೂ ಕೀರ್ತಿವೆತ್ತಿರುವ ಶ್ರೀ ಶರಣಪ್ಪದೊರೆಗಳು ೧೪ನೆಯ ತಾರೀಖಿನ ದಿವಸ ತಮ್ಮ ರಾಜವಾಡೆಯಲ್ಲಿ ಧಾರ್ಮಿಕ ಸಭೆಯನ್ನು ಕರೆದರು. ಸಭೆಗೆ ಅನೇಕ ಜನರು ಆಗಮಿಸಿದ್ದರು. ಆಗ್ಯೆ ಪಂಡಿತರು ಶಿವಲಿಂಗದ ಮಹತ್ವವನ್ನು ವರ್ಣಿಸುವುದರಮೂಲಕ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ಸ್ವರೂಪವನ್ನು ಸರ್ವರ ಮನಸ್ಸಿನಲ್ಲಿಯೂ ಪ್ರತಿಬಿಂಬಿಸುವಂತೆ ಬೋಧಿಸಿದರು. ಪಂಡಿತರ ಭಾಷಣವನ್ನು ಕೇಳಿ ಸರ್ವ ಸಭಿಕರೂ ಆನಂದತುಂದಿಲಹೃದಯರಾದರು.

## ಸಿಕಂದರಾಬಾದಿಗೆ ಪ್ರಯಾಣ

೧೫ನೆಯ ತಾರೀಖಿನ ದಿವಸ ಪಂಡಿತರು ದುಬಲಗುಂಡಿಯಿಂದ ಸಿಕಂದರಾಬಾದಿಗೆ ಶ್ರೀ ಶರಣಪ್ಪ ದೊರೆಗಳವರ ಕಾರಿನಲ್ಲಿ ಪ್ರಯಾಣ ಮಾಡಿದರು. ಪಂಡಿತರ ಸಂಗಡ ಶ್ರೀ ಜೈನಾಪುರಸ್ವಾಮಿಗಳವರು, ಶ್ರೀ ಮಹಾಲಿಂಗಸ್ವಾಮಿ ಕಾಶೀಕರ್, ಶರಣಪ್ಪದೊರೆಗಳು ಮೊದಲಾದವರು ಆಗಮಿಸಿದರು. ವೇ|| ಪಂಡಿತ ಚಿದರೆಮಠದ ವೀರಭದ್ರಶಾಸ್ತ್ರಿಗಳವರ ಗುರುಕುಲದಲ್ಲಿ ಬಿಡಾರಮಾಡಿದರು. ಶ್ರೀ ವೀರಭದ್ರಶಾಸ್ತ್ರಿಗಳವರು ಸ್ಥಾಪಿಸಿರುವ ಶೈವಭಾರತೀ ಭವನವನ್ನೂ ಗುರುಕುಲದ ವ್ಯವಸ್ಥೆಯನ್ನೂ

ನೋಡಿ ಪಂಡಿತರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಶ್ರೀಶರಣಪ್ಪ ದೊರೆಗಳವರು ಪಂಡಿತರಿಗೆ ಹೈದರಾಬಾದ್ ಮತ್ತು ಸಿಕಂದರಾಬಾದ್ ನಗರಗಳಲ್ಲಿರುವ ಸಕಲ ದರ್ಶನೀಯ ಸ್ಥಳಗಳನ್ನು ತೋರಿಸಿದರು. ಸಿಕಂದರಾ ಬಾದಿನಲ್ಲಿ ಎರಡು ದಿನಗಳವರೆಗಿದ್ದು, ಅಲ್ಲಿಯ ಕಾರ್ಯಕ್ರಮಗಳನ್ನೆಲ್ಲ ಪೂರೈಸಿಕೊಂಡು ೧೭ ನೆಯ ತಾರೀಖಿನ ಸಾಯಂಕಾಲ ಸೊಲ್ಲಾಪುರಕ್ಕೆ ಪ್ರಯಾಣ ಮಾಡಿದರು.

## ಸೊಲ್ಲಾಪುರದಲ್ಲಿ ಪ್ರಚಂಡಸಭೆ

೧೯ ನೆಯ ತಾರೀಖಿನ ದಿವಸ ಸೊಲ್ಲಾಪುರದಲ್ಲಿರುವ ಶ್ರೀಮಲ್ಲಿಕಾ ರ್ಜುನಸ್ವಾಮಿ ದೇವಾಲಯದಲ್ಲಿ ಪ್ರಚಂಡಸಭೆಕೂಡಿತು. ಸಭೆಗೆ ೧೫-೧೬ ಸಾವಿರ ಜನರು ಆಗಮಿಸಿದ್ದರು, ಸೊಲ್ಲಾಪುರದ ವೀರಶೈವ ಸಮಾಜ ದಲ್ಲಿ ಪ್ರಸಿದ್ಧಿಪಡೆದಿರುವ ಡಾ॥ ಜಗದೇವರಾವ್ ದೇಶಮುಖ ಇವರ ಅಧ್ಯಕ್ಷತೆಯಲ್ಲಿ ಪಂಡಿತರು ವೀರಶೈವಮತದ ಪ್ರಾಚೀನ ಇತಿಹಾಸವನ್ನು ಕುರಿತು ಅತ್ಯಮೂಲ್ಯವಾದ ಭಾಷಣವನ್ನು ಮಾಡಿದರು. ತಮ್ಮ ಭಾಷಣದಲ್ಲಿ ಮೊದಲು ಶಿವಭಕ್ತಿಯ ಪ್ರಭಾವವನ್ನೂ ಪೂರ್ವಕಾಲದಲ್ಲಿ ಶಿವಭಕ್ತಿಯು ಸಮಸ್ತಪ್ರಪಂಚದಲ್ಲಿ ಹೇಗೆ ವ್ಯಾಪಿಸಿತ್ತೆಂಬುದನ್ನೂ, ಈ ವಿಧವಾದ ಶಿವಭಕ್ತಿಯು ಪ್ರಪಂಚದಲ್ಲೆಲ್ಲ ವ್ಯಾಪಿಸುವದಕ್ಕೆ ಶ್ರೀಜಗದ್ಗುರು ಪಂಚಾ ಚಾರ್ಯರ ಪ್ರಭಾವವೇ ಮೂಲಕಾರಣವಾಯಿತೆಂಬುದನ್ನೂ, ದೇವತೆಗಳೂ, ಮಹರ್ಷಿಗಳೂ ಚಕ್ರವರ್ತಿಗಳೂ ಶಿವಭಕ್ತಿಯುತರಾಗಿ ಶಿವಲಿಂಗವನ್ನು ಮಸ್ತಕದಲ್ಲಿ ಧರಿಸಿಕೊಂಡಿದ್ದರೆಂಬುದನ್ನೂ ಪ್ರಾಚೀನ ಗ್ರಂಥಾಧಾರ ಗಳಿಂದಲೂ, ಭರತಖಂಡದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದಿರುವ ದೇವತಾ ವಿಗ್ರಹಗಳ ಸಂದರ್ಶನದಿಂದಲೂ ಬಹು ವಿಶದವಾಗಿ ವಿವರಿಸಿದರು. ಅನಂತರ ಈ ನವೀನಕಾಲಕ್ಕನುಸರಿಸಿ ಶಿಲಾಲೇಖನವಿಷಯವನ್ನೆತ್ತಿಕೊಂಡು, ಮಾತ ನಾಡಲುಪಕ್ರಮಿಸಿದರು. ಕ್ರಿ.ಶ. ೫-೬ ನೆಯ ಶತಮಾನಗಳಲ್ಲಿ ಕಾಂಚೀ ಪಟ್ಟಣವನ್ನು ರಾಜಧಾನಿಯನ್ನಾಗಿಮಾಡಿಕೊಂಡು ಏಕಚಕ್ರಾಧಿಪತ್ಯದಿಂದ ರಾಜ್ಯವಾಳುತ್ತಿದ್ದ ಪಲ್ಲವವಂಶದ ರಾಜಸಿಂಹ, ಗುಣಭರ, ಅತ್ಯಂತಕಾಮ ಈ ಮೂರು ಜನ ಸಾರ್ವಭೌಮರು ಲಿಂಗಧಾರಿಗಳಾಗಿದ್ದರೆಂದೂ, ಅವರು ತಮ್ಮ ಮಸ್ತಕದಲ್ಲಿ ಸದಾ ಲಿಂಗವನ್ನು ಧರಿಸಿಕೊಳ್ಳುತ್ತಿದ್ದರೆಂದೂ, ಈ ಬಗ್ಗೆ

ಮದ್ರಾಸ್ ನಗರಕ್ಕೆ ಸಮೀಪದಲ್ಲಿರುವ ಮಹಾಬಲಿಪುರಂ ಮತ್ತು ಸಾಲ್ವ ಕುಪ್ಪಂ ಗ್ರಾಮಗಳ ಗುಹೆಗಳಲ್ಲಿ ದೊರೆತಿರುವ ಶಾಸನಗಳೇ ಮುಖ್ಯಾಧಾರಗಳೆಂದೂ, ಈ ಶಾಸನಗಳನ್ನು ಮದ್ರಾಸ್ ಇಲಾಖೆಯ ಶಾಸನಾಧಿಕಾರಿಗಳಾಗಿದ್ದ ಜರ್ಮನ್‌ದೇಶದ ಡಾ|| ಹುಲ್ಷ್ ಎಂಬವರು ೧೮೯೦ ನೆಯ ಇಸವಿಯಲ್ಲಿ "ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್" ವಾಲ್ಯುಂ ೧ ರಲ್ಲಿ ಪ್ರಕಟಿಸಿರುವರೆಂದೂ ಹೇಳಿ, ಆ ಶಾಸನಗಳಲ್ಲಿರುವ ಶ್ಲೋಕಗಳನ್ನು ಉದಾಹರಿಸಿದರು.

## ಅತ್ಯಂತಕಾಮರಾಜನ ವರ್ಣನ

ಶ್ರೀಮತೋಽತ್ಯಂತಕಾಮಸ್ಯ ದ್ವಿಷದ್ದರ್ಪಾಪಹಾರಿಣಃ |
ಶ್ರೀನಿಧೇಃ ಕಾಮರಾಗಸ್ಯ ಹರಾರಾಧನಸಂಗಿನಃ ||
ಅಭಿಷೇಕಜಲಾಪೂರ್ಣೇ ಚಿತ್ರರತ್ನಾಂಬುಜಾಕರೇ |
ಆಸ್ತೇ ವಿಶಾಲೇ ಸುಮುಖಃ ಶಿರಸ್ಸರಸಿ ಶಂಕರಃ ||

## ರಾಜಸಿಂಹನ ವರ್ಣನ

ರಾಜಸಿಂಹೋ ರಣಜಯಃ ಶ್ರೀಭರಶ್ಚಿತ್ರಕಾರ್ಮುಕಃ |
ಏಕವೀರಶ್ಚಿರಂ ಪಾತು ಶಿವಚೂಡಾಮಣಿರ್ಮಹೀಂ ||

## ಗುಣಭರನ ವರ್ಣನ

ಗುಣಭರನಾಮನಿ ರಾಜನ್ಯನೇನ ಲಿಂಗೇನ ಲಿಂಗಿನಿ ಜ್ಞಾನಂ |
ಪ್ರಥತಾಂ ಚಿರಾಯ ಲೋಕೇ ವಿಪಕ್ಷವೃತ್ತೇಃ ಪರಾವೃತ್ತಂ ||

ನಿರ್ಮಾಪಿತಾಮಿತಿ ಮುದಾ ಪುರುಷೋತ್ತಮೇನ
ಶೈಲೀಂ ಹರಸ್ಯ ತನುಮಪ್ರತಿಮಾಮನೇನ |
ಕೃತ್ವಾ ಶಿವಂ ಶಿರಸಿ ಧಾರಯಿತಾತ್ಮಸಂಸ್ಥ
ಮುಚ್ಚೈಃ ಶಿರಸ್ತ್ವಮಚಲಸ್ಯ ಕೃತಾರ್ಥಂ ||

"ಈರೀತಿಯಾಗಿ ಶ್ಲೋಕಗಳು ಕೆತ್ತಲ್ಪಟ್ಟಿರುವವೆಂದೂ, ಈ ಚಕ್ರವರ್ತಿಗಳ ಶ್ರೀವೃಷಭಲಾಂಛನಃ" "ಶ್ರೀಆಗಮಪ್ರಮಾಣಃ" ಎಂಬ ವಿಶೇಷಣಗಳು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿರುವವೆಂದೂ ಹೇಳಿದರು.

ಶ್ರೀಜಗದ್ಗುರು ರೇವಣಸಿದ್ಧರ ಪವಿತ್ರನಾಮವನ್ನಿಟ್ಟುಕೊಂಡಿದ್ದ ರೇವಣನಾಥನೆಂಬ ರಾಜನು ಕ್ರಿ.ಶ. ೮ನೆಯ ಶತಮಾನದಲ್ಲಿದ್ದನೆಂದೂ, ಆಗಿನ ಕಾಲದಲ್ಲಿ ಮಹಾರಾಜರು ತಮಗೆ ಈ ಮತಾಚಾರ್ಯರ ಪವಿತ್ರನಾಮವನ್ನಿಟ್ಟು ಕೊಳ್ಳಬೇಕಾದರೆ, ಆಗ್ಗೆ ಈ ಆಚಾರ್ಯರ ಪ್ರಭಾವವು ಸರ್ವತ್ರ ವ್ಯಾಪಿಸಿತ್ತೆಂದೂ, ಈ ವಿಷಯದಲ್ಲಿ ಚಿತ್ರದುರ್ಗದ ತಾಲೂಕು ಬೇವಿನಹಳ್ಳಿಗ್ರಾಮದ ಹನುಮಂತದೇವರ ಗುಡಿಯ ಪ್ರಾಕಾರದಲ್ಲಿ ದೊರೆತಿರುವ ಶಾಸನವು ಮುಖ್ಯ ಪ್ರಮಾಣವಾಗಿರುವದೆಂದೂ, ಈ ಶಾಸನವನ್ನು ಮೈಸೂರು ದೇಶದ ಶಾಸನ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ರೈಸ್ ಸಾಹೇಬರವರು ಪ್ರಕಟಿಸಿರುವರೆಂದೂ ಹೇಳಿ ಶಾಸನದವಿಷಯವನ್ನು ವಿವರಿಸಿದರು.

ಇದರಂತೆಯೇ ಮೈಸೂರು ಡಿಸ್ಟ್ರಿಕ್ಟ್ ಹೆಗ್ಗಡದೇವನಕೋಟೆ ತಾಲ್ಲೂಕು ಬೆಳತೂರು ಗ್ರಾಮದ ಬಾಣೇಶ್ವರ ದೇವಾಲಯದಲ್ಲಿ ದೊರೆತ ಶಾಸನ ವಿಷಯವನ್ನೂ, ಶಿವಮೊಗ್ಗಾ ಡಿಸ್ಟ್ರಿಕ್ಟ್ ಶಿಕಾರಿಪುರ ತಾಲೂಕು ಬೆಳಗಾಮಿ ಗ್ರಾಮದಲ್ಲಿ ದೊರೆತಿರುವ "ಉದಯಾದಿತ್ಯ" ರಾಜನ ಶಾಸನವನ್ನೂ ಉದಾಹರಿಸಿದರು. ಈರೀತಿಯಾಗಿ ವೀರಶೈವಮತದ ಪ್ರಾಚೀನತ್ವದ ಬಗ್ಗೆ ಅನೇಕ ಶಾಸನಗಳ ವಿಷಯವನ್ನೆತ್ತಿಕೊಂಡು ೩ ಘಂಟೆಗಳವರೆಗೆ ಭಾಷಣ ಮಾಡಿ ಸರ್ವ ಸಭಿಕರನ್ನೂ ಪರಮಾನಂದಭರಿತರನ್ನಾಗಿ ಮಾಡಿದರು.

ಸಭಿಕರು ಪಂಡಿತರು ಪ್ರತಿಪಾದಿಸುತ್ತಿರುವ ಪ್ರಮಾಣಪುರಸ್ಸರವಾದ ವಿಷಯಗಳನ್ನು ಕೇಳಿ ಮೇಲಿಂದಮೇಲೆ ತಮ್ಮ ಆನಂದೋದ್ಗಾರವನ್ನು ಕರತಾಡನಮೂಲಕ ಸೂಚಿಸುತ್ತಿದ್ದರು. ಪಂಡಿತರ ಭಾಷಣವಾದ ಮೇಲೆ ಮ|| ರಾ|| ಜುಂಜೆವಕೀಲರು ಪಂಡಿತರ ಭಾಷಣದ ಪ್ರಭಾವವನ್ನು ಬಣ್ಣಿಸುತ್ತ ಅವರ ಗುಣಗಾನವನ್ನು ಮಾಡಿದರು. ಆಮೇಲೆ ಅಧ್ಯಕ್ಷಮಹೋದಯರು ಪಂಡಿತರು ಮಾಡಿದ ಭಾಷಣದ ವಿಷಯವನ್ನೆತ್ತಿಕೊಂಡು ತಮ್ಮ ಸಿಂಹವಾಣಿಯಿಂದ ಸನಾತನತ್ವದಬಗ್ಗೆ ಮಾತನಾಡಿ ಸರ್ವರನ್ನೂ ಸಂತೋಷಪಡಿಸಿದರು. ಬಳಿಕ ಪಂಡಿತರಿಗೆ ಹಾರತುರಾಯಿಗಳು ಸಮರ್ಪಿಸಲ್ಪಟ್ಟು ಶ್ರೀ ಜಗದ್ಗುರು ಪಂಚಾಚಾರ್ಯರ ಜಯಘೋಷದೊಡನೆಯೂ ಪಂಡಿತರ ಜಯಘೋಷದೊಡನೆಯೂ ಅಂದಿನ ಸಭೆಯು ಸಮಾಪ್ತಿಗೊಂಡಿತು. ಈ ಸಭೆಯ ವ್ಯವಸ್ಥೆಯನ್ನು ಗುರುಭಕ್ತಶಿಖಾಮಣಿಗಳಾದ ಶ್ರೀಮಂತ ಮಲ್ಲಿಕಾರ್ಜು

ನಪ್ಪಣ್ಣ ಗಂಭೀರೆ, ಶ್ರೀಯುತ ರೇವಣಸಿದ್ಧಪ್ಪ ಹಿರೇಹಬ್ಬು, ಶ್ರೀಯುತ ಆನಂದರಾವ ದರಗೋಪಾಟೀಲ ಮುನಿಸಿಪಲ್ ಕೌನ್ಸಿಲರ್, ಶ್ರೀಯುತ ಸಿದ್ಧರಾಮಪ್ಪ ಬುಗಡೆ, ಶ್ರೀ ಮುತ್ತಪ್ಪ ಮೆಂಗಾಣೆ ಮೊದಲಾದ ಗುರುಭಕ್ತಿ ಧುರಂಧರರು ಬಹು ತೃಪ್ತಿಕರವಾಗಿ ಇಟ್ಟಿದ್ದರು.

## ಸೊಲ್ಲಾಪುರದಲ್ಲಿ ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರ ಕಾರ್ಯಕ್ರಮ

ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರು ತಾರೀಖು ೨೨-೩-೪೭ ನೆಯ ದಿವಸ ಸೊಲ್ಲಾಪುರದ ವೀರಶೈವ ಸದಾಚಾರ ಸ್ತ್ರೀಸಮಾಜದವರ ಪ್ರಾರ್ಥನೆಯ ಮೇರೆಗೆ ಶ್ರೀಮನ್ಮಥಸ್ವಾಮಿ ಮಠಕ್ಕೆ ಆಗಮಿಸಿದರು. ಅನೇಕ ಜನ ವೀರಶೈವ ಸ್ತ್ರೀಯರು ಅಲ್ಲಿ ಸಮ್ಮಿಳಿತರಾಗಿದ್ದರು. ಪ್ರಾರಂಭದಲ್ಲಿ ಬಾಲಿಕೆಯರು ತಮ್ಮ ಮಧುರವಾಣಿಯಿಂದ ಆಚಾರ್ಯರ ಸ್ತೋತ್ರಗಳನ್ನು ಪಾಡಿದರು. ಬಳಿಕ ಪಂ॥ಶ್ರೀಕಾಶೀನಾಥಶಾಸ್ತ್ರಿಗಳವರ ವಿಷಯಕವಾಗಿ ಸೌ॥ ಭಾಗೀರಥೀ ಬಾಯಿಯವರಿಂದ ರಚಿಸಲ್ಪಟ್ಟಿದ್ದ ಸಂವಾದವನ್ನು ಬಹು ಮನೋಹರವಾಗಿ ಸಂಭಾಷಿಸಿದರು. ಈ ಕಾರ್ಯಕ್ರಮವನ್ನು ಕಂಡು ಸರ್ವರೂ ಸಂತೋಷಭರಿತರಾದರು. ಬಳಿಕ ಸೌ॥ ಭಾಗೀರಥೀಬಾಯಿ ಕಟಾಪ, ಸೌ॥ ಬಸವ್ವಬಾಯಿ ನಂದೀಮಠ, ಶ್ರೀಮತಿ ಗುರವ್ವಬಾಯಿ ಮಠಪತ್ತಿ ಮೊದಲಾದವರು ಧಾರ್ಮಿಕ ವಿಷಯದ ಮೇಲೆ ಬಹು ಕಳಕಳಿಯಿಂದ ಮಾತನಾಡಿದರು. ಸೊಲ್ಲಾಪುರದಂತಹ ಮಹಾನಗರದಲ್ಲಿ ಸೌ॥ ಭಾಗೀರಥೀಬಾಯಿ ಕಟಾಪ ಇವರ ಪ್ರಯತ್ನ ವಿಶೇಷದಿಂದ ವೀರಶೈವ ಸ್ತ್ರೀ ಸಮಾಜವು ದಿನೇ ದಿನೇ ಸುಧಾರಿಸುತ್ತ ನಡೆಯುವುದರ ಮೂಲಕ ಅಸಾಧಾರಣ ಗುರುಭಕ್ತಿಸಂಪನ್ನವಾಗುತ್ತಿರುವುದನ್ನು ಕಂಡು ಪಂಡಿತರು ಪರಮಾನಂದಭರಿತರಾದರು.

## ಶ್ರೀಮದ್ವೀರಶೈವ ವಾರದ ಸಂಸ್ಕೃತ ಪಾಠಶಾಲೆಗೆ ಭೆಟ್ಟಿ

ಪಂಡಿತರು ಅದೇ ದಿವಸ ಮಧ್ಯಾಹ್ನ ಶ್ರೀಮದ್ವೀರಶೈವವಾರದ ಸಂಸ್ಕೃತ ಪಾಠಶಾಲೆಯ ವಿದ್ಯಾರ್ಥಿಗಳ ಪ್ರಾರ್ಥನೆಯ ಮೇರೆಗೆ ಶ್ರೀಮನ್ಮಥಸ್ವಾಮಿ ಮಠಕ್ಕೆ ದಯಮಾಡಿಸಿದರು. ಅಲ್ಲಿ ಪಾಠಶಾಲಾಧ್ಯಾಪಕರಾದ ಪಂಡಿತ ಶ್ರೀ ಜಗದೀಶ ಶಾಸ್ತ್ರಿಗಳವರು ಮತ್ತು ಶ್ರೀಹೋಟಗಿ ಸ್ವಾಮಿಗಳವರೊಡನೆ ಸಮಸ್ತ ವಿದ್ಯಾರ್ಥಿಗಳ ಸಮೇತ ಪಂಡಿತರ ಭಾವಚಿತ್ರವು ತೆಗೆಯಲ್ಪಟ್ಟಿತು.

## ಬಾರ್ಸಿನಗರಕ್ಕೆ ಆಗಮನ

ಪಂಡಿತರು ೨೪ ನೆಯ ತಾರೀಖಿನ ದಿವಸ ಸೊಲ್ಲಾಪುರದಿಂದ ಬಾರ್ಸಿನಗರಕ್ಕೆ ಪ್ರಯಾಣ ಮಾಡಿದರು. ಮಹಾರಾಷ್ಟ್ರ ಪ್ರಾಂತದ ವೀರಶೈವ ಸಮಾಜಕ್ಕೆ ಮತಾಚಾರ್ಯರ ದರ್ಶನಮಾಡಿಸಿ ಧರ್ಮೋದ್ಧಾರಕರೆಂಬ ಕೀರ್ತಿಯನ್ನು ಗಳಿಸಿಕೊಂಡು ಹೋದ ಕೈ॥ ಅಣ್ಣಾಸಾಹೇಬ ಕಥಲೆ ಇವರ ವಾಡೆಗೆ ಪಂಡಿತರು ದಯಮಾಡಿಸಿದ ಕೂಡಲೆ ಸದರಿ ಅಣ್ಣಾಸಾಹೇಬರ ತಮ್ಮಂದಿರಾದ ಬೊಂಬಾಯಿ ಲೆಜಿಸ್ಲೇಟಿವ್ ಕೌನ್ಸಿಲ್ ಮೆಂಬರ್ ಭಗವಂತರಾವ ಕಥಲೆ, ಅಣ್ಣಾಸಾಹೇಬರವರ ಪುತ್ರರಾದ ಬಾಳಾಸಾಹೇಬ, ಶರದ ಮತ್ತು ಬಾಬೂರಾವ್ ಕಥಲೆ, ಶ್ರೀಪರಾಂಡಕರ್ ಸ್ವಾಮಿಗಳು ಶ್ರೀಖಲಿಪೆ ಮಾಸ್ಟರ್ ಶ್ರೀಅಪ್ಪಾರಾವ್ ಮತ್ತು ವೀರಶೈವ ಬೋರ್ಡಿಂಗಿನ ಸಮಸ್ತ ವಿದ್ಯಾರ್ಥಿಗಳು ಜಗದಾಚಾರ್ಯರ ಜಯಘೋಷದೊಡನೆಯೂ ಸ್ವಾಗತವನ್ನಿತ್ತರು. ೨೬ ನೆಯ ತಾರೀಖಿನ ದಿವಸ ವೀರಶೈವ ಗರ್ಜನಾ ಆಫೀಸಿಗೆ ಭೆಟ್ಟಿಯನ್ನಿತ್ತು ಗರ್ಜನಾಪತ್ರಿಕೆಯ ಅಭಿವೃದ್ಧಿಗಾಗಿ ಸಲಹೆಯನ್ನಿತ್ತರು. ೨೭ ನೆಯ ತಾರೀಖಿನ ದಿವಸ ಬಾರ್ಸಿ ಮುನಿಸಿಪಾಲಿಟಿಯವರು ಕಥಲೆ ಮೆಮೋರಿಯಲ್ ಹಾಲಿನಲ್ಲಿ ಪಂಡಿತರಿಗೆ ಅಭೂತ ಪೂರ್ವವಾದ ವೈಭವದೊಡನೆ ಮಹಾರಾಷ್ಟ್ರ ಭಾಷೆಯಲ್ಲಿ ಮಾನಪತ್ರವನ್ನು ಸಮರ್ಪಿಸಿದರು. ಆ ಸಮಯದಲ್ಲಿ ಬಾರ್ಸಿ ತಾಲೂಕಿನ ಫಸ್ಟ್‌ಕ್ಲಾಸ್ ಮ್ಯಾಜಿಸ್ಟ್ರೇಟರವರೂ ಮುನಿಸಿಪಲ್ ಕೌನ್ಸಿಲರೂ, ಡಾಕ್ಟರರೂ, ವಕೀಲರೂ, ಎಲ್ಲ ಮತಗಳ ಪ್ರಮುಖಜನರೂ ವಿಶೇಷವಾಗಿ ಸೇರಿದ್ದರು. ಮುನಿಸಿಪಾಲಿಟಿ ಪ್ರೆಸಿಡೆಂಟರವರಾದ ಮಲ್ಲಿಕಾರ್ಜುನಪ್ಪ ಭಾತಕರ್ ಇವರು ಪಂಡಿತರ ಗುಣಗಾನವನ್ನು ಮಾಡಿ ಮಹಾರಾಷ್ಟ್ರಭಾಷೆಯಲ್ಲಿ ರಚಿಸಿದ್ದ ಮಾನಪತ್ರವನ್ನು ಓದಿ ಅಮೂಲ್ಯವಾದ ಸುವರ್ಣ ರಜತಕರಂಡದಲ್ಲಿಟ್ಟು ಸಮರ್ಪಿಸಿದರು.

## ಮಾನಪತ್ರ

೨೮ ನೆಯ ತಾರೀಖಿನದಿವಸ ಯುಗಾದಿ ಹಬ್ಬವಿದ್ದುದರಿಂದ ಕೈ॥ ಅಣ್ಣಾಸಾಹೇಬ್ ಕಥಲೆಯವರ ಧರ್ಮಪತ್ನಿಯವರು ಅವರ ಮಕ್ಕಳು ಸಹೋದರ ಸಹೋದರಿಯರು ಎಲ್ಲರೂ ಕೂಡಿ ಅಸಾಧಾರಣವಾದ ಭಕ್ತಿಯಿಂದ ಪಂಡಿತರಿಗೆ ಬೆಲೆಯುಳ್ಳ ವಸ್ತ್ರಗಳನ್ನೂ ವಿಶೇಷ ಕಾಣಿಕೆಯನ್ನೂ

ಸಮರ್ಪಿಸಿದರು. ಪಂಡಿತರು ಕಥಲೆ ಮಂಡಲಿಯವರಿಗೆಲ್ಲ ಆಶೀರ್ವಾದ ವನ್ನಿತ್ತು ಪುನಃ ಸೊಲ್ಲಾಪುರಕ್ಕಾಗಮಿಸಿದರು.

## ಜೈನಶ್ರಾವಕಾಶ್ರಮಕ್ಕೆ ಭೆಟ್ಟಿ

ಮೇಲ್ಕಂಡ ಆಶ್ರಮವನ್ನು ಸ್ಥಾಪಿಸಿರುವ ಶ್ರೀ॥ ಸುಮತೀಬಾಯಿ ಜೈನನ್ಯಾಯತೀರ್ಥ ಇವರ ಪ್ರಾರ್ಥನೆಯ ಮೇರೆಗೆ ಪಂಡಿತರು ಸದರಿ ಆಶ ಮಕ್ಕೆ ಭೆಟ್ಟಿಯನ್ನಿತ್ತು ವಿದ್ಯಾರ್ಥಿನಿಯರ ಶಿಕ್ಷಣವನ್ನು ಪರಾಮರ್ಶಿಸಿದರು. ಮೇಲ್ಕಂಡ ಆಶ್ರಮದಲ್ಲಿ ೪೦೦ ಜನ ವಿದ್ಯಾರ್ಥಿನಿಯರಿದ್ದು ಸಂಸ್ಕೃತ, ಇಂಗ್ಲೀಷ್, ಮರಾಠಿ ಭಾಷೆಗಳ ಪಠನಕ್ರಮವು ಅತ್ಯುತ್ತಮವಾಗಿರುವುದನ್ನು ಕಂಡು ಪಂಡಿತರು ಸಂತೋಷಪಟ್ಟರು. ಬಳಿಕ ಅಲ್ಲಿ ಸಭೆಸೇರಿದ ವಿದ್ಯಾರ್ಥಿನಿ ಯರಿಗೆಲ್ಲಾ ಸ್ತ್ರೀಯರು ವಿದ್ಯಾವತಿಯರಾಗಿ ಸ್ವಧರ್ಮದಂತೆ ನಡೆಯಬೇ ಕೆಂದು ಸದ್ಬೋಧೆಯನ್ನಿತ್ತರು. ಪಂಡಿತರಿಗೆ ಹಾರತುರಾಯಿಗಳು ಸಮರ್ಪಿ ಸಲ್ಪಟ್ಟನಂತರ ಅಲ್ಲಿಯ ಕಾರ್ಯಕ್ರಮವು ಪೂರ್ತಿಗೊಂಡಿತು.

ಇದೇ ರೀತಿ ಸೊಲ್ಲಾಪುರದಲ್ಲಿರುವ ಶ್ರೀಜಗದ್ಗುರು ಪಂಚಾ ಚಾರ್ಯಸಂಘ, ಶ್ರೀಜಗದ್ಗುರು ರೇಣುಕಾಚಾರ್ಯ ಸಂಘಗಳವರು ಪಂಡಿತರನ್ನು ತಮ್ಮ ತಮ್ಮ ಸಂಘಗಳಿಗೆ ಬರಮಾಡಿಕೊಂಡು ಗೌರವಿಸಿದರು. ಪಂಡಿತರು ಸೊಲ್ಲಾಪುರದಲ್ಲಿರುವವರೆಗೆ ಗುರುಭಕ್ತ ಶಿಖಾಮಣಿಗಳಾದ ಶ್ರೀಮಂತ ಮಲ್ಲಿಕಾರ್ಜುನಪ್ಪ ಚವ್ಹಾಣ ಇವರು ವಿಶೇಷಸೇವೆಯನ್ನು ಸಲ್ಲಿಸಿದರು. ಈರೀತಿ ಪಂಡಿತರು ಸೊಲ್ಲಾಪುರದ ಕಾರ್ಯಕ್ರಮಗಳನ್ನೆಲ್ಲಾ ಪೂರೈಸಿಕೊಂಡು ಎಪ್ರೀಲ ತಿಂಗಳು ಒಂದನೆಯ ತಾರೀಖಿನ ದಿವಸ ಸೊಲ್ಲಾ ಪುರವನ್ನು ಬಿಟ್ಟು ೪ನೆಯ ತಾರೀಖಿಗೆ ಮೈಸೂರು ರಾಜಧಾನಿಗೆ ಆಗಮಿಸಿದರು.

---

## ಶ್ರೀಜಗದ್ಗುರು ರೇಣುಕಾಚಾರ್ಯರ ಜಯಂತೀಮಹೋತ್ಸವ ನಿಮಿತ್ತವಾಗಿ ತಾ|| ೧೯-೩-೧೯೪೩ ನೆಯ ದಿವಸ ಮೈಸೂರು ಆಕಾಶವಾಣಿಯಲ್ಲಿ

# ಪಂ|| ಶ್ರೀಕಾಶೀನಾಥಶಾಸ್ತ್ರಿಗಳವರು ಮಾಡಿದ ಭಾಷಣ

ಜೀಯಾಚ್ಛ್ರೀರೇಣುಕಾಚಾರ್ಯಃ ಶಿವಾಚಾರ್ಯ ಶಿಖಾಮಣಿಃ ।
ಯೋ ವೀರಶೈವಸಿದ್ಧಾಂತಂ ಸ್ಥಾಪಯಾಮಾಸ ಭೂತಲೇ ॥

ವೀರಶೈವಮತವು ಬಹುಪುರಾತನವಾದುದು. ಋಗಾದಿವೇದಗಳೂ, ಈಶಾದ್ಯುಪನಿಷತ್ತುಗಳೂ, ಕಾಮಿಕಾದಿ ಶಿವಾಗಮಗಳೂ, ವ್ಯಾಸೋಕ್ತ ಪುರಾಣಗಳೂ ಈ ಮಹಾಮತದ ಸ್ವರೂಪವನ್ನು ಸ್ಫುಟವಾಗಿ ಪ್ರತಿಪಾದಿಸುತ್ತಿರುವವು. ಈ ಸನಾತನಮತವನ್ನು ಜಗದಾದಿಯಲ್ಲಿ ಶ್ರೀ ರೇಣುಕಾದಿ ಪಂಚಾಚಾರ್ಯರು ಸ್ಥಾಪಿಸಿದರು. ಈ ಮಹಾತ್ಮರು ಪರಮೇಶ್ವರನ ಆಜ್ಞಾನುಸಾರವಾಗಿ ಪ್ರತಿಯೊಂದು ಯುಗದ ಆದಿಯಲ್ಲಿಯೂ ಶಿವಲಿಂಗ ಮುಖದಿಂದ ದಿವ್ಯದೇಹಧಾರಿಗಳಾಗಿ ಅವತರಿಸಿ, ಸರ್ವತ್ರ ಶಿವತತ್ತ್ವವನ್ನು ಪ್ರಕಾಶಪಡಿಸಿದರೆಂಬ ವಿಷಯವನ್ನು ಸಕಲ ಶಿವಾಗಮಗಳು ಮುಕ್ತಕಂಠದಿಂದ ಸಾರುತ್ತಿರುವವು. ಮಾರ್ಕಂಡೇಯನನ್ನುದ್ಧರಿಸುವದಕ್ಕೋಸ್ಕರ ಪರಮೇಶ್ವರನು ಲಿಂಗಮುಖದಿಂದ ಅವತರಿಸಿದಂತೆಯೂ, ಪ್ರಹ್ಲಾದನನ್ನುದ್ಧರಿಸುವದಕ್ಕೋಸ್ಕರ ವಿಷ್ಣುವು ಸ್ತಂಭದಿಂದ ಅವತರಿಸಿದಂತೆಯೂ, ಮಾನವಕೋಟಿಯನ್ನುದ್ಧರಿಸುವದಕ್ಕೋಸ್ಕರ ಶ್ರೀಜಗದ್ಗುರು ರೇಣುಕಾದಿಪಂಚಾಚಾರ್ಯರು ಶಿವಲಿಂಗಮುಖದಿಂದ ಅವತರಿಸಿ, ಭೂಮಂಡಲದಲ್ಲಿ ಶಿವಭಕ್ತಿಯನ್ನು ಪ್ರತಿಷ್ಠಾಪಿಸಿದರು. ಶ್ರೀರೇಣುಕಾಚಾರ್ಯರು ನಿಜಾಮ ರಾಜ್ಯಕ್ಕೆ ಸೇರಿರುವ ಕುಲ್ಯಪಾಕ ಕ್ಷೇತ್ರದಲ್ಲಿರುವ ಶ್ರೀ ಸೋಮೇಶ್ವರ ಲಿಂಗದಿಂದ ಅವತರಿಸಿ, ಮೈಸೂರು ರಾಜ್ಯದಲ್ಲಿರುವ ರಂಭಾಪುರೀ ಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು. ಶ್ರೀ ದಾರುಕಾಚಾರ್ಯರು ಗ್ವಾಲ್ಹೇರ್ ರಾಜ್ಯಕ್ಕೆ ಸೇರಿರುವ ವಟಕ್ಷೇತ್ರದಲ್ಲಿ ಶ್ರೀಸಿದ್ಧೇಶ್ವರ ಲಿಂಗದಿಂದ ಅವತರಿಸಿ, ಉಜ್ಜಯಿನೀ ಮಹಾ

ಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು. ಶ್ರೀಏಕೋರಾಮಾರಾಧ್ಯರು ಆಂಧ್ರದೇಶದ ಕಾಕಿನಾಡ ಡಿ॥ ದ್ರಾಕ್ಷಾರಾಮಕ್ಷೇತ್ರದಲ್ಲಿರುವ ಶ್ರೀಭೀಮೇಶ್ವರ ಲಿಂಗದಿಂದ ಅವತರಿಸಿ, ಹಿಮವತ್ಕೇದಾರ ಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು. ಶ್ರೀಪಂಡಿತಾರಾಧ್ಯರು ಶ್ರೀಶೈಲ ಕ್ಷೇತ್ರದಲ್ಲಿರುವ ಶ್ರೀ ಮಲ್ಲಿಕಾರ್ಜುನಲಿಂಗದಿಂದ ಅವತರಿಸಿ, ಶ್ರೀಶೈಲಕ್ಷೇತ್ರದಲ್ಲಿಯೇ ಧರ್ಮಪೀಠ ವನ್ನು ಸ್ಥಾಪಿಸಿದರು. ಶ್ರೀವಿಶ್ವಾರಾಧ್ಯರು ಶ್ರೀಕಾಶೀಕ್ಷೇತ್ರದಲ್ಲಿ ವಿರಾಜಿಸು ತ್ತಿರುವ ಶ್ರೀವಿಶ್ವನಾಥಲಿಂಗದಿಂದ ಅವತರಿಸಿ, ಆ ಕ್ಷೇತ್ರದಲ್ಲಿಯೇ ಧರ್ಮಪೀಠ ವನ್ನು ಸ್ಥಾಪಿಸಿದರು. ಈ ಮಹಾಚಾರ್ಯರು ಸ್ಥಾಪಿಸಿದ ಧರ್ಮಪೀಠಗಳು, ಅನಾದಿಕಾಲದಿಂದ ಇಂದಿನವರೆಗೂ ರಾಜಾಧಿರಾಜಮಾನ್ಯಗಳಾಗಿ ವಿಶೇಷ ವೈಭವದಿಂದ ಮೆರೆಯುತ್ತಿರುವವು. ಈ ಪೂಜ್ಯಪಾದರು ಶ್ರುತಿ-ಸೂತ್ರಾದಿಗಳ ಮೇಲೆ ಶಿವಾದ್ವೈತಸಿದ್ಧಾಂತವನ್ನು ಸ್ಥಾಪಿಸಿರುವರು. ಈ ಐದು ಜನ ಆಚಾರ್ಯರಲ್ಲಿ ಒಬ್ಬರಾಗಿರುವ ಭಗವತ್ಪಾದ ಶ್ರೀರೇಣುಕಾಚಾರ್ಯರ ಜಯಂ ತಿಯ ಈ ಶುಭದಿವಸ ಪ್ರಾಪ್ತವಾಗಿರುವದರಿಂದ ಸದ್ಯಃ ಆ ಮಹನೀಯರ ವಿಷಯವನ್ನು ಸಂಕ್ಷೇಪವಾಗಿ ವಿವರಿಸುವದಾಗುವದು.

ಶ್ರೀ ಜಗದ್ಗುರು ರೇಣುಕಾಚಾರ್ಯರ ವಿಷಯದಲ್ಲಿ ಅನೇಕ ಜನ ಪ್ರಾಚೀನ ಕವಿಗಳು ಸಂಸ್ಕೃತ, ಕರ್ಣಾಟಕ, ಆಂಧ್ರ, ದ್ರಾವಿಡ, ಮಹಾರಾಷ್ಟ್ರ ಭಾಷೆಗಳಲ್ಲಿ ಕಾವ್ಯಗಳನ್ನೂ ಪುರಾಣಗಳನ್ನೂ ಚಂಪೂ ಗ್ರಂಥಗಳನ್ನೂ ರಚಿಸಿರುವರು. ಆ ಗ್ರಂಥಗಳಲ್ಲೆಲ್ಲಾ ಸಿದ್ಧಾಂತಶಿಖಾಮಣಿಯು ಬಹು ಪುರಾತನವಾದುದು. ಈ ಸಿದ್ಧಾಂತ ಶಿಖಾಮಣಿಗೆ "ರೇಣುಕಾಗಸ್ತ್ಯ ಸಂವಾದ" ವೆಂಬ ಬೇರೊಂದು ಹೆಸರುಂಟು. ಈ ಮಹಾಗ್ರಂಥದಲ್ಲಿ ಶ್ರೀ ರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗಳಿಗೆ ವೀರಶೈವ ತತ್ತ್ವವನ್ನುಪ ದೇಶಿಸಿದ ವಿಷಯವು ಉಕ್ತವಾಗಿರುವದು. ಅಲ್ಲದೆ, ಆ ಗ್ರಂಥದ ಅಂತ್ಯ ಭಾಗದಲ್ಲಿ ವಿಭೀಷಣನ ಪ್ರಾರ್ಥನಾನುಸಾರವಾಗಿ ಮೂರುಕೋಟಿ ಗುರು ರೂಪವನ್ನು ಧರಿಸಿ ಮೂರುಕೋಟಿ ಶಿವಲಿಂಗಗಳನ್ನು ಒಂದೇ ಮುಹೂರ್ತ ದಲ್ಲಿ ಸ್ಥಾಪಿಸಿದ ವಿಷಯವು ಬರೆಯಲ್ಪಟ್ಟಿರುವದು. ಈ ಮಹಾಚಾರ್ಯರು ಅಗಸ್ತ್ಯ ಮತ್ತು ವಿಭೀಷಣ ಇವರಿಬ್ಬರನ್ನೂ ಉದ್ಧರಿಸಿದ ವಿಷಯವು, ಇವರ ವಿಷಯವಾಗಿರುವ ಸಮಸ್ತ ಗ್ರಂಥಗಳಲ್ಲಿಯೂ ಏಕಮುಖವಾಗಿ

ಹೇಳಲ್ಪಟ್ಟಿರುವದು. ಇದರಿಂದ ಇವರೀಲೀಲೆಗಳು ಕೃತತ್ರೇತಾಯುಗಗಳಿಗೆ ಸಂಬಂಧಪಟ್ಟಿರುವವೆಂದು ಸ್ಪಷ್ಟವಾಗುವುದು.

ದ್ವಾಪರಯುಗದಲ್ಲಿಯೂ ಸಹ ಈ ಮಹಾಚಾರ್ಯರು ಅನೇಕ ಲೀಲೆಗಳನ್ನು ಆಚರಿಸಿರುವರು. ಶ್ರೀಶಂಕರನು ಕಿರಾತವೇಷವನ್ನು ತಾಳಿ ಲೋಕೈಕವೀರನಾದ ಅರ್ಜುನನೊಡನೆ ಯುದ್ಧಮಾಡಿದ ಸಮಯದಲ್ಲಿ, ಶಂಕರನ ಸಂಗಡವಿದ್ದ ಪ್ರಮಥಪರಿವಾರದಲ್ಲಿ ಶ್ರೀರೇಣುಕನೂ ಸಹ ಇದ್ದನೆಂಬ ವಿಷಯವು ಮಹಾಭಾರತದಿಂದ ತಿಳಿದುಬರುವದು. ಮಹಾಭಾರತವನ್ನು ಕುಮಾರವ್ಯಾಸನೆಂಬ ಲೋಕಪ್ರಸಿದ್ಧ ಕವಿಯು ಕನ್ನಡಿಸಿರುವ ವಿಷಯವು ಸರ್ವರಿಗೂ ತಿಳಿದೇ ಇದುವುದು. ಈ ಮಹಾಕವಿಯು ತನ್ನಿಂದ ವಿರಚಿತವಾಗಿರುವ ಮಹಾಭಾರತದ ಅರಣ್ಯಪರ್ವದ ೫ ನೆಯ ಸಂಧಿಯಲ್ಲಿ—

ದೇವನನುರೂಪದಲಿ ನಿಂದರು । ದೇವಿಯರು ಗುಹಗಣಪತಿಗಳೆ ।
ಲ್ಲಾ ವಿನೋದವ ನೋಡಿ ಧರಿಸಿದರೊಲಿದು ಶಾಬರವ ॥
ಆ ವಿಗಡ ನಂದೀಶ ವೀರಕ । ದೇವಲಕ ರೇಣುಕ ಮಹೋದರ
ದಾವಶಿಖಿಮುಖ ವೀರಭದ್ರಾದ್ಯಖಿಲಭೂತಗಣ ॥೩೦॥

ಶಂಕರನು ಅರ್ಜುನನೊಡನೆ ಶಬರ ವೇಷವನ್ನು ಧರಿಸಿದಂತೆ ಶಕ್ತಿ, ಷಣ್ಮುಖ, ಗಣಪತಿ, ನಂದೀಶ್ವರ, ವೀರಕ, ದೇವಲಕ, ರೇಣುಕ, ಮಹೋದರ, ದಾವಶಿಖಿ, ವೀರಭದ್ರ ಮತ್ತು ಸಮಸ್ತ ಭೂತಸಮೂಹ ಇವರೆಲ್ಲರೂ ವಿನೋದದಿಂದ ಶಬರವೇಷವನ್ನು ಧರಿಸಿದರೆಂದು ವರ್ಣಿಸಿದ್ದಾನೆ. ಇದರಿಂದ ಶ್ರೀ ರೇಣುಕರು ಪಾಂಡವರ ಕಾಲದಲ್ಲಿಯೂ ಇದ್ದರೆಂಬುದು ಸ್ಪಷ್ಟವಾಗುತ್ತದೆ.

ಇದರಂತೆಯೇ ಈ ಆಚಾರ್ಯರು ಕಲಿಯುಗದಲ್ಲಿಯೂ ಅವತರಿಸಿ ಅನೇಕಲೀಲೆಗಳನ್ನು ಆಚರಿಸಿರುವರು. ಈಗ್ಗೆ ೨೦೦೦ ವರ್ಷಗಳ ಪೂರ್ವದಲ್ಲಿ ಉಜ್ಜಯಿನೀ ಪಟ್ಟಣದಲ್ಲಿದ್ದು ಶಕಪುರುಷನೆಂದು ಜಗದ್ವಿಖ್ಯಾತನಾಗಿರುವ ವಿಕ್ರಮ ಮಹಾರಾಜನಿಗೆ ಖಡ್ಗವನ್ನಾಶೀರ್ವದಿಸಿದರು. ಕುಟಿಲಸಿದ್ಧನಾದ ಗೋರಕ್ಷನ ಗರ್ವವನ್ನು ನಾಶಮಾಡಿ ಅವನಿಗೆ ಶಿವತತ್ತ್ವೋಪದೇಶವನ್ನು ಮಾಡಿದರು. ಶ್ರೀಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನೂ ರತ್ನಗರ್ಭ ಗಣಪತಿಯನ್ನೂ ಅನುಗ್ರಹಿಸಿದರು. ಈ ವಿಷಯವು ಪೂರ್ವ

ಕಾಲದಲ್ಲಿ ಶೃಂಗೇರಿಮಠಾಧಿಪತಿಗಳಿಂದ ಬರೆಯಿಸಲ್ಪಟ್ಟಿರುವ "ಗುರುವಂಶ ಕಾವ್ಯ"ದ ೩ನೆಯ ಸರ್ಗದಲ್ಲಿ ಸ್ಪಷ್ಟವಾಗಿ ಬರೆಯಲ್ಪಟ್ಟಿರುವುದಲ್ಲದೆ, ಶಿವ ತತ್ತ್ವರತ್ನಾಕರ, ವೇದಾಂತಸಾರವೀರಶೈವಚಿಂತಾಮಣಿ, ರೇಣುಕ ವಿಜಯ ಮೊದಲಾದ ಗ್ರಂಥಗಳಲ್ಲಿಯೂ ಉಕ್ತವಾಗಿರುವದು. ಇದೇ ರೀತಿಯಾಗಿ ಈ ಮಹಾತ್ಮರು ಭೂಮಂಡಲದಲ್ಲಿ ಅನೇಕ ಲೀಲೆಗಳನ್ನಾಚರಿಸಿ ಸುಪ್ರಸಿದ್ಧರಾಗಿರುವರು. ಈ ಮಹಾತ್ಮರ ಹೆಸರಿನ ದೇವಸ್ಥಾನಗಳೂ ಸಹ ಭರತಖಂಡದ ನಾನಾಭಾಗಗಳಲ್ಲಿ ಬಹುಪುರಾತನಕಾಲದಿಂದಲೂ ವಿರಾಜಿಸುತ್ತಿರುವವು. ಈ ದೇವಾಲಯಗಳು ಮೈಸೂರು ರಾಜ್ಯಕ್ಕೆ ಸೇರಿರುವ ಕಡೂರು ಡಿ|| ರಂಭಾಪುರೀ ಕ್ಷೇತ್ರದಲ್ಲಿಯೂ, ಬೆಂಗಳೂರು ಡಿ|| ಕ್ಲೋಸ್‌ಪೇಟೆ ತಾ|| ರೇವಣಸಿದ್ಧೇಶ್ವರನ ಬೆಟ್ಟದಲ್ಲಿಯೂ, ಬೆಂಗಳೂರು ಡಿ|| ಶಿವಗಂಗೆಯ ಬೆಟ್ಟದಲ್ಲಿಯೂ, ತುಮಕೂರು ಡಿ|| ಕೊರಟಗೆರೆ ತಾ|| ಸಿದ್ಧರಬೆಟ್ಟದಲ್ಲಿಯೂ ನಿಜಾಮು ಇಲಾಖಾ ಗುಲ್ಬರ್ಗಾ ಡಿ|| ರೇವಗಿಕ್ಷೇತ್ರದಲ್ಲಿಯೂ, ಬೊಂಬಾಯಿ ಇಲಾಖಾ ಸೊಲ್ಲಾಪುರ ನಗರದಲ್ಲಿಯೂ, ಸೊಲ್ಲಾಪುರ ಡಿ|| ಮಾಸನೂರು ಗ್ರಾಮದಲ್ಲಿಯೂ, ಸಾತಾರಾ ಡಿ|| ಪಿಟಾ ತಾ|| ರೇಣಾವಿ ಗ್ರಾಮದಲ್ಲಿಯೂ, ಸಾಂಗಲಿ ಸಂಸ್ಥಾನಕ್ಕೆ ಸೇರಿದ ಮಂಗಳವೇಢೆ ಗ್ರಾಮದಲ್ಲಿಯೂ, ಕೊಲ್ಲಾಪುರ ಸಂಸ್ಥಾನಕ್ಕೆ ಸೇರಿದ ರೇವಣಸಿದ್ಧನಗುಡ್ಡದಲ್ಲಿಯೂ, ಮದ್ರಾಸ್ ಇಲಾಖಾ ತಿರುವಣ್ಣಾಮಲೆ ಕ್ಷೇತ್ರದಲ್ಲಿಯೂ, ಕೊಯಿಮುತ್ತೂರು ಡಿ|| ಕೊಳ್ಳೆಗಾಲ ತಾ|| ಹರಳೆಗ್ರಾಮದ ಸಮೀಪದಲ್ಲಿರುವ ಕಾವೇರಿ ನದೀ ತೀರದಲ್ಲಿಯೂ ಇಂದಿಗೂ ವಿರಾಜಿಸುತ್ತಿರುವವು. ಇದರಿಂದ ಈ ಮಹಾತ್ಮರ ಪವಿತ್ರನಾಮವು ಭರತಖಂಡದಲ್ಲಿ ಪ್ರಾಚೀನಕಾಲದಿಂದಲೂ ವಿಶೇಷ ಪ್ರಚಾರದಲ್ಲಿರುವದೆಂದು ಸ್ಪಷ್ಟವಾಗಿ ತೋರಿಬರುವುದು. ಈ ವಿಷಯವು ಪ್ರಾಚೀನ ಶಿಲಾಶಾಸನಗಳಿಂದಲೂ ಸಹ ವ್ಯಕ್ತವಾಗುವುದು.

ಕ್ರಿ.ಶ. ೧೦ ನೆಯ ಶತಮಾನದಲ್ಲಿ ಚಾಲುಕ್ಯವಂಶದ ಕೊಟ್ಟಿಗದೇವ (ನಿತ್ಯವರ್ಷ) ನೆಂಬ ರಾಜನು ನಿಜಾಮು ರಾಜ್ಯದಲ್ಲಿರುವ ಮಳಖೇಡನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವನ್ನಾಳುತ್ತಿದ್ದ ಸಮಯದಲ್ಲಿ, ಪಂದಿಗನೆಂಬ ರಾಜನು ಅವನ ಸಾಮಂತರಾಜನಾಗಿ ಕರ್ಣಾಟಕ ದೇಶವನ್ನಾಳುತ್ತಿದ್ದನು. ಈ ಪಂದಿಗರಾಜನಿಗೆ "ಜಕ್ಕಿಸುಂದರಿ" ಎಂಬ

ಹೆಂಡತಿಯಿದ್ದಳು. ಈ ಜಕ್ಕಿಸುಂದರಿಯು ಶಾಲಿವಾಹನ ಶಕ ೮೯೦ ನೆಯ ಪ್ರಭವನಾಮ ಸಂವತ್ಸರ ಪುಷ್ಯಮಾಸ ಉತ್ತರಾಯಣ ಪುಣ್ಯಕಾಲ ಸಂಕ್ರಾಂತಿಯ ದಿವಸ ದಾನಮಾಡಿರುವ ವಿಷಯವು ಚಿತ್ರದುರ್ಗ ತಾ॥ ಬೇವಿನಹಳ್ಳಿ ಗ್ರಾಮದ ಹನುಮಂತದೇವರ ಗುಡಿಯ ಪ್ರಕಾರದಲ್ಲಿರುವ ಒಂದು ಶಿಲಾ ಶಾಸನದಲ್ಲಿ ಹೇಳಲ್ಪಟ್ಟಿರುವದು. ಇದು ಚಿತ್ರದುರ್ಗ ತಾಲೂಕಿನ ೭೪ ನೆಯ ನಂಬರಿನ ಶಾಸನವಾಗಿರುವದು. ಈ ಶಾಸನದಲ್ಲಿ ಪಂದಿಗರಾಜನ ವಂಶಾವಳಿಯು ವರ್ಣಿಸಲ್ಪಟ್ಟಿರುವದು. ಈ ವಂಶಾವಳಿಯಲ್ಲಿ ಪಂದಿಗರಾಜನಿಗೆ ಆರನೆಯ ತಲೆಯವನಾದ " ರೆವಣನಾಥ " ನೆಂಬ ರಾಜನ ಹೆಸರು ಉಲ್ಲಿಖಿತವಾಗಿರುವದು.

ಆ ವಿಭುಗಾತ್ಮಜಂ ನೆರೆಯೆ ಪುಟ್ಟಡೆ ಪುಟ್ಟದ ಪಿಳ್ಳಿಮಯ್ಯನಂ ।
ತಾ ವಸುಧಾಧಿಪಂಗೆ ತನಯಂ ಕಲಿಕೊಂಕಣದೇವ ಸು. ಪೃ ॥
ಡ್ವಾವನಸವಂಗೆ ಕೀರ್ತಿಯುತಸಗ್ರಜನಾತನ ಸೂನುದಾನಿ ತಾಂ ।
ರೇವಣನಾಥನಾತನ ಮಗಂ ನೆಗಳ್ದಂ ಸಲೆ ರಾಜಭೂಭುಜಂ ॥
ಆತಂಗೆ ಬಿಕ್ಕಿಯಣ್ಣಂ । ಮಾತೆಗೆ ಸತ್ಪುತ್ರನಾಸುಪುತ್ರಂಗೆ ಸುತಂ ।
ನೂತಗುಣಂ ಗೊಗ್ಗಿ ಗೊಗ್ಗಿಗ । ನೀತಂ ಶ್ರೀಸೂದ್ರಕಾಂಕನಾತಂಗೆ ಮಗಂ ॥
ಸಂಡ ಮಹಾಸಾಮಂತಂ । ಪಂದಿಗನಾತ್ತಿತ್ತು ಮಿರಿದುಮಿೂ ಜಗದೊಳ್ ಸಂ ।
ಕ್ರಂದನನಂದನಸದೃಶಂ । ನಿಂದಂ ನಿಜರಾಜ್ಯಪದವಿಯೊಳ್ ಸುಖದಿಂದಂ ॥

ಈ ಪದ್ಯಗಳಿಂದ ಪಂದಿಗರಾಜನ ತಂದೆಯು ಶೂದ್ರಕಾಂಕನೆಂದೂ, ಅವನ ತಂದೆಯು ಗೊಗ್ಗಿಯೆಂದೂ, ಅವನ ತಂದೆಯು ಬಿಕ್ಕಿಯಣ್ಣನೆಂದೂ, ಅವನ ತಂದೆಯು ರಾಜಭೂಭುಜನೆಂದೂ, ಅವನ ತಂದೆಯು ರೇವಣನಾಥನೆಂದೂ ವ್ಯಕ್ತವಾಗುವದು. ಇದರಿಂದ ರೇವಣನಾಥನೆಂಬ ರಾಜನು ಪಂದಿಗರಾಜನಿಗೆ ಆರನೆಯ ತಲೆಯವನೆಂದು ಸ್ಪಷ್ಟವಾಗುವದು. ಪ್ರತಿಯೊಬ್ಬರಿಗೆ ೩೦ ವರ್ಷಗಳಂತೆ ಲೆಕ್ಕ ಹಾಕಿದರೂ ಪಂದಿಗರಾಜನಿಗಿಂತ ರೇವಣನಾಥ ರಾಜನು ೧೫೦ ವರ್ಷಗಳ ಪೂರ್ವದಲ್ಲಿದ್ದನೆಂದು ಸ್ಪಷ್ಟವಾಗುವದು. ಪಂದಿಗರಾಜನು ಶಾಲಿವಾಹನ ಶಕ ೮೯೦ ಅಂದರೆ ಕ್ರಿ.ಶ. ೯೬೮ ರಲ್ಲಿದ್ದನೆಂಬ ವಿಷಯವು ಈ ಶಾಸನದಿಂದಲೇ ತಿಳಿದುಬರುವದು. ಇದರಿಂದ ಪಂದಿಗರಾಜನಿಗೆ ಆರನೆಯ ತಲೆಯವನಾದ ರೇವಣನಾಥರಾಜನು ಸುಮಾರು

ಕ್ರಿ.ಶ. ೭೮೦ ರಲ್ಲಿದ್ದನೆಂದು ತೋರಿಬರುವದು. ಈಗ್ಗೆ ಸುಮಾರು ೧೨೦೦ ವರ್ಷಗಳ ಪೂರ್ವದಲ್ಲಿದ್ದ ರಾಜರು ಈ ಮಹಾಚಾರ್ಯರ ಹೆಸರನ್ನಿಟ್ಟುಕೊಳ್ಳ ಬೇಕಾದರೆ ಆ ಕಾಲದಲ್ಲಿ ಈ ಭಗವತ್ಪಾದರ ತೇಜಸ್ಸು ಪ್ರಪಂಚದಲ್ಲೆಲ್ಲಾ ವ್ಯಾಪಿಸಿತ್ತೆಂದು ಧಾರಾಳವಾಗಿ ಹೇಳಬಹುದಾಗಿದೆ.

ಇದಲ್ಲದೆ ಮದ್ರಾಸ್ ಗವರ್ನಮೆಂಟಿನವರು ೧೯೩೯ ನೆಯ ಇಸವಿಯಲ್ಲಿ "ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್" (ವಾಲ್ಯೂಂ ೯ ಭಾಗ ೧) ಎಂಬ ಹೆಸರಿನಿಂದ ಕರ್ಣಾಟಕಶಾಸನಗಳಿಂದ ಕೂಡಿರುವ ಒಂದು ಪುಸ್ತಕವನ್ನು ಮುದ್ರಿಸಿ ಪ್ರಸಿದ್ಧಪಡಿಸಿದ್ದಾರೆ. ಆ ಪುಸ್ತಕದ ೧೧೪-೧೧೫ ನೆಯ ಪುಟಗಳಲ್ಲಿ ಬಳ್ಳಾರಿ ಡಿ॥ ಹರಪನಹಳ್ಳಿ ತಾ॥ ಬಾಗಳಿಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿರುವ ಒಂದು ಶಾಸನವು ಮುದ್ರಿಸಲ್ಪಟ್ಟಿರುವದು.

ತ್ರೈಲೋಕ್ಯಮಲ್ಲನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಗದೇವನೆಂಬ ರಾಜನು ಬಳ್ಳಾರಿ ಡಿ॥ ಕೂಡ್ಲಿಗಿ ತಾಲೂಕು ಕೋಗಳಿ ಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆ ಪ್ರಾಂತವನ್ನು ಆಳುತ್ತಿದ್ದ ಸಮಯದಲ್ಲಿ ಶಾಲಿವಾಹನ ಶಕ ೯೯೦ (ಕ್ರಿ.ಶ. ೧೦೬೮) ನೆಯ ಕೀಲಕಸಂವತ್ಸರದ ಜೇಷ್ಠಮಾಸ ಪೂರ್ಣಿಮೆ ಸೋಮವಾರ ದಿವಸ ಮಹಾದೇವಯ್ಯನೆಂಬವನು ಒಂದು ವೃತ್ತಿಯನ್ನು ತೆಗೆದುಕೊಂಡು ಕೆರೆಗೆ ಕೊಟ್ಟಿರುವ ವಿಷಯವು ಆ ಶಾಸನದಲ್ಲಿ ಉಕ್ತವಾಗಿರುವುದು.

ಆ ಶಾಸನದ ಕೊನೆಯಭಾಗದಲ್ಲಿ ಎರಡು ಕಂದಪದ್ಯಗಳು ಕೆತ್ತಲ್ಪಟ್ಟಿರುವವು. ಅದರಲ್ಲಿ—

"ಪುರುಡಿಸುವೊಡೆಲವೊ ರೇವಣಾರ್ಯನೊಳೆಂದುಂ"
"ನಿನ್ನಳವೊ ಚಿತ್ರದ ಕರದೊಳ್ಪಂ ಕಂಠದೊಳ್ ಬರೆವ ರೇವನ ಕಂಠಕೆ"

ಇತ್ಯಾದಿ ವಾಕ್ಯಗಳು ಉಲ್ಲಿಖಿತವಾಗಿರುವವು. ಈ ಪದ್ಯಗಳಲ್ಲಿ ರೇವಣಾರ್ಯನೆಂಬುವನು ಕಂಠದಿಂದ (ಲೋಹ ಲೇಖನಿಯಿಂದ) ಅಕ್ಷರಗಳನ್ನು ಅತ್ಯಂತ ಸುಂದರವಾಗಿ ಬರೆಯುತ್ತಿದ್ದನೆಂದು ಅವನ ಪ್ರಶಂಸೆಯು ವಿಶೇಷವಾಗಿ ಮಾಡಲ್ಪಟ್ಟಿರುವದು.

ಇದಲ್ಲದೆ ಇದೇ ಶಾಸನಪುಸ್ತಕದ ೧೩೧ ನೆಯ ಪುಟದಲ್ಲಿ ಬಳ್ಳಾರಿ ಡಿ|| ಆಲೂರು ತಾಲೂಕು ರಾಮದುರ್ಗ ಗ್ರಾಮದ ಭೋಗೇಶ್ವರ ದೇವಾಲಯದಲ್ಲಿರುವ ಒಂದು ಶಾಸನವು ಮುದ್ರಿಸಲ್ಪಟ್ಟಿರುವದು. ಈ ಶಾಸನದಲ್ಲಿ ಚಾಲುಕ್ಯ ವಿಕ್ರಮಶಕ ೪ (ಕ್ರಿ.ಶ. ೧೦೭೯) ಸಿದ್ಧಾರ್ಥಿ ಸಂವತ್ಸರ ಪುಷ್ಯಮಾಸ ಅಮಾವಾಸ್ಯೆ ಬೃಹಸ್ಪತಿವಾರ ಉತ್ತರಾಯಣ ಪುಣ್ಯಕಾಲ, ಸಂಕ್ರಾಂತಿ ದಿವಸ ಸೋಮೇಶ್ವರದೇವರಿಗೆ ದಾನಮಾಡಿದ ವಿಷಯವು ಉಕ್ತವಾಗಿರುವದು. ಇದರಲ್ಲಿ—

“ ಶ್ರೀಮನ್ಮಹಾಮಂಡಳೇಶ್ವರ ಜೋಗಿಪ್ಪೈಯರ ಸರ್ಗ್ಗ ದಂಡನಾಯಕ ರೇವರಸನು ಕರಣದ ಬಾವಿರಾಜನು ರಾಜಾಧ್ಯಕ್ಷ ಎರೆಮಯ್ಯನಾಯಕನು ಮಿಳ್ದು ಮೂವರ ಬಿನ್ನಪದಿಂ ”

ಇತ್ಯಾದಿ ವಾಕ್ಯಗಳು ಕೆತ್ತಲ್ಪಟ್ಟಿರುವವು. ಇದರಲ್ಲುಕ್ತವಾಗಿರುವ ರೇವರಸನೆಂಬವನು ಶ್ರೀರೇವಣಸಿದ್ಧರ ಹೆಸರನ್ನಿಟ್ಟುಕೊಂಡವನಾಗಿದ್ದಾನೆ. ಈ ಮಹಾತ್ಮರ ಹೆಸರನ್ನು ಈ ಕಾಲದಲ್ಲಿಯೂ ಸಹ “ ರೇವಯ್ಯ, ರೇವಣ್ಣ, ರೇವಪ್ಪ ” ಇತ್ಯಾದಿಯಾಗಿ ಇಟ್ಟುಕೊಳ್ಳುವದು ರೂಢಿಯಲ್ಲಿರುವದು. ಕ್ರಿ.ಶ. ೮ ನೆಯ ಶತಮಾನದಲ್ಲಿದ್ದ ರೇವಣನಾಥರಾಜನ ವಿಷಯವೂ, ಕ್ರಿ.ಶ. ೧೧ ನೆಯ ಶತಮಾನದಲ್ಲಿದ್ದ ರೇವಣಾರ್ಯ ಮತ್ತು ರೇವರಸರ ವಿಷಯವೂ ಶಿಲಾಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುವದರಿಂದ, ಪೂರ್ವ ಕಾಲದಲ್ಲಿ ಅನೇಕ ಜನರು ಈ ಮಹಾತ್ಮರ ಹೆಸರನಿಟ್ಟುಕೊಳ್ಳುತ್ತಿದ್ದರೆಂದೂ, ಆ ಕಾಲದಲ್ಲಿ ಈ ಮಹಾತ್ಮರ ಪವಿತ್ರನಾಮವು ಜಗತ್ಪೂಜ್ಯವಾಗಿ ಮೆರೆಯುತ್ತಿತ್ತೆಂದೂ ಸ್ಪಷ್ಟವಾಗಿ ತೋರಿಬರುತ್ತದೆ.

ಕ್ರಿ. ಶ. ೧೦೬೦ ರಲ್ಲಿದ್ದ ಶ್ರೀಪತಿ ಪಂಡಿತಾರಾಧ್ಯರು ತಮ್ಮಿಂದ ಬರೆಯಲ್ಪಟ್ಟಿರುವ ಶ್ರೀಕರಭಾಷ್ಯದ ಪ್ರಾರಂಭದಲ್ಲಿ—

ಶ್ರೀಮಚ್ಛಿವಾಚಾರವಿಚಾರದೀಕ್ಷಂ ಸ್ವಶಿಷ್ಯಸತ್ತ್ರೀಣನಪೂರ್ಣಪಕ್ಷಂ ।
ದುರ್ವಾರಕಾಮಾದಿವಿದಾರದಕ್ಷಂ ಭಜಾಮ್ಯಹಂ ರೇವಣಕಲ್ಪವೃಕ್ಷಂ ॥

ಎಂದು ಈ ಮಹಾತ್ಮರನ್ನು ಅಸಾಧಾರಣ ಪೂಜ್ಯಬುದ್ಧಿಯಿಂದ ಕೊಂಡಾಡಿರುವರಲ್ಲದೆ, ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಅನೇಕ ಕಡೆಗೆ ಇವರ ಪವಿತ್ರನಾಮವನ್ನು ಉಲ್ಲೇಖಿಸಿರುವರು.

ಪೂರ್ವಕಾಲದಲ್ಲಿ " ಈಶಾನಶಿವಗುರು " ಎಂಬವರು ಸಂಸ್ಕೃತ ಭಾಷೆಯಲ್ಲಿ ಈ ಮಹಾತ್ಮರ ಚರಿತ್ರವನ್ನು ಬರೆದಿರುವ ವಿಷಯವು, ಬೊಮ್ಮರಸನು ಬರೆದಿರುವ ರೇವಣಸಿದ್ಧೇಶ್ವರ ಪುರಾಣದಿಂದ ತಿಳಿದುಬರುವುದು.

ಈಶಾನಶಿವಗುರುಗಳು ಕ್ರಿ. ಶ. ೯೫೦ ರಲ್ಲಿದ್ದರೆಂಬ ವಿಷಯವು ಕಡಪಾ ಡಿ॥ ಸಿದ್ಧವಟಂ ತಾ॥ ದೊಂಗಲಸಾನಿ ಗ್ರಾಮದ ಶಿವಾಲಯದಲ್ಲಿರುವ ಶಿಲಾಶಾಸನದಿಂದ ತಿಳಿದುಬರುವದು. ಈ ಶಾಸನದ ವಿಷಯವು ಮದ್ರಾಸ್ ಓರಿಯಂಟಲ್ ಲೈಬ್ರರಿಯಲ್ಲಿರುವ ಕರ್ನಲ್ ಕೆ. ಮೆಕೆಂಜಿಯವರ ರಿಪೋರ್ಟಿನ (ತಾ॥ ೧೫-೪-೧೯೨೮) ೧೫೯ ನೆಯ ಪೇಜಿನಲ್ಲಿ ಬರೆಯಲ್ಪಟ್ಟಿರುವದು.

ಈವರೆಗೆ ವಿವರಿಸಿರುವ ಪ್ರಾಚೀನ ಗ್ರಂಥಾಧಾರಗಳನ್ನೂ ಶಿಲಾಶಾಸನಗಳನ್ನೂ ವಿಮರ್ಶಿಸಿದರೆ ಶ್ರೀರೇಣುಕಾಚಾರ್ಯರು ಪ್ರತಿಯೊಂದು ಯುಗದಲ್ಲಿಯೂ ಅವತರಿಸಿ ಅನೇಕಾನೇಕ ಅದ್ಭುತಲೀಲೆಗಳನ್ನು ಆಚರಿಸಿ ಜಗನ್ಮಾನ್ಯರಾಗಿ ಹೋಗಿರುವರೆಂಬುದು ಸ್ಪಷ್ಟವಾಗುತ್ತದೆ. ಅಸಾಧಾರಣ ಮಹಿಮಸಂಪನ್ನರಾದ ಈ ಮಹಾತ್ಮರ ಕೃಪಾವಿಶೇಷದಿಂದ ಸದ್ಯಃ ಜಗತ್ತಿಗೊದಗಿರುವ ಮಹಾವಿಪತ್ತು ದೂರವಾಗಿ ಸರ್ವತ್ರ ಸುಖಶಾಂತಿಗಳು ನೆಲಸಲೆಂದು ಆ ಪೂಜ್ಯಪಾದರನ್ನು ಪ್ರಾರ್ಥಿಸುತ್ತೇನೆ ಎಂಬುದಾಗಿ ಹೇಳಿರುವರು.

ಇದಲ್ಲದೆ ತಾ॥ ೨೬-೩-೧೯೪೫ ನೇ ದಿವಸ ಪುನಃ ಶ್ರೀ ಜಗದ್ಗುರು ರೇಣುಕಾಚಾರ್ಯರ ಜಯಂತಿಯ ನಿಮಿತ್ತವಾಗಿ ಮೈಸೂರು ಆಕಾಶವಾಣಿಯಲ್ಲಿ ಬೇರೆ ರೀತಿಯಲ್ಲಿ ಭಾಷಣಮಾಡಿದ ವಿಷಯವು ಪಂಚಾಚಾರ್ಯ ಪ್ರಭಾಪತ್ರಿಕೆಯಲ್ಲಿ ಪ್ರಸಿದ್ಧವಾಗಿರುತ್ತದೆ.



# ಪಂ|| ಕಾಶೀನಾಥಶಾಸ್ತ್ರಿಗಳವರ ವರ್ಧಂತೀ ಮಹೋತ್ಸವಗಳು

---

## ಕಾಶೀಪೀಠದಲ್ಲಿ

ಕ್ರಿ.ಶ. ೧೯೪೬ ನೇ ಜ್ಯೇಷ್ಠ ಶು|| ೪ ಸೋಮವಾರ ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಮಹಾಮಠದಲ್ಲಿ ಗುರುಕುಲ ಶಿರೋಮಣಿಗಳೂ, ಪಂಚಾಚಾರ್ಯ ಪ್ರಾಣರೂ ಧರ್ಮಸುಧಾರಕರೂ ಆದ ನಾಗನೂರು ಬೃಹನ್ಮಠಾಧ್ಯಕ್ಷ ಪಂ|| ಶ್ರೀಕಾಶೀನಾಥಶಾಸ್ತ್ರಿಗಳವರ ೫೧ ನೇ ವರ್ಷದ ವರ್ಧಂತ್ಯುತ್ಸವವನ್ನು ಬಹು ವಿಜೃಂಭಣೆಯಿಂದ ಆಚರಿಸಲಾಯಿತು. ಅಂದು ಪ್ರಭಾತ ಸಮಯದಲ್ಲಿ ವೈದಿಕವೃಂದದಿಂದ ಗಂಗೋದಕದೊಡನೆ, ಜಗದ್ಗುರು ವಿಶ್ವಾರಾಧ್ಯಮೂರ್ತಿಗೂ ಜ್ಞಾನಪೀಠಕ್ಕೂ ವಿಧ್ಯುಕ್ತವಾಗಿ ರುದ್ರಾಭಿಷೇಕಾದಿ ಮಹಾಪೂಜೆಗಳು ನೆರವೇರಿಸಲ್ಪಟ್ಟ ಮೇಲೆ ೧೨ ಘಂಟೆಗೆ ಆಮ್ರರಸಾಯನ, ಭಕ್ಷ್ಯಭೋಜ್ಯಭೂರಿದಕ್ಷಿಣಾದಿಗಳಿಂದ ಗಣಸಂತರ್ಪಣವು ನಡೆಯಿತು.

ಐದು ಘಂಟೆಗೆ ಚಿತ್ರಭವನದಲ್ಲಿ ಶ್ರೀಜಗದ್ಗುರುಗಳವರ ಸಾನಿಧ್ಯದಲ್ಲಿ ಸಭೆ ಸೇರಿತು. ಅನೇಕ ಯಾತ್ರಿಕ ಮಹಾಜನರೂ ವಿದ್ವಾಂಸರೂ ಉತ್ಸಾಹದಿಂದ ನೆರೆದಿದ್ದರು. ಅನುಗೊಂಡ ಪಂ|| ಗಂಗಾಧರಶಾಸ್ತ್ರಿಗಳಿಂದ ಮಂಗಲ ಗೀತೆಯಾಗಲು ರೌಡಕುಂದಿ ಶ್ರೀ ಷ. ಬ್ರ. ಸಿದ್ಧರಾಮಶಿವಾಚಾರ್ಯರು ವರ್ಧಂತಿಯ ನಿಮಿತ್ತವಾಗಿ ತಮ್ಮ ಕವಿತೆಯನ್ನು ಓದಿದರು. ಆ ಮೇಲೆ ಷ. ಬ್ರ. ಪಂ|| ಶ್ರೀಕೈಲಾಸಲಿಂಗಶಿವಾಚಾರ್ಯಸ್ವಾಮಿಗಳು ಶ್ರೀ ಪಂಡಿತರ ಕಾರ್ಯಕಲಾಪಗಳನ್ನು ವಿವರಿಸುತ್ತ ಸ್ಫೂರ್ತಿದಾಯಕವಾದ ಭಾಷಣ ಮಾಡಿದರು. ರಾಯಚೂರ ಶ್ರೀ ಷ. ಬ್ರ. ಗುರುಲಿಂಗಶಿವಾಚಾರ್ಯ ಮತ್ತು ಮುಳಗುಂದ ಹಿರಿಯ ಮಠದ ವೇ|| ಪುರದಯ್ಯನವರ ಸುಶ್ರಾವ್ಯಭಾಷಣಗಳಾದವು. ಬೀರೂರ ಶ್ರೀ ಸೋಮಶೇಖರ ಶರ್ಮರು ಕಾಶೀ ವೀರಶೈವ ವಿದ್ವತ್ಸಂಘದವರಿಂದ ಸಂಕಲ್ಪಿತವಾದ "ವೀರಶೈವ ವಿಜ್ಞಾನ" ಎಂಬ ಮಹಾಗ್ರಂಥದ ಮಹತ್ತ್ವಪೂರ್ಣವಾದ ಪರಿಚಯವನ್ನು ಓದಿದರು.

ಆಗಲೇ ಆ ಮಹಾಗ್ರಂಥದ ಸಿದ್ಧಿಗಾಗಿ ಶ್ರೀ ಜಗದ್ಗುರುಗಳವರು ಐದುನೂರು ರೂಪಾಯಿಗಳ ಉದಾರಾಶೀರ್ವಾದವನ್ನಿತ್ತರು ಈ ಪ್ರಶಂಸನೀಯವಾದ ಕಾರ್ಯದಿಂದ ಸಭಿಕರ ಆನಂದಕ್ಕೆ ಪಾರವೇ ಇರಲಿಲ್ಲ. ಇಂತಹ ಮಧುರ ಸನ್ನಿವೇಶದಲ್ಲಿ ಮಹಾಸನ್ನಿಧಿಯವರ ಮನೋಹರವಾದ ಭಾಷಣವ ಆರಂಭವಾಯಿತು.

ಶ್ರೀಜಗದ್ಗುರುಗಳವರು ಪಂ|| ಶ್ರೀ ಕಾಶೀನಾಥಶಾಸ್ತ್ರಿಗಳವರ ಸಾಹಸಪೂರ್ಣವಾದ ಸತ್ಯಶುದ್ಧವಾದ ಕಾರ್ಯಕಲಾಪಕ್ಕಾಗಿಯೂ, ಶ್ರೀ ಜಗದ್ಗುರು ಪಂಚಾಚಾರ್ಯರಲ್ಲಿರುವ ಅವರ ಅನಿತರಸಾಧಾರಣವಾದ ಭಕ್ತಿಗಾಗಿಯೂ ಪಂಚಪೀಠಗಳಿಗೆ ಶರೀರದ ಹಂಗು ದೊರೆದು ಸಲ್ಲಿಸಿದ ಅವರ ಅನುಪಮವಾದ ಸೇವೆಗಾಗಿಯೂ ಮಹಾನಂದವನ್ನು ವ್ಯಕ್ತಗೊಳಿಸಿ ಪಂಡಿತರಿಗೆ ಧರ್ಮೋದ್ಧಾರ ಕಾರ್ಯದಲ್ಲಿ ವಿಪತ್ತುಗಳು ಬಂದರೂ ಅವರ ಉಜ್ವಲವಾದ ಆಚಾರ್ಯಭಕ್ತಿಯೇ ಅವರನ್ನು ರಕ್ಷಿಸಿರುವುದೆಂದೂ ಶ್ರೀಜಗದ್ಗುರು ವಿಶ್ವಾರಾಧ್ಯನ ಸಂಪೂರ್ಣವಾದ ಆಶೀರ್ವಾದವು ಅವರ ಮೇಲೆ ಸದಾ ಇರಲೆಂದೂ ಮುಂತಾಗಿ ವಿವರಿಸಿದರಲ್ಲದೆ ಇನ್ನು ಸ್ವಲ್ಪ ದಿವಸಗಳ ಮೇಲೆ ಕಾಶಿಯಲ್ಲಿ ಅಖಿಲ ವೀರಶೈವ ವಿದ್ವತ್ಸಂಘವನ್ನು ಕರೆಯಬಹುದೆಂದೂ ಈ ಮಹಾಗ್ರಂಥದ ನಿರ್ಮಾಣ ಯೋಜನೆಯನ್ನು ಶೀಘ್ರದಲ್ಲಿಯೇ ನಡೆಸಲು ಸಂಪಾದಕ ಕಾರ್ಯಕಾರಿಣೀ ಸಮಿತಿಯೊಂದು ಏರ್ಪಡಬೇಕೆಂದೂ ಪ್ರಾಸಂಗಿಕವಾಗಿ ಸೂಚಿಸಿ, ಪಂ|| ಶ್ರೀ ಕಾಶೀನಾಥಶಾಸ್ತ್ರಿಗಳು ದೀರ್ಘಾಯುಗಳಾಗಲೆಂದು ಶುಭಾಶೀರ್ವಾದಗಳನ್ನಿತ್ತರು.

ಆ ಮೇಲೆ ಜಗದಾಚಾರ್ಯರ ಭಾವಚಿತ್ರಕ್ಕೆ ಮಂಗಳಾರತಿಯಾಗಿ ಪ್ರಸಾದವಿನಿಯೋಗದೊಡನೆ ಸಭಾವಿಸರ್ಜನೆಯಾಯಿತು. ಬಳಿಕ ಸಂದಾನ ಸಮಿತಿಯು ಏರ್ಪಟ್ಟು ಶ್ರೀಜಗದ್ಗುರು ಮಹಾಸ್ವಾಮಿಗಳವರೇ ಅಧ್ಯಕ್ಷರಾಗಬೇಕೆಂದು ಸರ್ವಾನುಮತಿಯಿಂದ ನಿರ್ಣಯವಾಯಿತು. ಕಾರ್ಯಕರ್ತೃಗಳನ್ನು ಕೆಳಗಿನಂತೆ ಆರಿಸಲಾಗಿದೆ.

ಮಂತ್ರಿ :—

ಶ್ರೀ ಸಿದ್ಧರಾಮಶಿವಾಚಾರ್ಯರು ರೌಡಕುಂದಿ.

ಸಂಯುಕ್ತ ಕಾರ್ಯದರ್ಶಿಗಳು :—

ಶ್ರೀ ಗುರುಸಿದ್ಧಸ್ವಾಮಿ ಮುರ್ದೇನೂರು,

ಶ್ರೀ ಗುರುಲಿಂಗಶಿವಾಚಾರ್ಯರು ರಾಯಚೂರು.

ನಿರೀಕ್ಷಕ :—

ಶ್ರೀ ಬೀರೂರು ಸೋಮಶೇಖರಶರ್ಮರು.

ಕೋಶಾಧ್ಯಕ್ಷ:—

ಶ್ರೀ ಗಂಗಾಧರಶಾಸ್ತ್ರಿಗಳು ಅನುಗೊಂಡ.

ಸದಸ್ಯರು :—

ವಿದ್ವತ್ಸಂಘದ ಸರ್ವವಿದ್ವಾಂಸರು

ಕಾಶೀ ವೀ. ವಿ. ಸಂಘದ ಕಾರ್ಯದರ್ಶಿ
ಗಂಗಾಧರಶರ್ಮಾ ಅನುಗೊಂಡ.

## ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರ ವರ್ಧಂತೀ ಮಹೋತ್ಸವದಲ್ಲಿ ರಚಿಸಿ ಪಠಿಸಿದ ಕವನ

"ಮುಕ್ತಿಪಂಚಕ" ನಾಮದಿಂ ಪೆಸರಾಂತ ಚಿತ್ಸುಧೆಯ
ವರರೂಪದಿಂದಿತ್ತ ಆಚಾರ್ಯ ವಿಮಲಚರ್ಯ ।
ಪಾಖಂಡವಾದಗಳ ಖಂಡಿಸುತೆ ಪಾಂಡಿತ್ಯ
"ಪ್ರಭೆ" ಯಿಂದ ಪ್ರಜ್ವಲಿಪ ಕಾಶೀನಾಥಸೂರ್ಯ ।
ಬರೆದು ಬರೆಯಿಸಿ ಮತ್ತೆ ಒರೆದು ತತ್ತ್ವಾರ್ಥಗಳ
ಧರೆಯ ಮರವೆಯ ಕಳೆದ ಜ್ಞಾನಯೋಗಿ ।
ವೇದಾಗಮಾದಿಸುಮತತ್ತ್ವಗಂಧವ ಜಗದಿ
ಬಿತ್ತರಿಸಲುಜ್ಜುಗಿಪ ಮಲಯಪವನ ।
ರೇಣುಕರ ದಿವ್ಯೋಪದೇಶ ವಚನಾಮೃತವ
ನುಂಡುಂಡು ಮೈಮರೆದು ಮೆರೆವ ತುಂಬಿ ।
ಪಂಚಜಗದಾಚಾರ್ಯರಡಿಗಳಿಗೆ ಭವ್ಯವಹ
ದೇಹಪೀಠವನರ್ಪಿಸಿದ ಪುಣ್ಯಪುರುಷ ।

ಹಿಡಿದ ಕಜ್ಜದೊಳೆನಿತು ಎಡರುಗಳು ಬಂದೊಡಂ
ವಿಜಯವನು ಸಾಧಿಸಿದ ವೀರಪುರುಷ ।
ನಿನ್ನ ಹಿರಿಮೆಯನೆನ್ನ ಬರೆಗಡ್ಡಿ ಬರೆಯುವದೆ?
ಮನದ ನೋಂಪಿಯ ಸಲಿಸಲಿಂತು ಬರೆವೆ ।
ಸರಸಕವಿಗಳು ಮತ್ತೆ ಮೇಲ್ತರದ ವಾಗ್ಮಿಗಳು
ಲೇಖಕರು ಪ್ರತಿಭಾನ್ವಿತಶಕ್ತಿಯುತರು ।
ಸದ್ಧರ್ಮಬೋಧಕರು ಸಾಹಿತ್ಯರಂಗದಲಿ
ಪಂಡಿತರೆ! ಯಾರಲ್ಲ ಪೇಳಿ ನೀವು? ।
"ವೀರಶೈವರತ್ನ" ರೂಪಿನ ರನ್ನವನು ನೀವು
ಸರಸತಿಯ ಸಿಂಗಾರಕಿತ್ತಿರಲ್ತೆ? ।
ಶ್ರುತಿಧರ್ಮವನು ಮತ್ತೆ ಸ್ಥಿರಗೊಳಿಸಿದಾ ಧವಲ
ಕೀರ್ತಿಯನು ಪಡೆದವರು ನೀವೆ ಅಲ್ತೆ? ।
ನೀವ್ ಬರೆದುದೆಲ್ಲವುಂ ಮಾನ್ಯವೈ ಜಗಕೆ
ನೀವೊರೆದುದೆಲ್ಲವುಂ ಪೀಯೂಷವೈ ಜನಕೆ!
ನಿಮ್ಮ ಉದಯದಿ ಇಂದು ಗುರುಕುಲಕೆ ಕಳೆ ಬಂತು
ಅಧರ್ಮದಾ ಶಿಖರ ಕಳಚಿ ಬಿತ್ತು ।
ವೀರಶೈವರಿತಿಹಾಸದೋಲೆಯೊಳು ಮೇಲ್ಗಡೆಗೆ
ನಿಮ್ಮ ಶುಭನಾಮದಾ ಮುದ್ರೆ ಬಿತ್ತು ।
ಸ್ಕಂದಗೋತ್ರದೊಳುದಿಸಿ ಸ್ಕಂದನೊಲು ದೃಢಬ್ರಹ್ಮ
ಚರ್ಯವ್ರತವ ಧರಿಸಿದುದು ಸಾರ್ಥವಾಯ್ತು ।
ವೀರಶೈವರಿದ್ದೆಡೆಗಳೆಲ್ಲೆಲ್ಲಿಯುಂ ಜನತೆ
ನಿಮ್ಮ ನಾಮವನೆತ್ತಿ ಘೋಷಿಸಿದುದಾಯ್ತು ।
ಈ ನಿಮ್ಮ ವರ್ಧಂತಿ ವರುವರುಷ ವರ್ಧಿಸಲಿ
ರೇಣುಕರು ಈ ಯೆನ್ನ ಮನದಾಶೆಯೀಡೇರಿಸಲಿ ॥

ಬಾಲಕವಿ ರವಡಕುಂದಿ ಹಿರೇಮಠ
ಶ್ರೀಜಗದ್ಗುರು ವಿಶ್ವಾರಾಧ್ಯ ಗುರುಕುಲ ಕಾಶೀ.

## ವೀರಶೈವ ವಿಜ್ಞಾನ ಎಂಬ ಪಂ॥ ಶ್ರೀಕಾಶೀನಾಥಶಾಸ್ತ್ರಿಗಳವರ ಸನ್ಮಾನಗ್ರಂಥ

ಗುರುವರ್ಗದಲ್ಲಿಯೂ ವೀರಶೈವ ಸನಾತನಮತಾನುಯಾಯಿಗಳಲ್ಲಿಯೂ ಸ್ಫೂರ್ತಿಯನ್ನು ಪ್ರಚಾರಮಾಡಿದ ಅತುಲಕೀರ್ತಿಯು ನಾಗನೂರು ಬೃಹನ್ಮಠಾಧ್ಯಕ್ಷ ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರಿಗೆ ಸಲ್ಲತಕ್ಕದಾಗಿದೆ. ಕೈ॥ ವಾ॥ ಉಜ್ಜಯಿನೀ ಜಗದ್ಗುರುಗಳವರ ಕೃಪಾಕಟಾಕ್ಷವೂ ಅಮೋಘವಾಗಿತ್ತು. ಕಾಶೀಜಗದ್ಗುರು ಮಹಾಪೀಠವು ಈ ಧರ್ಮಪ್ರಚಾರಕ್ಕೆ ಉಗಮಸ್ಥಾನವೆಂಬುದೂ ಸುಪರಿಚಿತವೇ ಸರಿ! ಇಲ್ಲಿ ಶ್ರೀಜಗದ್ಗುರು ಪಂಚಾಚಾರ್ಯ ಮಹಾಸಮ್ಮೇಲನವು ೧೯೧೮ ನೆಯ ಇಸ್ವಿಯಲ್ಲಿ ಸೇರಿದಾಗಲೇ ಇದಕ್ಕೆ ಪ್ರಾಣಪ್ರತಿಷ್ಠೆಯಾಯಿತು. ಪುನಃ ಎರಡನೆಯ ಸಮ್ಮೇಳನ ನಡೆಯಲಿಲ್ಲ. ಆದರೂ ಈ ಇಪ್ಪತ್ತೈದು ವರ್ಷಗಳ ಕಾಲದಲ್ಲಿ ಗುರುವರ್ಗವೂ ತದನುಯಾಯಿಗಳೂ ಅನೇಕ ಮಹತ್ವಪೂರ್ಣಕಾರ್ಯಗಳನ್ನು ನಿರ್ವಹಿಸಿದ್ದಾರೆ. ಇದು ಸಮಾಜಕ್ಕೆ ಚಿರಮಾನನೀಯವಾಗಿರುವುದರಿಂದ ಇದರ ಗುರಿಗುಟ್ಟುಗಳನ್ನು ಪ್ರಶಸ್ತವಾಗಿ ಗ್ರಂಥಸ್ಥಮಾಡಬೇಕಾಗಿದೆ. ಪಂ॥ ಕಾಶೀನಾಥಶಾಸ್ತ್ರಿಗಳವರಿಗೆ ಇದೇ ವ್ಯಯ ಜ್ಯೇಷ್ಠ ಶುದ್ಧ ಚೌತಿ ಸೋಮವಾರದಲ್ಲಿ ೫೧ ನೆಯ ವರ್ಷವು ಪ್ರಾರಂಭವಾಗುತ್ತಿದೆ. ಗುರುವರ್ಗದವರ ಜಾಗೃತಿಯ ಕಾಲದಲ್ಲಿಯೂ ಇಪ್ಪತ್ತೈದು ವರ್ಷಗಳು ಕಳೆದು ಮೂರನೆಯ ಪಟ್ಟವಾರಂಭವಾಗಿದೆ. ಈ ಕಾರಣಗಳಿಂದ ಅಖಿಲಭಾರತವರ್ಷ ಗುರುವರ್ಗಸಂಘದ ರಜತ ಜಯಂತೀಮಹೋತ್ಸವ ಸ್ಮಾರಕವಾಗಿ ಮಹಾಗ್ರಂಥವನ್ನು ರಚಿಸಿ ಉತ್ಸವ ಪೂರ್ವಕವಾಗಿ ಶ್ರೀಪಂಡಿತವರ್ಯರಿಗೆ ಸಮರ್ಪಿಸಬೇಕೆಂದು ಸಂಕಲ್ಪಿಸಿದ್ದೇವೆ.

ವೀರಶೈವಸಿದ್ಧಾಂತದ ಅನೇಕ ಸಮಸ್ಯೆಗಳಿಗೆ ಈ ಕಾಲವು ಉತ್ತರಗಳನ್ನೊದಗಿಸಿದೆ. ಕರ್ಣಾಟಕ ಮಹಾರಾಷ್ಟ್ರಾಂಧ್ರದೇಶಗಳಲ್ಲಿ ಸನಾತನ ಧರ್ಮಪ್ರಚಾರವೂ ಆಚಾರ್ಯ ತತ್ತ್ವಸಂಸ್ಕಾರವೂ ದೃಢವಾಗಿ ನಡೆದಿವೆ. ಬೀರೂರು ವೀರಶೈವ ಮಹಾಸಭೆಯ ಘಟನೆ, ಉಜ್ಜಯಿನೀ ಜಗದ್ಗುರುಗಳವರ ತಪಃಪ್ರಭಾವ, ಕೇದಾರ ಜಗದ್ಗುರುಗಳ ಸಂಚಾರ, ಚರಪಟ್ಟಾಧಿಕಾರ ಸಮ್ಮೇಲನಗಳು, ರಂಭಾಪುರೀ ಮಹಾಪೀಠದ ವಟುಚುನಾವಣೆ, ಪರಳೀ

ಪ್ರಕರಣ, ಉಜ್ಜಯಿನೀ ರಂಭಾಪುರೀ ಜಗದ್ಗುರುಗಳ ದಿಗ್ವಿಜಯೋತ್ಸವ ಗಳು, ಪಂಚಾಚಾರ್ಯಪ್ರಭೆಯು ಜನ್ಮ, ಇತರ ಪತ್ರಿಕೆಗಳಲ್ಲಿ, ಧರ್ಮಗ್ರಂಥ ಪ್ರಚಾರ, ಆಚಾರ್ಯ ಜಯಂತಿಗಳು, ಧರ್ಮ ಪರಿಷತ್ತುಗಳು, ಅನುಷ್ಠಾನ ಜಪತಪಗಳ ಪ್ರಸಾರ, ಗುರುಕುಲ ವಿದ್ಯಾಲಯಗಳು, ಬೋರ್ಡಿಂಗುಗಳು ಕಾಶೀ ನೂತನ ಜಗದ್ಗುರು ಪಟ್ಟಾಭಿಷೇಕ ಮುಂತಾದ ಮಹತ್ತ್ವದ ಸಮಾ ಚಾರಗಳು ಘಟಿಸಿವೆ. ಈ ಬಗ್ಗೆ ಕಾಶೀ, ರಂಭಾಪುರೀ, ಉಜ್ಜಯಿನೀ, ಕೇದಾರ, ಗುಂತಕಲ್, ಕುಂದಗೋಳ, ಮನಗೋಳಿ, ನವಲಗುಗುಂದ, ಸತ್ತಿಗೇರಿ, ಕಲಾದಿಗಿ, ಹಾವೇರಿ, ರಾಣೆಬೆನ್ನೂರು, ಬಳ್ಳಾರಿ, ಕೊಟ್ಟೂರು, ಹೊಳಗುಂದಿ, ಹರಪನಹಳ್ಳಿ, ಹಡಗಲಿ, ಮೈಸೂರು, ಬೆಂಗಳೂರು, ಶಿವ ಮೊಗ್ಗ, ತಿಪಟೂರು, ಬೀರೂರು, ಕಲ್ಲೊಳ್ಳಿ, ಕಾಕಬಾಳು, ಮೆಟ್ರಿ, ಹೊಸ ಪೇಟೆ, ದಾವಣಗೆರೆ, ಹರಿಹರ, ಹುಬ್ಬಳ್ಳಿ, ಶಿರೋಳ, ಕೊಣ್ಣೂರು, ಹೂಲಿ ಸೂಡಿ, ಹರಲಾಪುರ, ಸಿಗ್ಗಲಿ, ಬಿಚ್ಚಾಲಿ, ಜೇವರಗಿ, ಲಕ್ಷ್ಮೇಶ್ವರ, ಹೋಟಗಿ, ಸೊಲ್ಲಾಪುರ, ಬಾರ್ಶಿ, ಮಂಗಳವೇಢೆ, ಪಂಢರಪುರ, ಮೈಸಾಳ, ಗುಲಬರ್ಗ, ದುಬಲಗುಂಡಿ, ಚಿಂಚೋಳಿ, ರೇವಗಿ, ಮೈಂದರ್ಗಿ, ಬೆಳಗಾಂವ, ಗದಗ, ಬೆಟಗೇರಿ, ಮುಳಗುಂದ, ಚಿಂಚಲಿ, ಸಿಕಿಂದ್ರಾಬಾದು, ಕೊಲನುಪಾಕ, ಬೆಜವಾಡ, ಮಾಚರ್ಲ ಮುಂತಾದ ಸ್ಥಳಗಳಲ್ಲಿಯ ಪೀಠಗಳೂ, ಮಠಗಳೂ ಪ್ರಮುಖರೂ, ತಮ್ಮ ತಮ್ಮ ತನುಮನಧನಗಳನ್ನು ವಿನಿಯೋಗಿಸಿ, ವೀರಶೈವ ಸನಾತನ ಸಿದ್ಧಾಂತವನ್ನು ಪರಿಪಾಲಿಸುತ್ತ ಪ್ರಚಾರಗೊಳಿಸಿದ್ದಾರೆ. ಇದು ಉದಾಹರಣಾರ್ಥವಾಗಿ ಸೂಚಿತವಾಯಿತೇ ಹೊರತು ಎಲ್ಲ ವಿಷಯ ಗಳೂ ಬಂದಿವೆಯೆಂದು ಭಾವಿಸಬಾರದು.

ಇಷ್ಟು ಜನ ಪ್ರಮುಖರು ; ಇಷ್ಟು ಸಂಸ್ಥೆಗಳು ಇಷ್ಟು ದೀರ್ಘಕಾಲ ಪರಿಶ್ರಮಿಸಿದುದರ ಚರಿತ್ರೆಯನ್ನು ರಕ್ಷಿಸಿಕೊಳ್ಳುವುದು ಪರಮಾವಶ್ಯಕ ವಾಗಿದೆ. ಯಾವ ಪೀಠವು ಈ ಜಾಗೃತಿಗೆ ಮೂಲಕಾರಣವಾಗಿದೆಯೋ ಅದೇ ಶ್ರೀಕಾಶೀ ಮಹಾಪೀಠವು ಈ ಮಹಾಗ್ರಂಥಕ್ಕೆ ಉದ್ಧಾಮಸ್ಥಾನವಾಗಲಿದೆ. ಶ್ರೀಕಾಶೀ ಜಗದ್ಗುರು ವಿಶ್ವಾರಾಧ್ಯಜ್ಞಾನಸಿಂಹಾಸನಾಧೀಶ್ವರರೂ, ಜ್ಞಾನ ನಿಧಿಗಳೂ, ಸರ್ವಸಮರ್ಥರೂ ಆದ ಶ್ರೀ ೧೦೮ ಜಗದ್ಗುರು ವೀರಭದ್ರಶಿವಾ ಚಾರ್ಯ ಮಹಾಸ್ವಾಮಿಗಳವರ ದಿವ್ಯವಾದ ಆಶೀರ್ವಾದಾಶ್ರಯವು ನಮಗೆ ಲಭಿಸಿರುವುದೆಂದು ತಿಳಿಸಲು ಆನಂದಭರಿತರಾಗಿದ್ದೇವೆ. ಇದಲ್ಲದೆ ಇಂತಹ

ಸಮರ್ಥವಾದ ಗ್ರಂಥನಿರ್ಮಾಣಕ್ಕೆ ಬೇಕಾಗಿರುವ ಜ್ಞಾನಮಂದಿರವು ಶ್ರೀ ಕಾಶೀ ಮಹಾಪೀಠದಲ್ಲಿ ಸದ್ಯಃ ರಾಜಿಸುತ್ತಿರುವುದು ಒಂದು ಮಹತ್ವದ ಸಮಾಚಾರವಾಗಿದೆ. ಇದರಲ್ಲಿ ವೀರಶೈವ ಧರ್ಮನಿರ್ಣಯಕ್ಕೆ ಬೇಕಾಗಿರುವ ಸರ್ವ ಭಾಷಾಗ್ರಂಥಗಳೂ, ಸಾಮಗ್ರಿಯೂ ಪರಿಪೂರ್ಣವಾಗಿದೆ. ಶ್ರೀರಂಭಾಪುರೀ, ಉಜ್ಜಯಿನೀ, ಶ್ರೀಶೈಲ ಸಿಂಹಾಸನಾಧೀಶ್ವರರಾದ ಶ್ರೀಜಗದ್ಗುರು ಮಹಾಸ್ವಾಮಿಗಳವರ ಆಶ್ರಯವೂ ದೊರಕಿದೆ. ಮತ್ತು ಇತರ ಚರಪಟ್ಟಾಧ್ಯಕ್ಷರೂ ಪ್ರಮುಖರೂ, ವಿದ್ವಾಂಸರೂ ಮುಂತಾದವರ ಸಹಕಾರವನ್ನೂ ನಾವು ಅಪೇಕ್ಷಿಸುತ್ತ ಈ ಮಹಾಕಾರ್ಯವನ್ನು ಉಪಕ್ರಮಮಾಡಿದ್ದೇವೆ. ನಿಷ್ಪಕ್ಷವಾಗಿಯೂ ಈ ಕಾರ್ಯವನ್ನು ನಿರ್ವಹಿಸಬೇಕೆಂಬುದೇ ನಮ್ಮ ನಿಶ್ಚಯ.

## ಗ್ರಂಥಸ್ಥವಿಷಯಗಳು

೧ ವೀರಶೈವ ಮತದ ಸಿದ್ಧಾಂತ
೨ ಶಕ್ತಿವಿಶಿಷ್ಟಾದ್ವೈತ (ವಿಶಿಷ್ಟಾದ್ವೈತ, ವಿಶೇಷಾದ್ವೈತ, ಶಿವಾದ್ವೈತಗಳು)
೩ ಸದಾಚಾರವಿಜ್ಞಾನ
೪ ವೀರಶೈವ ಮತೋತ್ಪತ್ತಿ
೫ ವೇದದಲ್ಲಿ ವೀರಶೈವ ಮತ
೬ ಆಗಮಗಳಲ್ಲಿ ,,
೭ ಉಪನಿಷತ್ತಿನಲ್ಲಿ ,,
೮ ಪುರಾಣದಲ್ಲಿ ,,
೯ ಇತಿಹಾಸದಲ್ಲಿ ,,
೧೦ ಪರಮತಗ್ರಂಥಗಳಲ್ಲಿ ,,
೧೧ ಇಂಗ್ಲೀಷ್ ಗ್ರಂಥಗಳಲ್ಲಿ ,,
೧೨ ವೀರಶೈವಮತದ ಮೂಲಧರ್ಮಗ್ರಂಥಗಳು (ಸಂಸ್ಕೃತ)
೧೩ ಪ್ರಕಾಶಿತವಾದ ವೀರಶೈವ ವಾಙ್ಮಯ (ಸಂಸ್ಕೃತ, ಕನ್ನಡ, ತೆಲುಗು, ತಮಿಳು, ಮರಾಠಿ)
೧೪ ಅಪ್ರಕಾಶಿತ ವೀರಶೈವ ವಾಙ್ಮಯ

೧೫ ಆಧುನಿಕ ವೀರಶೈವ ವಾಙ್ಮಯ
೧೬ ಶ್ರೀ ಜಗದ್ಗುರು ಪಂಚಾಚಾರ್ಯರು
೧೭ ,, ಪಂಚಮಹಾಪೀಠಗಳು
೧೮ ಗುರುವರ್ಗದ ಸುಪ್ರಸಿದ್ಧ ಮಠಗಳೂ ಚರಪಟ್ಟಾಧ್ಯಕ್ಷರೂ
೧೯ ವೀರಶೈವ ದಿವ್ಯಜ್ಯೋತಿಗಳು
೨೦ ಆಗಂತುಕ ವೀರಶೈವರೂ ಅವರ ಚಳುವಳಿಯೂ
೨೧ ವೀರಶೈವ ಮತದ ಸುಧಾರಕರು
೨೨ ಮಠಗಳೂ ಮಂದಿರಗಳೂ
೨೩ ವಿರಕ್ತಮಠಗಳೂ ಸ್ವಾಮಿಗಳೂ
೨೪ ಸಮಾಜದ ವ್ಯವಸ್ಥೆ (ಪ್ರಾಚೀನ ಅರ್ವಾಚೀನ)
೨೫ ಶಿವಪೂಜಾರಹಸ್ಯ
೨೬ ಶಿವಯೋಗ ವಿವೇಕ
೨೭ ಶಿವವಿಜ್ಞಾನ
೨೮ ಶಿವನೂ ಲಿಂಗವೂ
೨೯ ಅಷ್ಟಾವರಣಗಳು
೩೦ ಷಟ್‌ಸ್ಥಲಗಳು
೩೧ ಪಂಚಾಚಾರಗಳು
೩೨ ಅರವತ್ತುನಾಲ್ಕು ಶೀಲಗಳು
೩೩ ಶಿವದೀಕ್ಷಾನಿರ್ಣಯ
೩೪ ಶಿವಸೂತ್ರ ವಿಧಾನ
೩೫ ವೀರಶೈವ ಸಂಸ್ಕಾರಗಳು
೩೬ ವರ್ಣಾಶ್ರಮ
೩೭ ರುದ್ರಾಧ್ಯಾಯ
೩೮ ಶಿವನೂ ರುದ್ರನೂ ವೇದಗಳೂ
೩೯ ಶ್ರೀಪತಿಪಂಡಿತಾರಾಧ್ಯರ ಕಾಲ
೪೦ ಮಲ್ಲಿಕಾರ್ಜುನ ಪಂಡಿತಾರಾಧ್ಯರು
೪೧ ವೀರಶೈವ ಮತದ ರಾಜರು, ರಾಜಕೀಯ ಪುರುಷರು
೪೨ ವೀರಶೈವ ವಣಿಜರು

೪೩ ವೀರಶೈವತ್ರಯ (ಸಾಮಾನ್ಯ, ವಿಶೇಷ, ನಿರಾಭಾರಿ)
೪೪ ಪಂಚಸೂತಕ ಸಮೀಕ್ಷೆ
೪೫ ಸ್ಥಾವರಲಿಂಗಪೂಜಾವಿಚಾರ
೪೬ ಶಿವಪರಿವಾರ
೪೭ ಆರ್ಯದ್ರಾವಿಡ ನಿರ್ಣಯ
೪೮ ನಿಗಮಾಗಮ ತುಲನೆ
೪೯ ಆಗಮ ಪ್ರಾಮಾಣ್ಯ
೫೦ ಮೂರ್ತಿಪೂಜೆಯೂ ಪರಮತ ಸಹಿಷ್ಣುತೆಯೂ
೫೧ ಕನ್ನಡ ತೆಲುಗು ವಚನಗಳ ಪ್ರಾಮಾಣ್ಯ
೫೨ ವೈದಿಕತತ್ತ್ವನಿರ್ಣಯ ಹಿಂದೂಮತ ನಿರ್ವಚನೆ
೫೩ ಆರ್ಯಧರ್ಮ ಸಂಗ್ರಹ
೫೪ ವೈದಿಕ ವಾಙ್ಮಯ
೫೫ ತ್ರಿಮತ ಷಣ್ಮತಗಳು
೫೬ ಸಂಸ್ಕೃತಿ ಸಮೀಕ್ಷೆ
೫೭ ವೀರಶೈವ ಸೈನಿಕ ಸಿದ್ಧಾಂತ
೫೮ ನಿತ್ಯನೈಮಿತ್ತಿಕ ಕಾಮ್ಯನಿಷೇಧಗಳು
೫೯ ವೀರಶೈವ ವೃತ್ತಪತ್ರಿಕೆಗಳು
೬೦ "ಲಿಂಗಾಯತ-ಲಿಂಗವಂತ" ಶಬ್ದಪರೀಕ್ಷೆ
೬೧ ಗುರುವರ್ಗದ ಸಂಘಟನೆ
೬೨ ಸಮಾಜದ ಶ್ರೇಯಸ್ಸಾಧನೆ
೬೩ ಸಿದ್ಧಾಂತ ಶಿಖಾಮಣಿಯ ಕಾಲ
೬೪ ಶ್ರೀಕರಭಾಷ್ಯದ ಪರಿಚಯ
೬೫ ಪ್ರಸ್ಥಾನತ್ರಯ
೬೬ ಬ್ರಹ್ಮಸೂತ್ರಭಾಷ್ಯಗಳು
೬೭ ವೇದಾಂತ ಪರಿಚಯ
೬೮ ಶೈವವೇದಾಂತ ಶಾಖೆಗಳು
೬೯ ಕಾಶ್ಮೀರಶೈವ

೭೦ ದಕ್ಷಿಣಶೈವ
೭೧ ವೀರಶೈವ ಸಂಘ ಸಂಸ್ಥೆಗಳು
೭೨ ಪ್ರಭುತ್ವಾಧಿಕಾರಿಗಳೂ ಶ್ರೀಮಂತರೂ
೭೩ ಕವಿ ಪಂಡಿತರೂ ಲೇಖಕರೂ
೭೪ ಕಲಾಕೋವಿದರೂ ಚಿರಂಜೀವಿಗಳೂ
೭೫ ಪರಳೀವೇದಾಧಿಕಾರಪ್ರಕರಣ
೭೬ ಎಡೆಯೂರು ವ್ಯಾಜ್ಯ
೭೭ ಜಂಗಮಾರಾಧ್ಯ ವಿವಾದ
೭೮ ಪಾಲ್ಕುರಿಕೆ ಸೋಮನಾಥ
೭೯ ವೇಮನಾರಾಧ್ಯಾದಿಗಳು
೮೦ ಆರಾಧ್ಯ ಸಂಪ್ರದಾಯ
೮೧ ಲಿಂಗಯಜ್ಞೋಪವೀತ ನಿರ್ಣಯ
೮೨ ನಿರ್ಮಾಲ್ಯ ನಿರ್ಣಯ
೮೩ ಶೈವಭೇದಗಳು
೮೪ ದೇವಕವಿಯ "ಸಿದ್ಧಲಿಂಗ ಚಾರಿತ್ರ್ಯ" ಮರುಳಸಿದ್ಧಕಾವ್ಯ
೮೫ ಶಿಖಾಸೂತ್ರ ವಿಚಾರ
೮೬ ಮಹಾಸಭೆಯ ಧಾರ್ಮಿಕ ತೀರ್ಮಾನಗಳು
೮೭ ಅಂತಶ್ಶಾಖೆ (ಜಾತಿ) ಗಳ ಕರ್ಮಸ್ವಭಾವಮಹತ್ತ್ವ
೮೮ ವೀರಶೈವ ರಾಜ, ಮಂತ್ರಿ, ಸೈನಿಕವೀರರು
೮೯ ,, ವಿದ್ವಾಂಸರೂ ಅಧ್ಯಾಪಕರೂ
೯೦ ,, ಜಡ್ಜಿಗಳು, ವಕೀಲರು
೯೧ ಧನಾಢ್ಯರೂ ವರ್ತಕರೂ
೯೨ ವೀರಶೈವ ಕ್ಷೇತ್ರಗಳು
೯೩ ವೀರಶೈವ ವೈಭವ
೯೪ ಧಾರ್ಮಿಕ ಸಾಮಗ್ರಿ
೯೫ ಕೈಗಾರಿಕೆ (ಭಸ್ಮ, ಲಿಂಗ, ದಶಾಂಗ, ಗುಗ್ಗುಳ)
೯೬ ಏಕಮುಖಿ ರುದ್ರಾಕ್ಷಿ

೯೭ ಪಂಚಸೂತ್ರ ಲಿಂಗಗಳು
೯೮ ದಕ್ಷಿಣಾವರ್ತಶಂಖ
೯೯ ವೀರಶೈವರ ಜ್ಯೋತಿರ್ಲಿಂಗಗಳು
೧೦೦ ಲಿಂಗದ ಕರಡಿಗೆಗಳು
೧೦೧ ಪ್ರಶ್ನೋತ್ತರಗಳು
೧೦೨ ಪಂ. ಶ್ರೀಕಾಶೀನಾಥಶಾಸ್ತ್ರಿಗಳವರ ಜೀವನಚರಿತ್ರೆ ಕಾರ್ಯಕಲಾಪ ಗ್ರಂಥವಿಮರ್ಶೆ ಮುಂತಾದುವು
೧೦೩ ಶ್ರೀ ಶಾಸ್ತ್ರಿಗಳವರ ಬಗ್ಗೆ ಸಂದೇಶಗಳು
೧೦೪ ,, ,, ಕವಿತೆಗಳು
೧೦೫ ಅಖಿಲ ವೀರಶೈವ ವಿದ್ವತ್ಸಂಘದ ಕಾರ್ಯಕಲಾಪಗಳು
೧೦೬ ಜ್ಞಾನಮಂದಿರದ ಸಚಿತ್ರ ಪರಿಚಯ
೧೦೭ ಉಪಸಂಹಾರ, ಸಂಪಾದಕೀಯ
೧೦೮ ವಿಷಯಸೂಚೀ ಗ್ರಂಥಸೂಚೀ ವ್ಯಕ್ತಿಸೂಚೀ ಪ್ರಕಟನೆಗಳು ಮುಂತಾದುವು

(ಆವಶ್ಯಕತೆಯನ್ನನುಸರಿಸಿ ಪರಿವರ್ತನೆಯಾಗಬಹುದು.)

## ಕವಿ ಪಂಡಿತ ಲೇಖಕರಿಗೆ ನಿವೇದನೆ

ಇಂತಹ ಸಮರ್ಥವಾದ ಗ್ರಂಥವನ್ನು ನಿರ್ಮಿಸಲು ಸರ್ವವಿದ್ವಾಂಸರ ಸಹಾಯವೂ ಆವಶ್ಯಕವಾಗಿದೆ. ಅವರಿದನ್ನು ಸ್ವಕಾರ್ಯವೆಂದು ಭಾವಿಸಿ ನಿರ್ವಹಿಸಬೇಕೆಂತಲೂ ನಾವು ನಿವೇದಿಸುತ್ತೇವೆ. ಈ ಗ್ರಂಥವು ಧರ್ಮಕ್ಕೆ ನಿರ್ಣಯವಾಗಿಯೂ, ಸತ್ಯಕ್ಕೆ ದರ್ಪಣವಾಗಿಯೂ ಸಿದ್ಧವಾಗಬೇಕೆಂಬ ಮಹತ್ತ್ವಪೂರ್ಣವಾದ ಬಾಧ್ಯತೆಯನ್ನು ಎಲ್ಲರೂ ಗಮನಿಸಬೇಕು. ತಮಗೆ ಇಷ್ಟವಾದ ಒಂದು ವಿಷಯವನ್ನಾಗಲೀ ಅಥವಾ ಹಲವು ವಿಷಯಗಳನ್ನಾಗಲೀ ಅವಲಂಬಿಸಿ ಬರೆಯಬಹುದು. ಆಯಾ ವಿಷಯವನ್ನು ಸಮರ್ಥಿಸುವ ಗ್ರಂಥಾಧಾರಗಳನ್ನು ಅಧ್ಯಾಯ, ಪ್ರಕರಣ, ಪೃಷ್ಠಗಳೊಂದಿಗೆ ಸೂಚಿಸಬೇಕು. ಕಡೆಯಲ್ಲಿ ತಾವು ಉಪಯೋಗಿಸಿದ ಗ್ರಂಥಗಳ ಮುದ್ರಣಸ್ಥಲ, ಕಾಲ ಮುಂತಾದುವುಗಳನ್ನೂ, ಅಮುದ್ರಿತವಾಗಿದ್ದರೆ ಅದು ಯಾರಲ್ಲಿರುವುದೆಂಬುದನ್ನೂ ಸ್ಪಷ್ಟಪಡಿಸಬೇಕು. ಪ್ರತಿಪಾದನೆಯಲ್ಲಿ ತಮ್ಮ ಸ್ವತಂತ್ರವಾದ

ಅಭಿಪ್ರಾಯಗಳನ್ನೂ ಪ್ರಕಟಿಸಲು ಯಾವ ಪ್ರತಿಬಂಧಕವೂ ಇಲ್ಲ. ಆದರೆ ಭಾಷೆಯು ಪರಿಶುದ್ಧವಾಗಿಯೂ, ಸರಳವಾಗಿಯೂ ಇರಬೇಕು. ನಿರಾಧಾರ ವಾಗಿಯೂ ನಿಂದಾತ್ಮಕವಾಗಿಯೂ ಅಬದ್ಧವಾಗಿಯೂ ಎಷ್ಟೂ ಇರಕೂಡದು. ಇಂತಹ ಲೇಖಗಳನ್ನು ನಾವು ಪ್ರಕಟಿಸುವುದಿಲ್ಲ. ಹಲವುಬಾರಿ ಹಲವು ಪಂಡಿತರಿಂದ ಪರಿಷ್ಕಾರಹೊಂದಿದ ಮೇಲೆಯೇ ಈ ಲೇಖಗಳೆಲ್ಲ ಪ್ರಕಟಿಸ ಲ್ಪಡುವವು. ಲೇಖಕರು ಕಾಗದದ ಒಂದೇ ಮಗ್ಗಲಿಗೆ ಸ್ಪಷ್ಟವಾದ ಅಕ್ಷರ ಗಳಿಂದ ಬರೆಯಬೇಕು. ತಮ್ಮ ಲೇಖಕ್ಕೆ ಸಂಬಂಧಿಸಿದ ಚಿತ್ರಗಳನ್ನೂ ಅಥವಾ ಆ ವಿಧವಾದ ಸಾಮಗ್ರಿಯನ್ನೂ ಲೇಖಕರೇ ಕಳುಹಿಸಬೇಕು. ಆವಶ್ಯಕವೆಂದು ತೋರಿದರೆ ಆ ಬಗ್ಗೆ ಸ್ವಲ್ಪ ದ್ರವ್ಯವನ್ನು ಲೇಖಕರಿಗೆ ಕೊಡಲಾಗುವುದು.

ಈ ಗ್ರಂಥವನ್ನು ಕನಿಷ್ಟಪಕ್ಷ ಐದಾರು ತಿಂಗಳುಗಳಲ್ಲಿ ಮುದ್ರಣಕ್ಕೆ ಸಿದ್ಧಪಡಿಸಬೇಕೆಂದು ಯೋಜಿಸಿದ್ದೇವೆ. ಎಂದರೆ ಶೀಘ್ರತೆಯಿಂದ ಯಾವ ದೋಷವೂ ಉಂಟಾಗಬಾರದೆಂಬುದೇ ನಮ್ಮ ಅಭಿಮತ. ಆಮೇಲೆ ಸುಂದರವಾಗಿ ಮುದ್ರಿಸಿ ಉತ್ಸವಪೂರ್ವಕವಾಗಿ ಗ್ರಂಥಪ್ರಕಾಶನ ಮತ್ತು ಸಮರ್ಪಣ ಮಾಡಲಾಗುವುದು. ಸಾಧ್ಯವಾದರೆ ಈ ಒಳಗಾಗಿ ವಿದ್ವ ತ್ಸಮ್ಮೇಲನವೊಂದನ್ನು ಕರೆಯುವೆವು. ಆದುದರಿಂದ ಪಂಡಿತರೂ ಲೇಖ ಕರೂ ತಮ್ಮ ಪಾಂಡಿತ್ಯಾನುಭವಗಳನ್ನು ಸರಿಯಾಗಿ ಉಪಯೋಗಿಸಿ ಉತ್ತಮೋತ್ತಮ ಲೇಖಗಳನ್ನು ಸಿದ್ಧಗೊಳಿಸಿ ತಮ್ಮ ಚಿತ್ರಗಳೊಂದಿಗೆ ರಿಜಿಸ್ಟರ್ಡ್ ಪೋಸ್ಟಿನಿಂದ ರವಾನಿಸಬೇಕು. ಈ ಮಹಾಗ್ರಂಥದೊಡನೆ ಲೇಖಕರ ಕೀರ್ತಿಯೂ ಸ್ಥಿರವಾಗಿ ಪ್ರತಿಷ್ಠೆ ಹೊಂದಲಿದೆಯೆಂಬುದನ್ನೂ ಮರೆಯಬಾರದು.

ಪರಿಚಿತರಾದ ಎಲ್ಲ ಲೇಖಕರಿಗೂ ಈ ಪತ್ರಿಕೆ ರವಾನಿಸಿರುತ್ತೇವೆ. ಪಂಡಿತರೆಲ್ಲರೂ ತಮ್ಮ ತಮ್ಮ ಪರಿಚಿತರಾದ ವಿದ್ವಾಂಸರ ಮತ್ತು ಪ್ರಮುಖರ ವಿಳಾಸಗಳನ್ನು ಸೂಚಿಸಬೇಕು. ಪ್ರಸಂಗವಶಾತ್ ಯಾರಿಗಾದರೂ ಈ ಪತ್ರಿಕೆ ತಲುಪದಿದ್ದರೆ ಅಂತಹವರು ಸಂಕೋಚಪಡದೆ ನಮಗೆ ಬರೆಯು ಬೇಕು. ಎಲ್ಲರಿಗೂ ರವಾನಿಸಲಾಗುವುದು. ಅವಶ್ಯಕವಾದ ಪ್ರತ್ಯುತ್ತರ ವ್ಯವಹಾರಮಾಡಲಾಗುವುದು.

## ಮಹಾಜನರ ಕರ್ತವ್ಯ

"ಸರ್ವಾರಂಭಾಸ್ತಂಡುಲಪ್ರಸ್ಥಮೂಲಾಃ" ಎಂಬಂತೆ ಯಾವ ಮಹಾ ಕಾರ್ಯಕ್ಕಾದರೂ ಮೊದಲು ಧನನಿಧಿ ಬೇಕೇಬೇಕು. ಅದನ್ನು ಮನುಷ್ಯರೇ ತಮ್ಮ ಪುರುಷಾರ್ಥದಿಂದ ಸಂಪಾದಿಸಿ ಮಾನವಕಲ್ಯಾಣಕ್ಕಾಗಿ ವಿನಿಯೋಗ ಮಾಡುತ್ತಿದ್ದಾರೆ. ಸರ್ವ ವೀರಶೈವರ ಉಪಯೋಗಕ್ಕಾಗಿ ಪ್ರಕಟಿಸಲ್ಪಡುವ ಈ ಮಹಾಗ್ರಂಥಕ್ಕೋಸ್ಕರ ಸರ್ವವೀರಶೈವ ಮಹಾಜನರಿಂದಲೂ ಸಾಹಾಯ ದೊರಕಬೇಕಾದುದು ಸಮಂಜಸವಾಗಿದೆ. ಆದುದರಿಂದ ಎಷ್ಟು ಮಾತ್ರ ಅವಕಾಶವಿದ್ದರೂ ತಪ್ಪದೆ ತಮ್ಮ ದಾನವನ್ನು ಪ್ರಕಟಿಸಬೇಕು. ೫೦೧, ೩೦೧, ೨೦೧, ೧೦೧, ಇಲ್ಲವೆ ೫೧ ರೂ. ಗಳ ದಾನವನ್ನು ಮಾಡ ತಕ್ಕವರ ನಾಮಗಳನ್ನು ಕ್ರಮವಾಗಿ ಮಹಾರಾಜಪೋಷಕ, ರಾಜಪೋಷಕ, ಸಹಾಯಕ ಸಭ್ಯರು ಎಂದು ಸಮ್ಮಾನ ಪುರಸ್ಸರವಾಗಿ ಉಲ್ಲೇಖಿಸಿ ಅವರವರ ದಾನದ ತಾರತಮ್ಯವನ್ನನುಸರಿಸಿ ಅವರವರ ಚಿತ್ರಪಟಗಳನ್ನೂ ಪರಿಚಯ ವನ್ನೂ ಪ್ರಕಟಿಸಲಾಗುವದು. ವೀರಶೈವಧರ್ಮಾಭಿಮಾನಿಗಳೆಲ್ಲರೂ ಈ ಪರಮಾವಶ್ಯಕವಾದ ಧರ್ಮಗ್ರಂಥದ ಬಗ್ಗೆ ಬಂಧುಮಿತ್ರರನ್ನು ಪ್ರೇರಣ ಗೊಳಿಸಿ ಶಿವಾನುಗ್ರಹಕ್ಕೆ ಪಾತ್ರರಾಗಬೇಕಾಗಿ ಕೋರುತ್ತೇವೆ. ಎಲ್ಲ ದಾತೃ ಗಳಿಗೂ ಈ ಮಹಾಗ್ರಂಥದ ಒಂದು ಪ್ರತಿ ಉಚಿತವಾಗಿ ರವಾನಿಸುವೆವು. ೫೧ ರೂ.ಗಳಿಗಿಂತ ಕಡಿಮೆ ದಾನವನ್ನು ಸ್ವೀಕರಿಸುವ ಪದ್ಧತಿಯಿಲ್ಲ.

## ಕಾಶೀಪೀಠದ ಮಹಾಶ್ರಯ

ನಮ್ಮ ಈ ವಿದ್ವತ್ಸಂಘದ ಸಮಸ್ತ ಕಾರ್ಯಕಲಾಪಗಳಿಗೂ ಶ್ರೀ ಜಗದ್ಗುರು ವಿಶ್ವಾರಾಧ್ಯಭಗವತ್ಪಾದರ ಜ್ಞಾನಸಿಂಹಾಸನಮಹಾಪೀಠವು ಕಲ್ಪವೃಕ್ಷದಂತೆ ಮಹಾನುಗ್ರಹವನ್ನು ದಯಪಾಲಿಸುತ್ತಿರುವುದು ಪ್ರತ್ಯಕ್ಷವೇ ಆಗಿದೆ. ಇದಕ್ಕಾಗಿ ನಮ್ಮ ಭಾಗ್ಯವನ್ನು ನಾವೇ ಪ್ರಶಂಸೆ ಮಾಡಿಕೊಳ್ಳ ಬಹುದಾಗಿದೆ. ಶ್ರೀಜಗದ್ಗುರು ಮಹಾಸನ್ನಿಧಾನದವರು ನಾನಾವಿಧಾನದಿಂದ ನಮಗೆ ಆಶ್ರಯವನ್ನು ಕೊಟ್ಟು ತಮ್ಮ ಅಗಾಧವಾದ ಜ್ಞಾನನಿಧಿಯಿಂದಲೂ ಅವಶ್ಯಕವಾದ ಅನುಗ್ರಹವನ್ನು ಮಾಡಲು ಸರ್ವಥಾಸಂಸಿದ್ಧರಾಗಿದ್ದಾರೆ. ಈ ಸುಸಮಯವನ್ನು ಸಫಲಗೊಳಿಸಿಕೊಳ್ಳುವವರೇ ಧನ್ಯರಾಗಿದ್ದಾರೆ. ಸದ್ಯಕ್ಕೆ

ಶ್ರೀ ಮಹಾಸನ್ನಿಧಾನದವರು ಈ ಮಹಾಗ್ರಂಥದ ಕಾರ್ಯಕ್ರಮ ನಡೆಸಲು ಮೊದಲನೆಯ ಆಶೀರ್ವಾದವಾಗಿ ೫೦೧ ರೂಪಾಯಿಗಳನ್ನು ಅನುಗ್ರಹಿಸಿರುತ್ತಾರೆ. ಈ ಬಗ್ಗೆ ಕಾರ್ಯಾರಂಭವು ಇದೇ ದಿನ (೩-೬-೧೯೪೭) ಮಾಡಲಾಗಿದೆ. ಇತರ ಮಹಾಚಾರ್ಯರೂ, ಉಪಾಚಾರ್ಯರೂ ಅಧಿಕಾರಿಗಳೂ ತಮ್ಮ ತಮ್ಮ ಆಶೀರ್ವಾದಗಳನ್ನೂ ಅರ್ಥಾಶ್ರಯವನ್ನೂ ಅನುಗ್ರಹಿಸಿ ಈ ಗುರುಧರ್ಮ ಕರ್ತವ್ಯವನ್ನು ಪ್ರೋತ್ಸಾಹಿಸಬೇಕೆಂದು ವಿನಮ್ರವಾಗಿ ಪ್ರಾರ್ಥಿಸುತ್ತೇವೆ.

## ಚಂದಾದಾರರಿಗೆ ಸೂಚನೆ

ಈ ವೀರಶೈವ ವಿಜ್ಞಾನವೆಂಬ ಮಹಾಗ್ರಂಥವು ಸರ್ವ ವೀರಶೈವರಿಂದಲೂ ಸ್ವೀಕರಿಸಲು ಸರ್ವದಾ ಪಠಿಸಲು ಅರ್ಹವಾಗುವಂತೆ ಸಿದ್ಧಗೊಳಿಲಂಸಗುವುದು. ಯಾವ ವಿಷಯ ಬೇಕಾಗಿದ್ದರೂ, ಯಾವ ಸಂದೇಹ ಬಂದರೂ ಈ ಜ್ಞಾನಕೋಶವು ಸಂಪೂರ್ಣ ಸಹಾಯವನ್ನು ಮಾಡತಕ್ಕುದಾಗಿದೆ. ಇದರ ಪ್ರಚಾರವು ಬಹಳ ವಿಸ್ತಾರವಾಗಿ ಆಗುವುದೆಂಬುದು ನಿಶ್ಚಯವೇ ಸರಿ! ಆ ಮೇಲೆ ಇದು ದುರ್ಲಭವೂ ಆಗಬಹುದು. ಕಾಗದ ಮುಂತಾದ ಮುದ್ರಣ ಸಾಮಗ್ರಿಯು ದೊರೆಯುವುದು ಕಷ್ಟವಾಗಿರುವುದರಿಂದ ಕೆಲವು ನಿಶ್ಚಿತವಾದ ಪ್ರತಿಗಳನ್ನು ಮಾತ್ರ ಮುದ್ರಿಸಬೇಕಾಗಿದೆ. ಕ್ರೌನ್, ಅಷ್ಟಪತ್ರಾಕಾರದಲ್ಲಿ ನಯನ ಮನೋಹರವಾಗುವಂತೆಯೂ ಆತ್ಮಾನಂದಕರವಾಗುವಂತೆಯೂ ಈ ಮಹಾಗ್ರಂಥವನ್ನು ಸಿದ್ಧಗೊಳಿಸಲಾಗುವದು. ಇದರ ಬೆಲೆ ೨೫ ರೂಪಾಯಿಗಳೆಂದು ನಿಶ್ಚಿತವಾಗಿದೆ. ಈ ಗ್ರಂಥರತ್ನವನ್ನು ನೋಡಿದಮೇಲೆ ಈ ಬೆಲೆಯು ಕಡಮೆಯಾಗಿಟ್ಟಿರುವರೆಂದು ನೀವೇಭಾವಿಸಬಹುದು. ಆದರೂ ಮುಂಚಿತವಾಗಿ ೨೧ ರೂ.ಗಳನ್ನು ಮನಿಯಾರ್ಡರಿನಿಂದ ಕಳುಹಿಸುವ ಚಂದಾದಾರರ ಶುಭನಾಮಗಳನ್ನು ಈ ಮಹಾಗ್ರಂಥದಲ್ಲಿ ಸೇರಿಸಿ ಗ್ರಂಥದ ಒಂದು ಪ್ರತಿಯನ್ನು ಉಚಿತವಾಗಿ ಕೊಡಲಾಗುವುದು. ಪೋಸ್ಟಿನ ವೆಚ್ಚವನ್ನು ಮಾತ್ರ ಅವರೇ ವಹಿಸಿಕೊಳ್ಳಬೇಕು.

ಎಲ್ಲ ವಿಧವಾದ ಪತ್ರವ್ಯವಹಾರಗಳನ್ನೂ ಈ ಕೆಳಗಿನ ವಿಳಾಸಕ್ಕೆ ಮಾಡಬೇಕು.

ಕಾರ್ಯದರ್ಶಿ
ಕಾಶೀ ವೀರಶೈವ ವಿದ್ವತ್ಸಂಘ,
ಜಂಗಮವಾಡಿ ಮಠ, ಬನಾರಸ್ ಸಿಟಿ.

## ಸೊಲ್ಲಾಪುರ

ಸನಾತನ ವೀರಶೈವ ಧರ್ಮೋದ್ಧಾರಕರಾದ ವೇ|| ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರಿಗೆ ಜ್ಯೇಷ್ಠ ಶು|| ೪ ಮಿತಿಗೆ ನಲವತ್ತೆಂಟನೆಯ ವರ್ಷವು ಪ್ರಾರಂಭವಾದ ಸಂತೋಷಕ್ಕಾಗಿ ಅಂದು ಸೊಲ್ಲಾಪುರದಲ್ಲಿರುವ ವೀರಶೈವ ಸದಾಚಾರ ಸ್ತ್ರೀಸಮಾಜದಲ್ಲಿ ಪ್ರತಿವರ್ಷ ಪದ್ಧತಿಯಂತೆ ವರ್ಧಂತೀ ಮಹೋತ್ಸವವು ವಿಶೇಷ ವೈಭವದಿಂದ ನೆರವೇರಿಸಲ್ಪಟ್ಟಿತು. ಸೋಮವಾರ ಬೆಳಿಗ್ಗೆ ಪಂಡಿತರ ಆಯುಸ್ಸು ಮತ್ತು ಆರೋಗ್ಯಾಭಿವೃದ್ಧಿಗಾಗಿ ಶ್ರೀ ಜಗದಾಚಾರ್ಯರ ಲಿಂಗೋದ್ಭವಮೂರ್ತಿಗೆ ವೀರಶೈವ ಗುರುಕುಲದ ವತಿಯಿಂದ ಏಕಾದಶ ರುದ್ರಾಭಿಷೇಕವು ನೆರವೇರಿದ ಮೇಲೆ ಪಂಡಿತರ ಭಾವಚಿತ್ರಕ್ಕೆ ಷೋಡಶೋಪಚಾರಪೂಜೆಯು ಮಾಡಲ್ಪಟ್ಟಿತು. ಅನಂತರ ಮಾಹೇಶ್ವರಾರಾಧನೆಯು ನೆರವೇರಿತು. ಅಂದು ಸಾಯಂಕಾಲ ಸೊಲ್ಲಾಪುರದಲ್ಲಿರುವ ಶ್ರೀ ಬಾಲತಪಸ್ವಿ ಬೃಹನ್ಮಠದಲ್ಲಿ ವರ್ಧಂತಿಮಹೋತ್ಸವ ನಿಮಿತ್ತವಾಗಿ ಸಭೆಯು ಕೂಡಿತು. ಸಭೆಗೆ ಬಹುಜನರು ಆಗಮಿಸಿದ್ದರು. ಹೋಟಗಿ ಶ್ರೀಗಳವರು ಅಧ್ಯಕ್ಷಸ್ಥಾನವನ್ನಲಂಕರಿಸಿದರು. ಬಳಿಕ ಮ|| ರಾ|| ಅಂದಪ್ಪ ಮಾಸ್ತರವರು ಶ್ರೀಜಗದಾಚಾರ್ಯರ ಸ್ತೋತ್ರಗಳನ್ನೂ ಪಂಡಿತರ ಗುಣಗಾನರೂಪವಾದ ಪದ್ಯಗಳನ್ನೂ ಮನೋಹರವಾಗಿ ಪಠಿಸಿ ಸರ್ವರನ್ನೂ ಸಂತೋಷಪಡಿಸಿದರು. ಆ ಮೇಲೆ ಸೌ|| ಭಾಗೀರಥೀಬಾಯಿಯವರು "ಯದಾಯದಾಹಿಧರ್ಮಸ್ಯ ಗ್ಲಾನಿರ್ಭವತಿಭೂತಲೆ ತದಾತದಾವತಾರೋಯಂ ಗಣೇಶಾನಂ ನಗಾತ್ಮಜೇ" ಎಂಬ ಶಿವಾಗಮ ವಾಕ್ಯದಂತೆ, ಪಂಡಿತರು ವಿಶೇಷ ಹೀನಾವಸ್ಥೆಯಲ್ಲಿದ್ದ ವೀರಶೈವ ಮತವನ್ನುದ್ಧರಿಸಲು ಅವತರಿಸಿದವರೆಂದು ಹೇಳಿ, ಅವರು ಈವರೆಗೆ ತಮ್ಮ ಜೀವಮಾನದಲ್ಲಿ ಮಾಡಿರುವ ಅದ್ಭುತಕಾರ್ಯಗಳ ವಿಷಯವನ್ನು ವಿವರಿಸಿ ಸರ್ವರನ್ನೂ ಸಂತೋಷಪಡಿಸಿದರು. ಅನಂತರ ಗುರುಕುಲದ ವಿದ್ಯಾರ್ಥಿಗಳಾದ ಶ್ರೀ ಕಡಪಟ್ಟಿ ಚರಮೂರ್ತಿಸ್ವಾಮಿಗಳವರು ಪಂಡಿತರ ವಿದ್ಯಾಪ್ರಭಾವ, ಧೈರ್ಯ, ಸಾಹಸಗಳನ್ನು ವರ್ಣಿಸಲು ಆದಿಶೇಷನಿಗೂ ಸಹಾ ಸಾಧ್ಯವಿಲ್ಲವೆಂದು ಹೇಳಿ ಸಂಕ್ಷೇಪವಾಗಿ ಅವರ ಜನ್ಮವೃತ್ತಾಂತವನ್ನು ಹೇಳಿದರು. ತರುವಾಯ ರೌಡಕುಂದಿಮಠದ ಶ್ರೀ ಸ್ವಾಮಿಗಳವರು—ಪಂಡಿತರು ಕಾಶೀ

ಕ್ಷೇತ್ರದಲ್ಲಿ ಅಭ್ಯಾಸ ಮಾಡುತ್ತಿದ್ದ ಸಮಯದಲ್ಲಿ, ಅತ್ಯಂತ ಚಿಕ್ಕ ವಯಸ್ಸಿನವರಾಗಿದ್ದರೂ ಪರವಾದಿಗಳನ್ನು ಖಂಡಿಸಿ ವೀರಶೈವ ಮತಕ್ಕೆ ವಿಶೇಷ ಗೌರವವನ್ನುಂಟುಮಾಡಿದರೆಂದೂ ಆದುದರಿಂದ ಅವರು ಅವತಾರಿಪುರುಷರಲ್ಲದೆ ನಮ್ಮಂತೆ ಮಾನವಕ್ಕೋಟಿಗೆ ಸೇರಿದವರಲ್ಲವೆಂದೂ ಮನೋಹರವಾಗಿ ಭಾಷಣವನ್ನು ಮಾಡಿದರು.'' ಬಳಿಕ ವೇ|| ಪುರಾಣಪಟು ಅಲ್ಲಮಪ್ರಭು ಆಲೂರು, ಇವರು ಕುರಿಗಳ ಗುಂಪಿನಲ್ಲಿ ಸೇರಿದ ಹುಲಿಯು ಮರಿಯು ತನ್ನ ಸ್ವರೂಪವನ್ನೇ ಮರೆತಂತೆ ನಮ್ಮ ಗುರುವರ್ಗದವರು ತಮ್ಮ ಸ್ವರೂಪವನ್ನೇ ಮರೆತಿದ್ದರೆಂದೂ ಈ ವಿಧವಾದ ಹೀನಾವಸ್ಥೆಗೊಳಗಾಗಿದ್ದ ಗುರುವರ್ಗಕ್ಕೆ ನವಚೈತನ್ಯವನ್ನುಂಟುಮಾಡಿ ಅವರನ್ನು ತಮ್ಮ ಕರ್ತವ್ಯಕರ್ಮದಲ್ಲಿ ನಿರತರಾಗಿರುವಂತೆ ಮಾಡಿದ ಮಹಾತ್ಮರೇ ಇವರೆಂದೂ, ಇವರ ಅವತಾರವಾಗದಿದ್ದರೆ ಇಷ್ಟು ಹೊತ್ತಿಗೆ ಗುರುವರ್ಗವು ನಾಮಾವಶೇಷವಾಗಿ ಹೋಗುತ್ತಿತ್ತೆಂದೂ, ಆದುದರಿಂದ ಪಂಡಿತರ ಉಪಕಾರವು ಗುರುವರ್ಗದ ಮೇಲೆ ಅಪಾರವಾಗಿರುವುದೆಂದೂ, ಇವರು ಗುರುವರ್ಗದಲ್ಲಿ ಒಬ್ಬ ಮಹಾತ್ಮರೆಂದೂ ಪ್ರತಿಪಾದಿಸಿದರು. ಆ ಮೇಲೆ ವೇ|| ದೇವಣಗಾಂವ ನಾಗಭೂಷಣಶಾಸ್ತ್ರಿಗಳು "ನಾವೆಲ್ಲರೂ ಶಾಸ್ತ್ರಿಗಳೆಂದು ಹೆಸರಿಟ್ಟುಕೊಂಡಿದ್ದೇವೆ. ಈ ಹೆಸರು ನಮಗೆ ಅಂಕಿತನಾಮವಾಗುವದಲ್ಲದೆ ಅನ್ವರ್ಥನಾಮವಾಗುವದಿಲ್ಲ. ಆದರೆ ಶಾಸ್ತ್ರಿ ಎಂಬ ನಾಮವು ಪಂಡಿತರಿಗೆ ಒಪ್ಪುವದೇ ಹೊರತು ನಮಗೆ ಎಂದೂ ಒಪ್ಪುವದಿಲ್ಲ" ಎಂಬಿವೇ ಮೊದಲಾದ ವಿಷಯಗಳನ್ನು ಜನರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಹೇಳಿದರು.

ಆ ಮೇಲೆ ಅಧ್ಯಕ್ಷಮಹೋದಯರು, ವರ್ಧಂತಿಯೆಂದರೇನು? ವರ್ಧಂತಿಯನ್ನು ಏಕೆ ಮಾಡಬೇಕು? ಯಾರದು ಮಾಡಬೇಕು? ಇತ್ಯಾದಿ ವಿಷಯಗಳನ್ನು ಕುರಿತು ಬಹು ಚನ್ನಾಗಿ ವಿವರಿಸಿದರು. ಶ್ರೀರಾಮರ ಪಾದಸ್ಪರ್ಶದಿಂದ ಅಹಲ್ಯೆಯು ಉದ್ಧೃತಳಾದಂತೆ ವೀರಶೈವಧರ್ಮವು ಶ್ರೀಜಗದ್ಗುರು ಪಂಚಾಚಾರ್ಯರ ಮತ್ತು ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಆಶೀರ್ವಾದಬಲದಿಂದಲೂ ಮತ್ತು ಶ್ರೀಪಂಡಿತರ ವಿದ್ವತ್ಪ್ರಭಾವದಿಂದಲೂ ಉದ್ಧಾರವಾಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಪಂಡಿತರ ಅವತಾರವಾಗದಿದ್ದರೆ ನಮ್ಮ ಗುರುವರ್ಗವು ಯಾವ ಮೂಲೆಯನ್ನು ಹಿಡಿ

ಯುತ್ತಿತ್ತೋ ? ಗುರುವರ್ಗದ ಉದ್ಧಾರಕ್ಕಾಗಿ ಅನಂತ ಕಷ್ಟಗಳನ್ನು ಸಹಿಸಿ ಅವರ ಸಲುವಾಗಿಯೇ ಶರೀರವನ್ನು ಕ್ಷಯಿಸುತ್ತಿರುವ ಪಂಡಿತರ ಶರೀರಕ್ಕೆ ಶ್ರೀಪರಮೇಶ್ವರನು ನಿರುದ್ಯೋಗಿಗಳ ಆಯುಷ್ಯವನ್ನೆಲ್ಲಾ ಅನುಗ್ರಹಿಸಿ ಇಂತಹ ಇನ್ನೂ ಅನೇಕ ವರ್ಧಂತಿ ಮಹೋತ್ಸವಗಳು ಜರುಗುವಂತಾಗ ಲೆಂದು ಸರ್ವರೂ ಜಗದೀಶ್ವರನ ಸನ್ನಿಧಿಯಲ್ಲಿ ಪ್ರಾರ್ಥಿಸಬೇಕೆಂದು ಹೇಳಿ ಸರ್ವತ್ರ ಶ್ರೀಜಗದ್ಗುರು ಪಂಚಾಚಾರ್ಯರ ವಿಜಯಧ್ವಜವನ್ನು ಮೆರೆಯು ವಂತೆ ಮಾಡಿದ ಪಂಡಿತರ ಧೈರ್ಯಸಾಹಸಗಳನ್ನು ಅಪ್ರತಿಮವಾಗಿ ವರ್ಣಿ ಸಿದರು. ತರುವಾಯ ವೇ॥ ಚನ್ನಮಲ್ಲಿಕಾರ್ಜುನಶರ್ಮ ಅಷಳ್ಳಿ ಇವರು ಸರ್ವರ ಆಭಾರಮನ್ನಿಸಿದ ಮೇಲೆ ಜಗದಾಚಾರ್ಯರ ಭಾವಚಿತ್ರಕ್ಕೂ ಪಂಡಿತರ ಭಾವಚಿತ್ರಕ್ಕೂ ಮಂಗಲವಾಗಿ ಸಭೆಯು ವಿಸರ್ಜಿಸಲ್ಪಟ್ಟಿತು. ಈ ವರ್ಧಂತಿ ಮಹೋತ್ಸವಕಾರ್ಯದಲ್ಲಿ ಸೌ॥ ದಾನಮ್ಮ ಹಿರೇಮಠ, ಸೌ॥ ಭಾಗೀರಥೀಬಾಯಿ ಕಟಾಪ, ಸೌ॥ ಬಸಮ್ಮ ನಂದೀಮಠ, ಸೌ॥ ಸುಗ್ಗಲಾದೇವಿ ತಮಶೆಟ್ಟಿ, ಸೌ॥ ಪಾರ್ವತೀಬಾಯಿ ತಮಶೆಟ್ಟಿ, ಸೌ॥ ಅನುಸೂಯಾದೇವಿ ಕಟಾಪ, ಸೌ॥ ಸುಭದ್ರಾಬಾಯಿ ಶೇಟೆ, ಸೌ॥ ಗಂಗಾಬಾಯಿ ಪಾಟೀಲ, ಸೌ॥ ಧೋಂಡೂಬಾಯಿ ಇಟಾಣೆ, ಶ್ರೀ॥ ಕಾಶೀಬಾಯಿ ನಂದೀಮಠ, ಶ್ರೀ॥ ರತ್ನಾಬಾಯಿ ಹಿರೇಹಬ್ಬು, ಶ್ರೀ॥ ಲಕ್ಷ್ಮೀಬಾಯಿ ಗಾಬಣೆ, ಶ್ರೀ॥ ಪಾರ್ವತೀಬಾಯಿ ಶೇಟೆ, ಶ್ರೀ॥ ಮುಕ್ತಾಬಾಯಿ ಶೇಟೆ, ಶ್ರೀ॥ ಗಂಗಾಬಾಯಿ ಕಳಿಸೆ, ಕು॥ ಶಿವಕಾಂತಾ ತಮಶೆಟ್ಟಿ, ಕುಂ॥ ಗಂಗಾದೇವಿ ಕಟಾಪ, ಕುಂ॥ ಗೌರೀದೇವಿ ಕಟಾಪ, ಕುಂ॥ ಶಾಂತಾದೇವಿ ಮಾಳಿಗೆ ಮೊದಲಾದವರು ವಿಶೇಷ ಭಕ್ತಿಶ್ರದ್ಧೆಗಳಿಂದ ಭಾಗವಹಿಸಿ ಪಂಡಿತರಿಗೆ ಆರೋಗ್ಯವನ್ನೂ ಆಯುಸ್ಸನ್ನೂ ಕೋರಿದರು.

## ದರ್ಗನಹಳ್ಳಿ

ಸೊಲ್ಲಾಪುರ ಡಿಸ್ಟ್ರಿಕ್ಟ್ ದರ್ಗನಹಳ್ಳಿಗ್ರಾಮದಲ್ಲಿ ಜ್ಯೇಷ್ಠ ಶುದ್ಧ ೪ ತಾ॥ ೨೨-೫-೫೪ ನೆಯ ಸೋಮವಾರ ಪ್ರಾತಃಕಾಲ ಪಂಡಿತಜಿಯವರ ವರ್ಧಂತೀ ಪ್ರೀತ್ಯರ್ಥವಾಗಿ ಶ್ರೀಜಗದ್ಗುರು ಲಿಂಗೋದ್ಭವಮೂರ್ತಿಗೆ ಶ್ರೀ ಲಿಂಬಣ್ಣನವರು ರುದ್ರಾಭಿಷೇಕಮಾಡಿ ಗಣತೃಪ್ತಿಯನ್ನು ಮಾಡಿದರು.

ಸಾಯಂಕಾಲ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯಸೇವಾಸಂಘದ ವತಿಯಿಂದ ಶ್ರೀ|| ಷ|| ಬ್ರ|| ಬಾಲತಪಸ್ವಿ ಹೋಟಗಿ ಸದ್ಗುರುಗಳ ಅಧ್ಯಕ್ಷತೆಯಲ್ಲಿ ಸಭೆಯು ನೆರವೇರಿತು. ಪಂಡಿತರ ಭಾವಚಿತ್ರವನ್ನು ಪೂಜಿಸಿದನಂತರ ಶ್ರೀಜಗದ್ಗುರು ಪಂಚಾಚಾರ್ಯ ಭಜನಾಸಂಘದವರು ಒಳ್ಳೆ ಭಕ್ತಿಯಿಂದ ಜಗದಾಚಾರ್ಯರ ಭಜನೆಯನ್ನು ಮಾಡಿದರು. ಆಮೇಲೆ ಸೊಲ್ಲಾಪುರದ ಸದಾಚಾರಸಮಾಜದ ಕುಮಾರಿಯರಾದ ಸೌ|| ಸುಗ್ಗಲಾದೇವಿ ಗಂದಗೆ, ಕುಂ|| ಗೌರಾದೇವಿ ಕಟಾಪ್, ಕುಂ|| ಗೌರಾದೇವಿ ಹಬ್ಬು, ಕು:|| ಶಾಂತಾದೇವಿ ಮಾಳಗೆ ಈ ಬಾಲೆಯರು ತಮ್ಮ ಇಂಪಾದ ಸ್ವರದಿಂದ ಜಗದ್ಗುರು ಪಂಚಾಚಾರ್ಯರ ಸ್ತೋತ್ರವನ್ನು ಹಾಡಿ ಸಭಿಕರನ್ನು ಆನಂದಗೊಳಿಸಿದರು. ತರುವಾಯ ಸೌ|| ಬಾಗೀರಥೀಬಾಯಿ ಕಟಾಪ ಇವರು ನಮ್ಮ ವೀರಶೈವ ಧರ್ಮವು ಅನಧಿಕಾರಿಗಳ ಹಾಶಕ್ಕೆ ಸಿಕ್ಕಿ ರಸಾತಳಕ್ಕೆ ಹೋಗುವುದನ್ನು ಕಂಡು ಶ್ರೀ ಪರಶಿವನೇ ತನ್ನಂಶೀಭೂತರಾದ ಶಾಸ್ತ್ರಿಗಳವರ ಅವತಾರವನ್ನು ಮಾಡಿಸಿ ಉದ್ಧಾರಮಾಡಿರುವನೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದೆಂದೂ ಪಂಡಿತರ ಮುಖ್ಯ ಧ್ಯೇಯವು ಕೇವಲ ಪಂಚಪೀಠಗಳ ಉನ್ನತಿಯೇ ಆಗಿರುವುದೆಂದೂ

> ಆದಮಿ ಆದಮಿ ಸಬಕೋ ಏಕ ಹೈ ಆದಮೀಕಾ ಬಡಾ ಸುಕಾಲ ಹೈ ।
> ಮಗರ ಜಿಸ್ ಆದಮೀಮೇ ಆದಮೂಪನ್ ಹೋ ಉಸಕಾ ಬಡಾ ದುಕಾಲ ಹೈ ॥

ಎಂಬ ಹಿಂದೀ ನಾಣ್ಣುಡಿಯಂತೆ ಮನುಷ್ಯತ್ವವಿಲ್ಲದ ಮಾನವನಿಂದೇನು ಪ್ರಯೋಜನವೆಂದೂ, ಸನ್ಯಾಸಿಗಳ ಸಹವಾಸವು ಸಮಾಜಕ್ಕೆ ಕೇವಲ ಅನಿಷ್ಟವೆಂದೂ, ನಮ್ಮ ಜನ್ಮೋದ್ಧಾರಕರಾದ ಗುರುಗಳನ್ನೇ ಮರೆತ ನಮ್ಮಗಳಿಗೆ ನಿಜವಾದ ಗುರುಗಳನ್ನು ತೋರಿಸಿ ನಮ್ಮನ್ನು ಉದ್ಧಾರಮಾಡಿದಂಥ ಪಂಡಿತರ ಉಪಕಾರವನ್ನು ಮರೆಯಲಾಗದೆಂದೂ ಎಲ್ಲರಿಗೂ ತಿಳಿಯುವಂತೆ ಉಪನ್ಯಾಸಮಾಡಿ ಸಭಿಕರನ್ನು ಆನಂದಗೊಳಿಸಿದರು. ಆಮೇಲೆ ಜಿ. ಜಿ. ಪಾಟೀಲ್ ಧೋತ್ರಿ ಇವರು ಪಂಡಿತರ ಸಂಕ್ಷಿಪ್ತ ಜೀವನಚರಿತ್ರೆಯನ್ನು ಆಬಾಲವೃದ್ಧರಿಗೆ ತಿಳಿಯುವಂತೆ ಹೇಳಿ, ಅವರ ಗುಣವರ್ಣನೆ ಮಾಡುವದು ಸಮುದ್ರದ ನೀರಿನ ಹನಿಗಳನ್ನು ಎಣಿಸಿದಂತೆ ಆಗುವುದೆಂದು

ಒಳ್ಳೆ ಕಳಕಳಿಯಿಂದ ಉಪನ್ಯಾಸಮಾಡಿದರು. ತರುವಾಯ ಝುಂಪಣ್ಣ, ಗಂಗಣ್ಣ ಬಿರಾಜದಾರ್ ಘೋತ್ರಿ ಇವರು ಜಗತ್ತಿನಲ್ಲಿ ಶಾಸ್ತ್ರಿಗಳು ಬಹಳ ಜನರಿದ್ದಾರೆ. ಆದರೆ ಇವರಂತೆ ನಿಸ್ಸ್ವಾರ್ಥಿಗಳು ಯಾರೂ ಇಲ್ಲವೆಂದು ಮರಾಠಿಯಲ್ಲಿ ಭಾಷಣಮಾಡಿದರು. ಆಮೇಲೆ ಷ|| ಬ್ರ|| ಬಾಲತಪಸ್ವಿ ಹೋಟಗಿ ಸನ್ನಿಧಿಯವರು ಸಭೆಯ ಆದಿಯಲ್ಲಂತೂ ಪಂಡಿತರ ಚರಿತ್ರೆ, ಸಭೆಯ ಕಾರಣವನ್ನು ತಿಳುಹಿಸಿದ್ದೇವೆ. ಈಗ ಮುಂದೆ ಹೇಳುವುದೇನೆಂದರೆ, ನಮ್ಮ ಹೊಲದಲ್ಲಿ ಇನ್ನೊಬ್ಬರು ನುಗ್ಗಿ ತಮ್ಮದೇ ಎಂದು ಆಕ್ರಮಣ ಮಾಡಿದ ಕಾಲದಲ್ಲಿ ಪಂಡಿತರು ತಮ್ಮ ವಿದ್ವತ್ತಿಯಿಂದಲೂ, ಧೈರ್ಯ ದಿಂದಲೂ ಅವರನ್ನು ಹೊಡೆದೋಡಿಸಿ ನಮ್ಮ ಸ್ವತ್ತನ್ನು ನಮಗೆ ಕೊಟ್ಟ ರೆಂತಲೂ, ರಂಭಾಪುರೀಪೀಠವು ಅನಾಯಕವಾದ ಸಮಯದಲ್ಲಿ ಒಳ್ಳೆ ಸಾಹಸದಿಂದ ಎಂಥೆಂಥ ವಿಪತ್ತುಗಳು ಬಂದರೂ ಕೂಡ ಅವುಗಳಿಗೆ ಲಕ್ಷ್ಯ ಕೊಡದೆ ಆ ಪೀಠವನ್ನು ಸನಾಯಕವನ್ನಾಗಿ ಮಾಡಿದರೆಂತಲೂ,

ಶುಭಾಶುಭಾಭ್ಯಾಂ ಮಾರ್ಗಾಭ್ಯಾಂ ವಹಂತೀ ವಾಸನಾಸರಿತ್ ।
ಪೌರುಷೇಣ ಪ್ರಯತ್ನೇನ ಯೋಜನೀಯಾ ಶುಭೇ ಪಥಿ ॥

ಎಂಬಂತೆ ಶುಭವಾಗಲಿ ಅಶುಭವಾಗಲಿ ಜಗದಾಚಾರ್ಯರ ಸೇವೆಯೇ ನನ್ನ ಕರ್ತವ್ಯಕರ್ಮವೆಂದು ಮಾಡುವ ಅವರ ಕಾರ್ಯಗಳನ್ನು ವರ್ಣಿಸಲಸದಳ ವೆಂತಲೂ, ಎಲ್ಲರ ಮನಸ್ಸಿನಲ್ಲಿ ಪ್ರತಿಬಿಂಬಿಸುವಂತೆ ತಮ್ಮ ಪ್ರಸಾದವಾಣಿ ಯಿಂದ ಅಪ್ಪಣೆಕೊಡಿಸಿದರು. ಶ್ರೀಜಗದ್ಗುರು ಸಿದ್ಧಲಿಂಗಸೇವಾಸಂಘದವರು ಜಗದಾಚಾರ್ಯರ ಮಂಗಲವನ್ನು ಮಾಡಿದಮೇಲೆ ಪಂಚಾಚಾರ್ಯ ಜಯಘೋಷದೊಂದಿಗೆ ಸಭೆಯು ಮುಕ್ತಾಯವಾಯಿತು.

ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಸೇವಾಸಂಘದ ಸೆಕ್ರೆಟರಿ,
ವಿಶ್ವಾರಾಧ್ಯ ಹೊನಮುರಗಿಕರ್.

## ಸೊಲ್ಲಾಪುರ

ತಾ॥ 17-6-42 ನೆಯ ಬುಧವಾರ ಬೆಳಿಗ್ಗೆ ಪಂಡಿತರ ವರ್ಧಂತೀ ಮಹೋತ್ಸವ ನಿಮಿತ್ತವಾಗಿ ಲಿಂಗೋದ್ಭವಮೂರ್ತಿಗೆ ಪೂಜೆಯು ನೆರವೇರಿ ಗಣಾರಾಧನೆಯಾಯಿತು. ಸಾಯಂಕಾಲ ಐದುಘಂಟೆಗೆ ವೀರಶೈವ ಗರ್ಜನಾ ಸಂಪಾದಕರಾದ ಶ್ರೀ॥ ಷ॥ ಬ್ರ॥ ರಾಚಲಿಂಗಶಿವಾಚಾರ್ಯ ಸ್ವಾಮಿಗಳವರು ಪರಾಂಡಕರ ಇವರ ಅಧ್ಯಕ್ಷತೆಯಲ್ಲಿ ಸಭೆಸೇರಿತು. ಸೌ॥ ಸುಂದರಬಾಯಿ ಖಾನಪುರ ಇವರು ಪರಾಂಡಕರ ಶ್ರೀಗಳು, ಅಧ್ಯಕ್ಷಸ್ಥಾನವನ್ನು ಸ್ವೀಕರಿಸ ಬೇಕೆಂದು ಸ್ತ್ರೀಸಮಾಜದ ವತಿಯಿಂದ ಪ್ರಾರ್ಥಿಸಿದರು. ಆಮೇಲೆ ಶ್ರೀ ಸಿದ್ದವ್ವ ಮುಳೆ ಇವರು ಅನುಮೋದನವನ್ನಿತ್ತರು. ತರುವಾಯ ಪರಾಂಡ ಕರ ಶ್ರೀಗಳು ಅಧ್ಯಕ್ಷಸ್ಥಾನಾಪನ್ನರಾದರು. ಅನಂತರ ಸದಾಚಾರ ಸಮಾಜದ ಬಾಲಿಕೆಯರು ಜಗದಾಚಾರ್ಯರ ಮತ್ತು ಪಂಡಿತರ ಸ್ತೋತ್ರಗಳನ್ನು ತಮ್ಮ ಮಂಜುಳವಾದ ಕಂಠದಿಂದ ಹಾಡಿ ಸಭಿಕರನ್ನು ಆನಂದಗೊಳಿಸಿದರು. ಆಮೇಲೆ ಸೌ॥ ಸುಗ್ಗಲಾದೇವಿ ತಮಶೆಟ್ಟಿ, ಕು॥ ಗೌರೀದೇವಿ ಕಟಾಪ, ಕು॥ ಶಾಂತದೇವಿ ಮಾಳಗೆ ಇವರು ಶ್ರೀ ಪಂಡಿತರ ಅವತಾರ ವಿಷಯದಲ್ಲಿ ಆಕಾಶವಾಣಿ ಮತ್ತು ಪಂಡಿತರ ಜೀವನ ಚರಿತ್ರ ಈ ವಿಷಯಕವಾದ ಸಂವಾದಗಳನ್ನು ಮಾಡಿ ಸಭಿಕರನ್ನು ಆನಂದಗೊಳಿಸಿದರು. ತರುವಾಯ ಶ್ರೀ ಗುರವ್ವಬಾಯಿ ಮಠಪತ್ತಿ, ಸೌ॥ ದಾನವ್ವಬಾಯಿ ಹೀರೆಮಠ, ವೇ॥ ಪಂ॥ ಧರ್ಮರತ್ನ ಮಲ್ಲಿಕಾರ್ಜುನಶಾಸ್ತ್ರಿಗಳು ಮಣೂರು, ವೇ॥ ಅಲ್ಲಮ ಪ್ರಭು ಆಲೂರು ಶ್ರೀ॥ ಷ॥ ಬ್ರ॥ ಜೈನಾಪುರ ಗುರುಸ್ವಾಮಿಗಳವರು ಪಂಡಿ ತರ ಕಾರ್ಯಕಲಾಪಗಳನ್ನು ಕುರಿತು ಬಹು ಮನೋಹರವಾಗಿ ಭಾಷಣ ಮಾಡಿದರು. ಆಮೇಲೆ ಅಧ್ಯಕ್ಷಮಹಾಶಯರು ಅಕಸ್ಮಾತ್ತಾಗಿ ನನಗೆ ಈ ಮಂಗಲಕಾರ್ಯ ದೊರೆತದ್ದು ಬಹಳ ಆನಂದದಾಯಕವಾಗಿದೆಯೆಂದೂ, ಲುಪ್ತವಾಗಿದ್ದ ಗುರುವರ್ಗದ ಅಧಿಕಾರವನ್ನು ಪ್ರಕಾಶಗೊಳಿಸಿ ಗುರುಭಕ್ತಿ ಯನ್ನು ಹೆಚ್ಚಿಸಿ ಪಿತೃಸ್ವರೂಪಿಗಳಾಗಿರುವ ಪಂಡಿತರ ಗುಣವರ್ಣನೆಯನ್ನು ಎಷ್ಟುಮಾಡಿದರೂ ಅವರ ಉಪಕಾರವು ತೀರುವುದಿಲ್ಲವೆಂದೂ ಅನಂತ ಉದಾಹರಣೆಗಳಿಂದ ಎಲ್ಲರ ಮನಸ್ಸಿನಲ್ಲಿ ಬಿಂಬಿಸುವಂತೆ ಹೇಳಿದರು. ಆಮೇಲೆ ಸೌ॥ ಭಾಗೀರಥೀಬಾಯಿಯವರು ಮಠೋದ್ಧಾರಸಮಯದಲ್ಲಿ

ಪಂಡಿತರಿಗೆ ಒದಗಿದ ಕಷ್ಟಗಳನ್ನೂ, ಅವರ ಧೈರ್ಯಸಾಹಸಗಳನ್ನೂ, ಅವರಿಂದ ಲಭಿಸಿದ ಸಮಾಜಹಿತವನ್ನೂ ಎಲ್ಲರಿಗೂ ತಿಳಿಯುವಂತೆ ಪ್ರತಿಪಾದಿಸಿದರು. ಆಮೇಲೆ ಉಚ್ಚಾಸನದಲ್ಲಿದ್ದ ಪಂಡಿತರ ಭಾವಚಿತ್ರಕ್ಕೆ ಮಂಗಲವಾಗಿ ಜಗದಾಚಾರ್ಯರ ಜಯಘೋಷದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

ಸೌ|| ದಾನವ್ವಬಾಯಿ ಹಿರೇಮಠ
ಸೆಕ್ರೆಟರಿ, ವೀರಶೈವ ಸದಾಚಾರ ಸ್ತ್ರೀ ಸಮಾಜ

## ಚಿಂಚೋಳಿ

ನಿಜಾಂ ಇಲಾಖಾ ಚಿಂಚೋಳಿಗ್ರಾಮದಲ್ಲಿರುವ ವೀರಶೈವ ತರುಣಸಂಘದವರು ತಾ||17-6-42 ನೆಯ ದಿವಸ ವೀರಶೈವ ಮಠೋದ್ಧಾರಕರೂ ಗುರುವಿರೋಧಿಜನ ತಮೋಭಾಸ್ಕರರೂ, ಪಂಚಪೀಠ ಪ್ರಕಾಶಕರೂ, ಕಾರ್ಯದುರಂಧರರೂ, ಗುರುವರ್ಗಸಮುದ್ಧರಣದೀಕ್ಷಿತರೂ, ಪ್ರಾತಃಸ್ಮರಣೀಯರೂ ಆಗಿರುವ ವೇ||ಪಂ|| ಕಾಶೀನಾಥಶಾಸ್ತ್ರಿಗಳವರ ವರ್ಧಂತೀಮಹೋತ್ಸವವನ್ನು ವಿಶೇಷ ವೈಭವದಿಂದ ನೆರವೇರಿಸಿದರು. ಪ್ರಾತಃಕಾಲ 10 ಘಂಟೆಗೆ ಜಗದಾಚಾರ್ಯರ ಲಿಂಗೋದ್ಭವಮೂರ್ತಿಗೆ ಪೂಜಾದಿಗಳು ನೆರವೇರಿದವು. ಸಾಯಂಕಾಲ ತರುಣಸಂಘದಲ್ಲಿ ಸಭೆಗೂಡಿತು. ಪಂಡಿತರ ಭಾವಚಿತ್ರವು ಪುಷ್ಪಮಾಲೆಯಿಂದಲಂಕೃತವಾಗಿ ಉನ್ನತಾಸನದಲ್ಲಿ ಇಡಲ್ಪಟ್ಟಿತ್ತು. ಜಗದಾಚಾರ್ಯರ ಸ್ತೋತ್ರವಾದಮೇಲೆ ಗುರುಬಸವಯ್ಯ ಮಠಪತ್ತಿ ಇವರ ಪ್ರಾರ್ಥನೆಯಂತೆ ಶ್ರೀ|| ಷ|| ಬ್ರ|| ಮಹಾಲಿಂಗಸ್ವಾಮಿಗಳು ದೇಶಿಕೇಂದ್ರ ಕೋರಿಕಂಥಿಮಠ ಇವರು ಅಧ್ಯಕ್ಷಸ್ಥಾನವನ್ನಲಂಕರಿಸಿದರು. ಆಮೇಲೆ ತರುಣಸಂಘದ ಬಾಲಕರು, ಪಂಡಿತಜೀಯವರ ಅವತಾರದ ಬಗ್ಗೆ ಆಕಾಶವಾಣಿ ರೂಪವಾದ ಸಂವಾದವನ್ನು ಮಾಡಿ ಸರ್ವರನ್ನೂ ಸಂತೋಷಪಡಿಸಿದರು. ಆಮೇಲೆ ಗುರುಬಸಯ್ಯನವರು, ಪಂಡಿತರಿಂದ ಈವರೆಗೆ ನಮ್ಮ ಸಮಾಜಕ್ಕಾದ ಉಪಕಾರವನ್ನು ವರ್ಣಿಸಿದರು. ಬಳಿಕ ಧರ್ಮಾಭಿಮಾನಿಗಳೂ ಕಾರ್ಯದಕ್ಷರೂ ಆದ ಪರ್ವತ ಮಠದ ವೇ|| ಕೊಟ್ರಪ್ಪಯ್ಯನವರು ಪಂಡಿತರ ಜೀವನ ಚರಿತ್ರವನ್ನು ಓದಿ ಹೇಳಿದರು. ಶ್ರೀಜಗದ್ಗುರು ರಂಭಾಪುರೀ ಪೀಠದ ಉತ್ತರಾಧಿಕಾರ ಸಮಯದಲ್ಲಿ ಪಂಡಿತರು ಬಹಳ ಶ್ರಮ

ವಹಿಸಿ ಕೆಲಸಮಾಡಿದವರೆಂದೂ, ಆ ಸಮಯದಲ್ಲಿ ಮೈಸೂರು ಶ್ರೀಮನ್ಮಹಾರಾಜರವರಿಗೆ ಒಂದೇ ದಿವಸ ಒಂದುಸಾವಿರ ಟೆಲಿಗ್ರಾಮುಗಳನ್ನು ಕೊಡಿಸಿದರೆಂದೂ, ಇದನ್ನು ನೋಡಿದರೆ ರೇಣುಕರ ತ್ರಿಕೋಟಿ ಗುರುರೂಪಧಾರಣದ ಚರಿತ್ರವು ಸ್ಮರಣೆಗೆ ಬರುವದೆಂದೂ ಹೇಳಿ ಸಭಿಕರನ್ನು ಸಂತೋಷಗೊಳಿಸಿದರು. ಆಮೇಲೆ ತರುಣಸಂಘದ ಉಪಾಧ್ಯಕ್ಷರಾದ ಮತಪತ್ತಿ ಸಿದ್ಧಲಿಂಗಯ್ಯನವರಿಂದ ವಿರಚಿತವಾದ ಆಚಾರ್ಯರ ಸ್ತೋತ್ರವು ಹಾಡಲ್ಪಟ್ಟಿತು. ಬಳಿಕ ಶ್ರೀಜಗದ್ಗುರು ಪಂಚಾಚಾರ್ಯಮಹಾರಾಜಕೀ ಜೈ, ಸನಾತನ ವೀರಶೈವ ಧರ್ಮೋದ್ಧಾರಕ ವಿದ್ವದ್ರತ್ನ ಪಂಡಿತ ಶ್ರೀ ಕಾಶೀನಾಥಶಾಸ್ತ್ರೀಜೀಕಿ ಜೈ, ಎಂಬ ಜಯಘೋಷದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

ಸೆಕ್ರೆಟೆರಿ, ವೀರಶೈವ ತರುಣಸಂಘ, ಚಿಂಚೋಳಿ.

## ಹೋಟಗಿ

ಯಾವ ಮಹಿಮನಿಂದ ಗುರುವರ್ಗದ ಉನ್ನತಿಯಾಯಿತೋ, ಯಾವ ದಿವ್ಯಮೂರ್ತಿಯಿಂದ ವೀರಶೈವರು ತಮ್ಮ ನಿಜವಾದ ಪಿತೃಗಳನ್ನು ಕಂಡರೋ, ಯಾವ ತೇಜೋಮೂರ್ತಿಯಿಂದ ಗೂಗೆಗಳ ಘೂತ್ಕಾರವು ಅಡಗಿತೋ, ಯಾವ ಪರೋಪಕಾರಿ ಪುರುಷನಿಂದ ನಮ್ಮ ಸಮಾಜವು ಜೀವಿಸಿತೋ ಆ ಪರಮಪೂಜ್ಯ ಪ್ರಾತಃಸ್ಮರಣೀಯ ವಿಭೂತಿಯಾದ, ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರ ವರ್ಧಂತ್ಯುತ್ಸವವು ಹೋಟಗಿ ಶ್ರೀಗಳವರ ಅಧ್ಯಕ್ಷತೆಯಲ್ಲಿ ತಾ॥ ೧೭-೬-೪೨ ನೇ ಬುಧವಾರ ದಿವಸ ಒಳ್ಳೆ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು. ಉಚ್ಚಾಸನದಲ್ಲಿ ಮಂಡಿಸಿದ್ದ ಪಂಡಿತರ ಭಾವಚಿತ್ರವು ಪುಷ್ಪಮಾಲೆಯಿಂದ ಅಲಂಕೃತವಾಗಿತ್ತು. ಮೊದಲು ಅಂದಪ್ಪ ಭೂಸಪ್ಪ ಬಿರಾಜದಾರ ತೀರ್ಥ, ಇವರಿಂದ ಶ್ರೀಜಗದಾಚಾರ್ಯರ ಮತ್ತು ಪಂಡಿತರ ಸ್ತೋತ್ರಗಳಾದಮೇಲೆ, ಹೋಟಗಿ ಶ್ರೀಗಳು "ಪಂಡಿತರಿಂದ ಸಮಾಜಕ್ಕಾದ ಮಹೋಪಕಾರ" ಎಂಬ ವಿಷಯವನ್ನು ೧ ಘಂಟೆಯವರೆಗೆ ಉಪದೇಶಿಸಿದರು. ಅನಂತರ ಶ್ರೀಜಗದಾಚಾರ್ಯರ ಮತ್ತು ಪಂಡಿತರ ಜಯಘೋಷದೊಡನೆ ಸಭೆಯು ಸಮಾಪ್ತಿಗೊಂಡಿತು.

ಓರ್ವ ಗುರುಭಕ್ತ.

## ಕಾತರಕಿ

ನಿಜಾಮ ಇಲಾಖಾ ಕೊಪ್ಪಳ ತಾ॥ ಕಾತರಕಿಗ್ರಾಮದ ಕನ್ನಡ ಶಾಳಾ ಹೆಡ್‌ಮಾಸ್ತರರಾದ ವೇ॥ ಶಿವಯ್ಯನವರು ಬನ್ನಿಕೊಪ್ಪ ಹಿರೇಮಠ ಇವರು ತಮ್ಮ ಗೃಹದಲ್ಲಿ ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರ ವರ್ಧಂತ್ಯುತ್ಸವವನ್ನು ವಿಶೇಷ ವೈಭವದಿಂದ ನೆರವೇರಿಸಿದರು. ನಿಜ ಜ್ಯೇಷ್ಠ ಶು॥ ೪ ಬುಧವಾರ (ತಾ॥ ೧೭-೬-೧೯೪೨) ದಿವಸ ಪ್ರಾತಃಕಾಲ ಶ್ರೀಜಗದ್ಗುರು ಪಂಚಾಚಾರ್ಯರ, ಶ್ರೀವೀರಭದ್ರಸ್ವಾಮಿಯ ಮತ್ತು ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳವರ ಸನ್ನಿಧಿಯಲ್ಲಿ ಪಂಡಿತರು ಕುಳಿತಿರುವ ಭಾವಚಿತ್ರಗಳು ಪುಷ್ಪಮಾಲಿಕಾದಿಗಳಿಂದ ಅಲಂಕರಿಸಲ್ಪಟ್ಟು ಪೂಜಿಸಲ್ಪಟ್ಟವು. ಮಧ್ಯಾಹ್ನ ವ್ಯುಷ್ಟಾನ್ನದಿಂದ ಮಾಹೇಶ್ವರಾರಾಧನೆಯು ನೆರವೇರಿತು. ಬಳಿಕ ವೇ॥ ಗುರಯ್ಯನವರು ಗೊಂಡಬಾಳ, ವೇ॥ ಗುಂಡಯ್ಯನವರು ಆನವೇರಿ ಇವರೇ ಮೊದಲಾದವರು ಪಂಡಿತರ ಇಂತಹ ಅನೇಕ ವರ್ಧಂತ್ಯುತ್ಸವಗಳನ್ನು ಮಾಡುವಂತೆ ಜಗದೀಶ್ವರನು ಅನುಗ್ರಹಿಸಲೆಂದು ಪ್ರಾರ್ಥಿಸಿದರು. ಆ ಮೇಲೆ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾರಾಜಕೀ ಜೈ! ವೀರಶೈವಮತೋದ್ಧಾರಕ ಪಂಡಿತ ಕಾಶೀನಾಥಶಾಸ್ತ್ರೀ ಮಹಾರಾಜಕೀ ಜೈ! ಎಂಬ ಜಯಘೋಷದೊಡನೆ ಕಾರ್ಯವನ್ನು ಸಮಾಪ್ತಿಗೊಳಿಸಲಾಯಿತು.

ಪ್ರತ್ಯಕ್ಷದರ್ಶಿ.

---

# ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರ ದಿವ್ಯಪ್ರಭಾವ

ಸಮುದ್ರವು ಉಕ್ಕೇರುವದೂ ಮತ್ತು ಇಳಿಯುವುದೂ, ಸೂರ್ಯನ ಪ್ರಕಾಶವು ಪ್ರಾತಃಕಾಲದಿಂದ ಮಧ್ಯಾಹ್ನದ ವರೆಗೆ ಏರುತ್ತಹೋಗಿ ಅಲ್ಲಿಂದ ಇಳಿಯುತ್ತ ಹೋಗುವದೂ ಎಲ್ಲರಿಗೂ ತಿಳಿದ ವಿಷಯವಾಗಿದ್ದು ಈ ಏರಿಳಿತಗಳು ಸೃಷ್ಟಿಯ ನಿಯಮದಂತೆ ಕ್ರಮವಾಗಿ ನಡೆಯುವವೆಂದು ಗೊತ್ತಾಗುವುದು. ಆದರಂತೆಯೇ ಮತಧರ್ಮಗಳಾದರೂ ಒಂದು ಕಾಲದಲ್ಲಿ ವೃದ್ಧಿಯನ್ನೂ ಒಂದುಕಾಲದಲ್ಲಿ ಹ್ರಾಸವನ್ನೂ ಹೊಂದುವುದು ಸ್ವಾಭಾವಿಕವಾಗಿದೆ. ಪೂರ್ವಕಾಲದಲ್ಲಿ ಶ್ರೀಜಗದ್ಗುರು ಪಂಚಾಚಾರ್ಯರ ಉಪದೇಶದಿಂದ ರಾಜಾಧಿರಾಜರೂ ಕೂಡ ಲಿಂಗಧಾರಿಗಳಾಗಿದ್ದರೆಂದೂ, ಹಿಮಾಲಯದಿಂದ ರಾಮೇಶ್ವರದವರೆಗೂ ವೀರಶೈವರು ವ್ಯಾಪಿಸಿದ್ದು ಎಲ್ಲ ಮತಗಳಲ್ಲಿ ವೀರಶೈವಮತವು ಅಗ್ರಸ್ಥಾನವನ್ನು ಹೊಂದಿತ್ತೆಂದೂ, ಆಗ್ಗೆ ೩ ಕೋಟಿಜನ ವೀರಶೈವರಿದ್ದರೆಂದೂ "ವೀರಶೈವರತ್ನ" ಎಂಬ ಗ್ರಂಥದಿಂದ ತಿಳಿದುಬರುತ್ತದೆ. ಇತ್ತೀಚೆಗೆ ಬೌದ್ಧ, ಜೈನ, ವೈಷ್ಣವಾದ್ಯನೇಕ ಮತಗಳುಂಟಾಗಿ ವೀರಶೈವಮತದ ಪ್ರಸಾರವು ಕಡಿಮೆಯಾಯಿತು.

೧೨ ನೆಯ ಶತಮಾನದಲ್ಲಿ ಬಸವನೆಂಬವನು ಜನಿಸಿ ನಿಜತತ್ತ್ವವನ್ನು ಮೂಲೆಗೊತ್ತಿ ಜಾತಿಸಾಂಕರ್ಯವನ್ನು ಬೋಧಿಸುವ ಅನೇಕ ವಚನಗಳನ್ನು ಪ್ರಚಾರಮಾಡುತ್ತ ಕೆಲಕೆಲವು ಊರುಗಳಲ್ಲಿ ಹೊಸದಾಗಿ ಮಠಗಳನ್ನು ಕಟ್ಟಿಸಿ, ಆ ಮಠಗಳಿಗೆ ವಿರಕ್ತಮಠಗಳೆಂದು ಹೆಸರಿಟ್ಟನು. ವಿರಕ್ತಮಠಗಳು ಬಸವನ ಕಾಲದಲ್ಲಿಯೇ ಹುಟ್ಟಿದವು. ಅವನಿಗಿಂತ ಮೊದಲು ವಿರಕ್ತಮಠಗಳು ಇದ್ದವೆಂದು ಯಾವ ಗ್ರಂಥದಲ್ಲಿಯೂ ಯಾವ ಶಿಲಾಲೇಖದಲ್ಲಿಯೂ ಪಾತಾಳಗಡೆಯನ್ನು ಹಾಕಿ ಹುಡುಕಿದರೂ ದೊರೆಯುವುದಿಲ್ಲ. ಗುರುವರ್ಗದ ಮಠಗಳು ಮಾತ್ರ ಪ್ರತಿಯೊಂದು ಊರುಗಳಲ್ಲಿ ಅನಾದಿಕಾಲದಿಂದ ಇಂದಿನ ವರೆಗೂ ಇದ್ದೇ ಇರುತ್ತವೆ. ಇವುಗಳ ಬಗ್ಗೆ ಅನೇಕ ಗ್ರಂಥ ಮತ್ತು ಶಾಸನಗಳ ಆಧಾರಗಳು ದೊರಕುತ್ತವೆ. ಪ್ರತಿಯೊಂದು ಮಠಕ್ಕೂ ಬ್ರಹ್ಮಚಾರಿಗಳಾದ ಗುರುಮೂರ್ತಿಗಳು ಇದ್ದೇ ಇರುತ್ತಾರೆ. ಇವರು ವಿದ್ಯೆಯನ್ನು ಕಲಿಯಡ

ದಡ್ಡರಾಗಿ ತಮ್ಮ ಶಿಷ್ಯರ ಮನೆಗಳಿಗೆ ಹೋಗಿ ಧರ್ಮದ ತತ್ವಗಳನ್ನು ಉಪದೇಶಮಾಡದೆ ತಮ್ಮ ಸೌಳುಹತ್ತಿದ ಹಾಳುಮಠದಲ್ಲಿಯೇ ಕುಳಿತುಬಿಟ್ಟರು. ನೂತನವಾಗಿ ಬಂದ ವಿರಕ್ತರು ಅಲ್ಪಸ್ವಲ್ಪ ವಿದ್ಯೆಯನ್ನು ಕಲಿತು ದೇಶಸಂಚಾರಮಾಡುತ್ತ ಗುರುವರ್ಗದವರ ಶಿಷ್ಯರ ಮನೆಗಳಿಗೆ ಹೋಗಿ ವಾಚಾಳತ್ವದಿಂದ ಅವರಿಗೆ ನಾವೇ ಗುರುಗಳೆಂದು ಹೇಳಿ ಮೋಕ್ಷದಾಯಕವಾದ 'ಪಂಚಾಕ್ಷರ' ಮಹಾಮಂತ್ರವನ್ನು ಬಿಟ್ಟು ಶಾಸ್ತ್ರವಿರುದ್ಧವಾದ ಅಬದ್ಧ 'ಬಸವ' ಮಂತ್ರವನ್ನು ಉಪದೇಶಿಸಹತ್ತಿದರು. ಅಲ್ಲದೆ ಅಲ್ಲಿಯ ಪ್ರಮುಖ ಜನರನ್ನು ಕೂಡಿಸಿ ನಾವು ಪಾಠಶಾಲೆಯನ್ನು ಸ್ಥಾಪಿಸಿ ಅನ್ನದಾನ ಮಾಡುತ್ತೇವೆ. ವರ್ಗಣಿಯನ್ನು ಮಾಡಿಕೊಡಬೇಕು ಎಂದು ಹೇಳಿ ಮಾಡಿಸಿಕೊಂಡು ಊರಿಗೆ ಹೋಗಿ ತಮ್ಮ ದುರುದ್ದೇಶವನ್ನು ಸಾಧಿಸಹತ್ತಿದರು. ವಿರಕ್ತರಿಗೆ ಶಿಷ್ಯರಿಲ್ಲದಿದ್ದರೂ ನಾವು ಮೀರಿದ ಸ್ಥಲದವರೆಂದು ಇಲ್ಲದ್ದೊಂದು ಹೇಳಿ ಇಡೀ ಊರಲ್ಲಿಯೇ ವರ್ಗಣಿಮಾಡಿಸಿಕೊಂಡು ಬರುತ್ತಾರೆ. ಆಚಾರದಲ್ಲಿ ಪಕ್ಕಾ-ಕಚ್ಚಾ ಮಡಿಯೆಂದು ಎರಡು ಭಾಗಮಾಡಿ ನಾವು ಪಕ್ಕಾ ಮಡಿಯುವರೆಂದು ಒಳಗೆ ಕುಳಿತು ಕಚ್ಚಾಮಡಿಯುವರನ್ನು ಹೊರಗೆ ಕುಳ್ಳಿರಿಸಿ ತಾವು ಒಳಗಡೆ ಖೀರು, ಬೇಸನ್ನು, ಬುಂದೆ, ಜಿಲೇಬಿ, ಸಣ್ಣಕ್ಕಿ ಅನ್ನ ಮುಂತಾದ ಉತ್ತಮವಾದ ಆಹಾರವನ್ನು ಸ್ವೀಕರಿಸಿ, ಕಚ್ಚಾ ಮಡಿಯುವರಿಗೆ ಗೋಧಿರೊಟ್ಟಿ, ಬೆಲ್ಲದಬೇಳೆ, ದೊಡ್ಡ ಅಕ್ಕಿಅನ್ನ ಉಣಿಸುವರು. ಇದು ಪಕ್ಕಾಮಡಿಯ ಮೀರಿದ ಸ್ಥಲದವರ ಆಚರಣೆಯಾಗಿದೆ. ದೊಡ್ಡ ಮನುಷ್ಯರು ಸತ್ತರೆ ಪಾದವನ್ನಿಡಲಿಕ್ಕೆ ಹೋಗುವರು. ಶುಭಕಾರ್ಯಗಳಲ್ಲಿ ಪಂಚಕಲಶಗಳನ್ನು ಸ್ಥಾಪಿಸಬೇಕೆನ್ನುವರು. ಲಗ್ನಕ್ಕೆ ಹೋಗುವರು. ಪಾದೋದಕವನ್ನು ಕೊಡುವರು. ಪ್ರಾಯಶ್ಚಿತ್ತ ಸಂಸ್ಕಾರವನ್ನು ಮಾಡಲಿಕ್ಕೆ ಹೋಗುವರು. ವಿರಕ್ತರು ಇವೇಮೊದಲಾದ ಗುರುವರ್ಗದವರ ಕಾರ್ಯದಲ್ಲಿ ಕೈಹಾಕಿ ಶಾಸ್ತ್ರವಿರುದ್ಧವಾಗಿ ವರ್ತಿಸುತ್ತಿರುವುದನ್ನು ಕೆಲವು ಪಂಡಿತರು ನೋಡಿದ್ದರೂ, ಇದನ್ನು ಪ್ರತಿಭಟಿಸಲಿಕ್ಕೆ ಯಾರೂ ಪ್ರಯತ್ನ ಮಾಡಲಿಲ್ಲ. ಸರ್ವರೂ ಸ್ವಾರ್ಥಿಗಳಾಗಿ ತಮ್ಮ ಪ್ರಪಂಚದಲ್ಲಿಯೇ ಮಗ್ನರಾಗಿದ್ದರು.

ಧರ್ಮದ ನಿಜವಾದ ತತ್ವಗಳನ್ನು ಪ್ರಕಟಿಸುವದಕ್ಕಾಗಿಯೂ, ಗುರುವರ್ಗದವರನ್ನು ಎಚ್ಚರಗೊಳಿಸುವದಕ್ಕಾಗಿಯೂ, ಭಗವಂತನೇ ಈ ನಮ್ಮ

ಧರ್ಮಾವತಾರಿಗಳಾದ ಪಂಡಿತವರ್ಯರನ್ನು ಅವತಾರಮಾಡಿಸಿದನು. ಸೂರ್ಯನು ಉದಯವಾದ ಕೂಡಲೆ ಕತ್ತಲೆಯು ಓಡಿಹೋಗುವಂತೆ ಸದರಿ ಮಹಾಪುರುಷರ ಅವತಾರದಿಂದ ವೀರಶೈವರಲ್ಲಿದ್ದ ಅಜ್ಞಾನಾಂಧಕಾರವು ನಾಶವಾಗಿ, ಸುಜ್ಞಾನವೆಂಬ ಪ್ರಕಾಶವು ಜಗತ್ತಿನಲ್ಲಿ ಹರಡಲಿಕ್ಕೆ ಆರಂಭವಾಯಿತು. ಇವರು ತಮ್ಮ ತಾಯಿಯವರ ತವರೂರಾದ ಗದಗ ತಾ|| ನಾರಾಯಣಪುರದಲ್ಲಿ ಜನ್ಮತಾಳಿ ಅಲ್ಲಿಯೇ ಬಾಲ್ಯವನ್ನು ಕಳೆದು ಕನ್ನಡ ಅಭ್ಯಾಸವನ್ನು ಪೂರ್ತಿಗೊಳಿಸಿದರು. ಅಲ್ಲಿಂದ ಗುರುವಂಶಕ್ಕೆ ಮುಖ್ಯವಾದ ಸಂಸ್ಕೃತಾಭ್ಯಾಸವನ್ನು ಅಬ್ಬಿಗೇರಿ ಸೊಲ್ಲಾಪುರ ಗ್ರಾಮಗಳಲ್ಲಿರುವ ಪಾಠಶಾಲೆಗಳಲ್ಲಿ ಮಾಡಿದರು. ಅಲ್ಲಿಂದ ಹೆಚ್ಚಿನ ಪಾಂಡಿತ್ಯವನ್ನು ಸಂಪಾದಿಸುವದಕ್ಕಾಗಿ ಕಾಶೀಕ್ಷೇತ್ರಕ್ಕೆ ಪ್ರಯಾಣಮಾಡಿದರು. ಅಲ್ಲಿ ಕೆಲವು ವರ್ಷ ಅಭ್ಯಾಸಮಾಡಿ ಕಲಕತ್ತಾ ಗವರ್ನಮೆಂಟ್ ಕಾಲೇಜಿನಲ್ಲಿ ಪರೀಕ್ಷೆಗಳನ್ನು ಕೊಟ್ಟು ಉತ್ತೀರ್ಣರಾಗಿ ತಮ್ಮ ಸ್ವಸ್ಥಾನವಾದ ನಾಗನೂರಿಗೆ ಬಂದರು. ಈಗಿನ ಪಂಡಿತರಂತೆ ಈ ನಮ್ಮ ಪಂಡಿತ ಮಹಾಪುರುಷರು ಲಗ್ನವಾಗಿ ಪ್ರಪಂಚಮಾಡುತ್ತ ಸ್ವಾರ್ಥಪರಾಯಣರಾಗಲಿಲ್ಲ. ಲಗ್ನವಾಗಿ ಒಂದು ಉಪಾಧಿಯನ್ನು ಗಂಟುಹಾಕಿಕೊಂಡರೆ, ನಮ್ಮ ಸಮಾಜಸುಧಾರಣೆಗೆ ಆತಂಕವಾಗುವದೆಂಬುದನ್ನರಿತು ವಿವಾಹಕಾರ್ಯವನ್ನು ಧಿಕ್ಕರಿಸಿ ಶ್ರೇಷ್ಠವಾದ ಬ್ರಹ್ಮಚರ್ಯಾಶ್ರಮವನ್ನು ತಾಳಿದರು. ಇವರು ಹಗಲುರಾತ್ರಿಯೆನ್ನದೆ ಯಾವಾಗಲೂ ನಿಸ್ವಾರ್ಥ ಬುದ್ಧಿಯಿಂದ ನಮ್ಮ ವೀರಶೈವ ಮತವು ಎಂದು ಉನ್ನತಸ್ಥಿತಿಗೆ ಬಂದೀತು? ಮತ್ತು ವೀರಶೈವ ಮತಕ್ಕೆ ಶಿಖಾಮಣಿಯಂತಿರುವ ಗುರುವರ್ಗದವರು ಪಂಡಿತರಾಗಿ ಸುಧಾರಿಸಿ ತಮ್ಮ ಕರ್ತವ್ಯಕರ್ಮವನ್ನು ಎಂದು ಮಾಡ್ಯಾರು ಎಂದು ಚಿಂತಿಸುತ್ತಿದ್ದರು. ಊರಿಗೆ ಬಂದನಂತರ ಮಠದಲ್ಲಿ ಸುಮ್ಮನೆ ಕುಳಿತುಕೊಳ್ಳದೆ ಶಿಲಾಶಾಸನ, ಪ್ರಾಚೀನ ಗ್ರಂಥಗಳನ್ನು ಶೋಧಿಸುವುದಕ್ಕಾಗಿ, ಸರ್ವತ್ರ ಸಂಚಾರಮಾಡಿಕೊಂಡು ಬಂದರು. ಇನ್ನು ಧರ್ಮದ ನಿಜವಾದ ತತ್ವಗಳನ್ನು ಬಾಯಿಂದ ಬೋಧಿಸುವದಕ್ಕಿಂತಲೂ ವೃತ್ತ ಪತ್ರಿಕೆಯ ದ್ವಾರಾ ಪ್ರಚಾರಮಾಡಿದರೆ ಹೆಚ್ಚು ಪರಿಣಾಮವಾಗುವದೆಂದು ನಿಶ್ಚಯಿಸಿದರು. ಇವರೀಪವಿತ್ರ ಕಾರ್ಯಕ್ಕೆ ಅನೇಕ ಜನ ಭಕ್ತಮಾಹೇಶ್ವರರು ತಮ್ಮ ಶಕ್ತ್ಯನುಸಾರವಾಗಿ ದ್ರವ್ಯದಾನ ಮಾಡಿದರು. ಪೀಠಾಚಾರ್ಯರು ವಿಶೇಷವಾಗಿ ಆಶೀರ್ವದಿಸಿದರು. ಈ

ಮಹಾಕಾರ್ಯಕ್ಕೆ ಧರ್ಮರಾಜ್ಯವೆನಿಸಿದ ಮೈಸೂರು ರಾಜಧಾನಿಯೇ ಯೋಗ್ಯವೆಂದು ತಿಳಿದು ಅಲ್ಲಿಯೇ ಕಾರ್ಯಾಲಯವನ್ನು ಸ್ಥಾಪಿಸಿದರು. ಅಲ್ಲಿಂದಲೇ "ಪಂಚಾಚಾರ್ಯಪ್ರಭಾ" ಪತ್ರಿಕೆಯನ್ನು ಹೊರಡಿಸಲು ಸಕಲ ಏರ್ಪಾಟುಗಳನ್ನು ಮಾಡಿದರು. ಈ ಪತ್ರಿಕೆಯಲ್ಲಿ ಪ್ರಕಟವಾಗುವ ಧಾರ್ಮಿಕ ತತ್ವಗಳನ್ನು ಕಂಡು ಸ್ವಮತ-ಪರಮತದವರು ಸಹ ಚಂದಾದಾರರಾದರು. ಸೂರ್ಯನು ಉದಯವಾದ ಕೂಡಲೆ ಕಮಲಗಳು ಅರಳುವಂತೆ ಪತ್ರಿಕೆಯೊಳಗಿನ ಮಹತ್ವದ ಲೇಖಗಳನ್ನು ಓದಿ ಯಾವತ್ತೂ ಗುರುವರ್ಗ-ಭಕ್ತವರ್ಗದವರ ಮುಖಕಮಲಗಳು ಅರಳತೊಡಗಿದವು. ಹೆಸರಿಗೆ ತಕ್ಕಂತೆ ಪ್ರಭೆಯು ತನ್ನ ಪ್ರಕಾಶವನ್ನು ಇಡೀ ಜಗತ್ತಿಗೆಲ್ಲ ಹರಡಿತು.

ಈ ಪತ್ರಿಕೆಯು ಜನ್ಮವೆತ್ತಿ ಸ್ವಲ್ಪೇ ವರ್ಷಗಳಾದರೂ ತನ್ನ ಧರ್ಮಬೋಧೆಯನ್ನು ಯಥಾಪ್ರಕಾರವಾಗಿ ಸಾಗಿಸುತ್ತಿದೆ. ಗುರುವರ್ಗದಲ್ಲಿ ಕೆಲವರಿಗೆ ತಮ್ಮ ಗೊತ್ರ ಸೂತ್ರಗಳು ಗೊತ್ತಿದ್ದಿಲ್ಲ. ವೈದಿಕ ಕರ್ಮವನ್ನು ಹೇಗೆ ಮಾಡಬೇಕೆಂಬುದು ತಿಳಿದಿದ್ದಿಲ್ಲ. ಇವೆಲ್ಲ ಲೋಪಗಳನ್ನು ಹೋಗಲಾಡಿಸಿಕೊಳ್ಳುವದಕ್ಕಾಗಿ ಎಲ್ಲರಿಗೂ ಸ್ಪಷ್ಟವಾಗಿ ತಿಳಿಯುವಂತೆ ಕನ್ನಡದಲ್ಲಿ ಪ್ರತಿಯೊಂದು ಕರ್ಮದ ವಿಧಿಗ್ರಂಥಗಳನ್ನು ಪ್ರಿಂಟುಮಾಡಿದ್ದಲ್ಲದೆ ಅನೇಕ ಧಾರ್ಮಿಕ ತತ್ವಗಳನ್ನು ತಿಳಿಸುವ ಗ್ರಂಥಗಳನ್ನು ಪ್ರಿಂಟುಮಾಡಿದರು. ಅವು ಒಟ್ಟು ೪೦-೫೦ ಗ್ರಂಥಗಳಾಗಿವೆ. ನಮ್ಮ ಆಚಾರ್ಯರ ಹಾಗೂ ಆಚಾರ್ಯರು ಮಾಡಿದ ಲೀಲೆಗಳ ಭಾವಚಿತ್ರಗಳನ್ನು ಉತ್ತಮ ಚಿತ್ರಕಾರರಿಂದ ಬರೆಯಿಸಿ ಅವುಗಳ ಬ್ಲಾಕ್ ಮಾಡಿಸಿ ಪ್ರತಿಯೊಬ್ಬರ ಮನೆಯಲ್ಲಿಯೂ ಫೋಟೋಗಳು ಮೆರೆಯುವಂತೆ ಮಾಡಿದರು. ಈ ಮಹಾಪುರುಷರ ಪ್ರಯತ್ನವಿಶೇಷದಿಂದ ಇತ್ತೀಚೆಗೆ ಗುರುವರ್ಗದವರು ತಮ್ಮ ಕರ್ತವ್ಯ ಕರ್ಮದಲ್ಲಿ ನಿರತರಾದರು. ಧರ್ಮತತ್ವಗಳು ಗೊತ್ತಾದವು. ಭಕ್ತರಿಗೆ ನಮ್ಮ ಗುರುಗಳು ಯಾರು? ನಮ್ಮ ಮನೆಯಲ್ಲಿ ನಡೆಯತಕ್ಕ ಶುಭಾಶುಭ ಕರ್ಮಗಳನ್ನು ಮಾಡತಕ್ಕವರು ಯಾರು? ಎಂಬುದು ಎಲ್ಲರಿಗೂ ಗೊತ್ತಾಯಿತು. ಆಗ್ಗೆ ವಿರಕ್ತರ ಆಟವು ನಿಂತಿತು. ನಮ್ಮ ಹುಳುಕನ್ನು ಹೊರಗೆಡವಿ ನಮ್ಮ ಆಟವನ್ನು ಬಂದು ಮಾಡಿದರೆಂದು ಪಂಡಿತರ ಮೇಲೆ ವಿರಕ್ತರು ಭಯಂಕರ ಸಿಟ್ಟಾಗಿ ಕೋಲಾಹಲವನ್ನು ಎಬ್ಬಿಸಿದರಲ್ಲದೆ ಅನೇಕ

ಊರುಗಳಲ್ಲಿ ವಿಶೇಷ ತ್ರಾಸುಕೊಟ್ಟರು. ಆದರೂ ಪಂಡಿತರು ಧೈರ್ಯಗೆಡದೆ ತಮ್ಮ ಕಾರ್ಯವನ್ನು ಯಥಾಪ್ರಕಾರ ಸಾಗಿಸಿದರು. ಆತ್ಮಶಕ್ತಿಯ ಬಲದ ಮುಂದೆ ಕುಟಿಲರ ಕುಂಟಶಕ್ತಿಯ ಆಟವು ಎಂದಾದರೂ ನಡೆದೀತೇ? ಎಂದೂ ನಡೆಯಲಾರದು. ಈಗಲೂ ಕೆಲವು ವಿರಕ್ತರು ಹಾಗೂ ಅವರ ಪಾರ್ಟಿಯ ಜನರು ದುರಭಿಮಾನದಿಂದಲೋ ಅಥವಾ ಅಜ್ಞಾನದಿಂದಲೋ ಪಂಡಿತರನ್ನೂ ಹಾಗೂ ಅವರು ರಚಿಸಿದ ಗ್ರಂಥಗಳನ್ನೂ ತಿರಸ್ಕರಿಸುತ್ತಿರುವರು. ಇದು ಮೂರ್ಖತನವಲ್ಲದೆ ಬೇರೆಯಲ್ಲ. ಇದೇ ವಿಷಯವು ನಿಜಲಿಂಗ ಶತಕದಲ್ಲಿ "ಉನ್ನತೋನ್ನತ ಪಂಡಿತರನು ಹಳಿಯುವವ ಮೂರ್ಖ" ಎಂದು ಬರೆಯಲ್ಪಟ್ಟಿದೆ. ಪಂಡಿತರ ಯೋಗ್ಯತೆಯು ಈ ಪಾಮರರಿಗೆ ಹೇಗೆ ಗೊತ್ತಾದೀತು? ಇವರು ಬೇಕಾದಷ್ಟು ದೂಷಿಸಿದರೂ ಪಂಡಿತರಿಗೂ ಅವರು ಬರೆದ ಗ್ರಂಥಗಳಿಗೂ ಕುಂದು ಬರಲಾರದು. "ಜ್ವರರೋಗದಿಂದ ಪೀಡಿತನಾದವನು ಹಾಲನ್ನೂ, ಕಪ್ಪೆಯು ಕ್ಷೀರಸಮುದ್ರವನ್ನೂ, ವ್ಯಭಿಚಾರಿಮನುಷ್ಯನು ಚಂದ್ರನನ್ನೂ, ಗೂಗೆಯು ಸೂರ್ಯನನ್ನೂ, ಕಿವುಡನು ವೀಣೆಯನ್ನೂ, ಹುಟ್ಟುಗುರುಡನು ಕನ್ನಡಿಯನ್ನೂ, ಮೂಢರು ಉತ್ತಮವಾದ ಕಾವ್ಯವನ್ನೂ ನಿಂದಿಸಿದರೆ ಅವುಗಳಿಗೆ ಕುಂದು ಬರಲಾರದು ಎಂದು ಷಡಕ್ಷರಕವಿಗಳು ತಮ್ಮಿಂದ ರಚಿತವಾದ ಶಬರಶಂಕರವಿಲಾಸ ಗ್ರಂಥದಲ್ಲಿ ಹೇಳಿದ್ದಾರೆ." ಪಂಡಿತಮಹಾಶಯರ ದಿವ್ಯಪ್ರಕಾಶವನ್ನೂ ಅವರು ರಚಿಸಿದ ಗ್ರಂಥಗಳ ಪ್ರಭಾವವನ್ನೂ ನೋಡಿ ಅವರ ಹಾಗೂ ಆ ಗ್ರಂಥಗಳ ಪ್ರಕಾಶವನ್ನು ಕಡಿಮೆಮಾಡಬೇಕೆಂದು ಕುಹಕರು ಬೇಕಾದಷ್ಟು ಸಾಹಸಪಟ್ಟರೂ, ಅವರ ದಿವ್ಯತೇಜಸ್ಸು ಮತ್ತು ಆ ಗ್ರಂಥಗಳ ಪ್ರಕಾಶವು ಮತ್ತಷ್ಟು ಹೆಚ್ಚುತ್ತಿರುವುದಲ್ಲದೆ ಕಡಿಮೆಮಾತ್ರ ಎಂದೂ ಆಗಲಾರದು. ಇದೇ ಅಭಿಪ್ರಾಯವನ್ನು ಷಡಕ್ಷರಕವಿಗಳು "ಕನ್ನಡಿಯ ಪ್ರಕಾಶವನ್ನು ಕಡಿಮೆ ಮಾಡಬೇಕೆಂದು ದುಷ್ಟರು ಅದಕ್ಕೆ ಬೂದಿಯನ್ನು ಹಾಕಿ ತಿಕ್ಕಿದರೆ ಆ ಕನ್ನಡಿಯ ತೇಜಸ್ಸು ಮತ್ತಷ್ಟು ಹೆಚ್ಚುವದಲ್ಲದೆ ಕಡಿಮೆಯಾಗಲಾರದೆಂದು ಹೇಳಿದ್ದಾರೆ.

# ಪಂಡಿತರು ಅವತಾರಿಗಳು

ವೀರಶೈವಬಾಂಧವರೇ, "ನ ವೀರಶೈವಸದೃಶಂ ಮತಮಸ್ತಿ ಜಗತ್ತ್ರಯೇ" ಎಂಬ ವಾಕ್ಯವನ್ನು ನೋಡಿದ್ದಾದರೆ ನಮ್ಮ ವೀರಶೈವಮತವು ಪೂರ್ವದಲ್ಲಿ ಎಷ್ಟು ವೈಭವದಲ್ಲಿತ್ತೆಂಬುದು ತಿಳಿಯುತ್ತದೆ. ಮತಸ್ಥಾಪನಾಚಾರ್ಯರು ಈ ಮತದ ತಳಹದಿಯನ್ನು ಬಹು ಭದ್ರವಾಗಿ ಹಾಕಿರುವುದರಿಂದಲೇ ಇಂದಿನವರೆಗೂ ಅನೇಕರ ಹಾವಳಿಯನ್ನು ಸಹಿಸಿ ಜಗನ್ಮಧ್ಯದಲ್ಲಿ ವಿರಾಜಮಾನವಾಗಿದೆ. ಆದರೆ ಈ ಕಲಿಯುಗದಲ್ಲಿ ಕಲಿಪುರುಷನ ಕುಟಿಲ ನೃತ್ಯಕ್ಕೆ ಮೋಹಗೊಂಡ ಕೆಲವು ಇದೇ ಮತದ ಜನರೇ ಮತದ ಅಸ್ತಿತ್ವವನ್ನು ಶಿಥಿಲಮಾಡಲು ಸಿದ್ಧರಾಗಿದ್ದರು. ಎಲ್ಲಿ ನೋಡಿದರೂ ಕುಟಿಲರಿಗೆ ಚಲ್ಲಾಟವೇ ಚಲ್ಲಾಟವಾಗಿತ್ತು. ಇವರ ವಾಕ್ಚಾತುರ್ಯದ ಮುಂದೆ ಯಾರ ಆಟವೂ ನಡೆಯುವಂತಿರಲಿಲ್ಲ. ಇವರ ಆರ್ಭಟದ ಮುಂದೆ ಪವಿತ್ರ ಗುರುವರ್ಗವು ಕರ್ತವ್ಯಶೂನ್ಯವಾಗಿತ್ತು. ಇವರು ದೇವಭಾಷೆಯಿಂದ ತಮ್ಮ ಕಾರ್ಯಗಳು ಸಾಗವೆಂದು ಮೊದಲೇ ವಿಚಾರಿಸಿ ವಚನಗಳನ್ನೇ ಮುಂದು ಮಾಡಿ ಸರ್ವರ ಹೃದಯಭೂಮಿಯಲ್ಲಿ ವಿಷಬೀಜವನ್ನು ಬಿತ್ತಿ ಬೆಳೆಯಿಸಹತ್ತಿದರು. ಈ ವಿಷವೃಕ್ಷಗಳನ್ನು ಛೇದಿಸುವ ಶಕ್ತಿಯು ಒಬ್ಬರಲ್ಲಿಯೂ ಇದ್ದಿಲ್ಲ. ಈಗ್ಯೂ ಸಹ ಇವರ ವಚನಗಳಲ್ಲಿ ವೇದಾಗಮಗಳ ನಿಂದೆಯೇ ಕಂಡುಬರುತ್ತಲಿದೆ. ಪಾಪ! ನರಿಯು ದ್ರಾಕ್ಷೆಯಹಣ್ಣುಗಳು ಸಿಕ್ಕದೆ ಇದ್ದುದರಿಂದ ಹುಳಿಯೆಂದು ನಿಂದಿಸಿದಂತೆ ಸಂಸ್ಕೃತಭಾಷಾ ಪರಿಜ್ಞಾನವೇ ಇಲ್ಲದ ಇವರು ವೇದಾಗಮಗಳನ್ನು ನಿಂದಿಸುವುದರಲ್ಲೇನಾಶ್ಚರ್ಯ! ಪೂರ್ವದಲ್ಲಿ ತಮನೆಂಬ ರಾಕ್ಷಸನು ವೇದಗಳನ್ನು ಕದ್ದೊಯ್ದು ಪಾತಾಳಲೋಕದಲ್ಲಡಗಲು ದೇವತೆಗಳು ದುಃಖದಿಂದ ಶಿವನಲ್ಲಿ ಮೊರೆ ಇಟ್ಟದ್ದಕ್ಕೆ ಆ ರಾಕ್ಷಸನನ್ನು ನಾಶಮಾಡಿ ವೇದಗಳ ಉದ್ಧಾರಕ್ಕಾಗಿ ವಿಷ್ಣುವನ್ನು ಹೇಗೆ ಕಳುಹಿಸಿದನೋ, ತದ್ವತ್ ಗುರುಭಕ್ತರು ಶ್ರೀಜಗದ್ಗುರು ರೇಣುಕ ಭಗವತ್ಪಾದರಲ್ಲಿ ಮೊರೆಯಿಡಲು ಕುಟಿಲಾಗ್ರಗಣ್ಯರನ್ನು ನಾಶಮಾಡಿ ಪರಮವೈದಿಕವಾದ ಈ ಮತದ ಉದ್ಧಾರಕ್ಕಾಗಿ ತನ್ನಂಶಸಂಭೂತರಾದ ವೇ|| ಪ|| ಶ್ರೀ ಕಾಶೀನಾಥಶಾಸ್ತ್ರಿಗಳನ್ನು ಈ ಲೋಕಕ್ಕೆ ಕಳುಹಿಸಿರುವರು. ಈ ಮಹಾತ್ಮರು ಕಾಲವೈಷಮ್ಯದಿಂದ ವ್ಯತ್ಯಾಸಹೊಂದಿದ ವೇದಾಗಮೋಪಸಿಷತ್ಸಮ್ಮತವಾದ ಈ ಮತಸಿದ್ಧಾಂತವನ್ನು ಸಕ್ರಮವಾಗಿ ಪಂಚಾಚಾರ್ಯ ಪ್ರಭಾ

ಪತ್ರಿಕೆಯ ಮೂಲಕ ಪ್ರಚಾರಮಾಡುತ್ತಿರಲು ಕುಹಕರು ತಮ್ಮ ಬೇಳೆ ಬೇಯುವುದು ಅಶಕ್ಯವೆಂದು ತಿಳಿದು ಮಠದಲ್ಲಿಯೇ ಹೂಲಿ ಎಬ್ಬಿಸುತ್ತಿರುವರು. ಈ ಕುಟಿಲರ ಕುತ್ಸಿತಜನ್ಮಕ್ಕೆ ಧಿಕ್ಕಾರ! ಧಿಕ್ಕಾರ!! ಕುಟಿಲಾಗ್ರಗಣ್ಯರೆ, ಇಂದಿಗೆ ನಿಮ್ಮ ಚಲ್ಲಾಟವು ಮುಗಿಯಿತು! ಓಡುವುದೊಂದೇ ಉಳಿಯಿತು!! ಈ ಮೂರ್ತಿಯ ಅವತಾರದಿಂದ ಅಸೂಯಾಂಧರ ಕುಟಿಲ ಸಿದ್ಧಾಂತವು ಸರ್ವರಿಗೂ ತಿಳಿಯತೊಡಗಿತು. ನೀಚರು ಕೊಡುತ್ತಿರುವ ತೊಂದರೆಗಳನ್ನೆಲ್ಲಾ ತೃಣೀಕರಿಸಿ ಸರ್ವತ್ರ ವೀರಶೈವ ಸಿದ್ಧಾಂತವನ್ನು ಸಾರಿದ ಈ ಮೂರ್ತಿಯು ಅವತಾರಿಯಲ್ಲವೇ? ಈ ಮಹಾಪುರುಷನು ಅಧ್ಯಯನಕಾಲದಲ್ಲಿಯೇ ವೀರಶೈವರು ಅವೈದಿಕರೆಂದು ಶೈವಬ್ರಾಹ್ಮಣೋತ್ಪತ್ತಿಯಲ್ಲಿ ಬರೆದ ಕಾಲಿಕೇಶ್ವರದತ್ತನೆಂಬ ಮಹಾಪಂಡಿತನ ಅಭಿಪ್ರಾಯವನ್ನು ಆಮೂಲಾಗ್ರವಾಗಿ ಖಂಡಿಸಿ ವೈದಿಕರೆಂದು ಜಯಭೇರಿಹೊಡೆಯಿಸಿದ ಈ ಮೂರ್ತಿಯು ನಿಜವಾಗಿಯೂ ಅವತಾರಪುರುಷನೆ! ಇಂದು ಈ ಮೂರ್ತಿಯ ಹೆಸರನ್ನು ಕೇಳಿದ ಕುಟಿಲರ ಹೃದಯವು ನಡಗುತ್ತಲಿದೆ. ನೀಚರ ಹಾವಳಿಯು ಅಡಗುತ್ತಲಿದೆ. ಆಚಾರ್ಯರ ಜಯಧ್ವನಿಯು ಮೊಳಗುತ್ತಲಿದೆ. ಈ ಮಹಾತ್ಮನ ಕಾರ್ಯಪ್ರಭಾವದಿಂದ ಪಂಚಾಚಾರ್ಯರ ಜಯಜಯಕಾರ, ಧರ್ಮಪ್ರಚಾರ, ಗುರುಸೇವಕರ ಸಂಚಾರ ಇವೆಲ್ಲವೂ ಎಲ್ಲಿನೋಡಿದಲ್ಲೆಲ್ಲ ಪ್ರಜ್ವಲಿಸಹತ್ತಿವೆ. ಧನ್ಯ ಧನ್ಯ ಇದೀಗ ಈ ಮೂರ್ತಿಯನ್ನು ಹೊಂದಿದ ವೀರಶೈವರೇ ಪರಮಧನ್ಯರು. ವೀರಶೈವ ಮತ ಸಿದ್ಧಾಂತವು ರೋಮರೋಮಗಳಲ್ಲಿಯೂ ತುಂಬಿ ತುಳುಕಾಡುತ್ತಿರುವ ವೇ|| ಪಂ|| ಶ್ರೀ ಕಾಶೀನಾಥಮೂರ್ತಿಯು ಈಗ ನಮ್ಮ ನೈಜಾಂ ಪ್ರಾಂತದ ವೀರಶೈವರ ಉದ್ಧಾರಕ್ಕಾಗಿ ದಯಮಾಡಿಸಿದುದು ಇಲ್ಲಿಯ ವೀರಶೈವರ ಸುದೈವವೇ ಸುದೈವ! ಈ ಅವತಾರಿಪುರುಷನನ್ನು ಶ್ರೀ|| ಷ|| ಬ್ರ|| ಗುರುಲಿಂಗ ಶಿವಾಚಾರ್ಯ ಕಲ್ಯಾಣಕಟ್ಟೀಮನಿ ಹಿರೇಮಠ ಮತ್ತು ಶ್ರೀಮಾನ್ ಧರ್ಮವೀರ ಶರಣಪ್ಪ ಪತ್ತೇಪೂರದೊರೆ ದುಬಲಗುಂಡಿ ಇವರು ನಿಜಾಮು ಪ್ರಾಂತಕ್ಕೆ ಒಳ್ಳೇ ಉತ್ಸಾಹದಿಂದ ಬರಮಾಡಿಕೊಂಡು ನಮ್ಮ ಪ್ರಾಂತವನ್ನು ಪಾವನಗೊಳಿಸಿದರು.

ಶಿವರಾವ ಸಿದ್ಧರಾಮಪ್ಪಾ ಪಾಟೀಲ,
ಜೇವರಗಿ ಜಹಗೀರ

# ಶ್ರೀಕಾಶೀನಾಥಕುಶಲಪ್ರಾರ್ಥನಾಪಂಚಕಂ

ಯೋ ವಿಶ್ವಂ ಸೃಜತಿ ಪ್ರಪಾತಿ ಹರತಿ ಪ್ರೀತ್ಯಾನುಗೃಹ್ಣಾತಿ ಚ ।
ಸ್ವಾತಂತ್ರ್ಯೇಣ ತಿರೋದಧಾತಿ ಪರಯಾ ಶಕ್ತ್ಯಾ ಸ್ವಯಾಽಭಿನ್ನಯಾ ॥
ತಸ್ಯ ಶ್ರೀಪರಮೇಶ್ವರಸ್ಯ ಕೃಪಯಾ ಲೋಕೋಪಕಾರೋದ್ಯತಃ ।
ಕಾಶೀನಾಥಬುಧೋತ್ತಮೋ ವಿಜಯತಾಮಾರೋಗ್ಯಭಾಗ್ಯಾನ್ವಿತಃ ॥೧॥

ಯಃ ಕಾರುಣ್ಯಸುಧಾನಿಧಿಃ ಪರಶಿವಃ ಸಂಸಾರರೋಗಾಕುಲಾನ್ ।
ಜಂತೂನ್ ಮೋಚಯತಿ ಪ್ರಸನ್ನಹೃದಯಃ ಪಾಪಾತ್ಮನೋಽಪಿ ಪ್ರಭುಃ ॥
ಸ ಪ್ರೇಮ್ಣಾ ಭಗವಾನ್ ಭವಾಮಯಭಿಷಕ್ ಪುಣ್ಯಪ್ರಭಾಭಾಸುರಂ ।
ಕಾಶೀನಾಥಬುಧಾಗ್ರಗಣ್ಯಮವತಾದಾರೋಗ್ಯಭಾಗ್ಯಂ ದಿಶನ್ ॥೨॥

ಕಾಲಾಕ್ರಾಂತಬಲಂ ಮೃಕಂಡುತನಯಂ ಲಿಂಗಾಂಕಿತಸ್ತಂ ಬಲಾ ।
ದಾಲಿಂಗ್ಯೋತ್ಕಟಭಕ್ತಿಭಾವಭರಿತಂ ಕ್ರೋಶಂತಮುತ್ಕಾಕುಲಂ ॥
ದೃಷ್ಟ್ವಾ ವೀಕ್ಷ್ಯ ರರಕ್ಷ ಪೂರ್ಣಕೃಪಯಾ ಮೃತ್ಯುಂಜಯೋ ಯೋಽಚಿರಾತ್
ಕಾಶೀನಾಥಬುಧಂ ಸ ಸಜ್ಜನಮಣಿಂ ಸಂರಕ್ಷತಾದಾಪದಃ ॥೩॥

ಯನ್ನಾಮಾಮೃತಮಾರ್ತಭಕ್ತಜನತಾಸಂತ್ರಾಣಸಿದ್ಧೌಷಧಂ ।
ಯದ್ಧ್ಯಾನದ್ಯುತಿರಂತರಂಗವಿಹರತ್ಪಾಪಾಂಧಕಾರಾರ್ಯಮಾ ॥
ಯಸ್ಯ ಶ್ರೀಚರಣಾರವಿಂದಯುಗಲಂ ಸರ್ವಾರ್ಥಸಿದ್ಧಿಪ್ರದಂ ।
ಕಾಶೀನಾಥಬುಧಂ ಸ ಪಾತು ಸದಯಃ ಶ್ರೀಚಂದ್ರಚೂಡಾಮಣಿಃ ॥೪॥

ಶ್ರೀಶಂಭೋರ್ಮುಖಪಂಕಜಾತಜನಿತಾ ಭೂಮೌ ನಿದೇಶಾದ್ವಿಭೋ ।
ರಾನಂದಾದವತೀರ್ಯ ಲಿಂಗಮುಖತಃ ಸದ್ಧರ್ಮಸಂಸ್ಥಾಪಕಾಃ ॥
ಶ್ರೀಮದ್ರೇಣುಕಮುಖ್ಯವಿಶ್ವಗುರವೋ ವಿಶ್ವೇಡಿತಾ ವಿಶ್ವತಃ ।
ಕಾಶೀನಾಥಮವಂತು ವಿಶ್ವವಿದಿತಂ ಶ್ರೀವಿಶ್ವನಾಥಪ್ರಿಯಂ ॥೫॥

ಪಂಡಿತಪ್ರೇಮಿಾ
ಶ್ರೀಗಂಗಾಧರಶಿವಾಚಾರ್ಯಃ
ಬೆಂಗಳೂರು ಮಹಾಂತಮಠಾಧ್ಯಕ್ಷಃ

## ಗುರುವಂಶೋದ್ಧಾರಕ
## ಶ್ರೀ ಕಾಶೀನಾಥಪಂಡಿತಮಹೋದಯಾನಾಂ
# ಶ್ರೇಯಃಪ್ರಾರ್ಥನಾಪಂಚಕಂ

ಕರ್ಣಾಟೇ ಗುರುವಂಶಪದ್ಮತರಣೇಃ ಶ್ರೀಸಿದ್ಧಮಾಹೇಶ್ವರಾತ್ ।
ಪ್ರಾದುರ್ಭೂಯ ಮಹೀತಲೇ ಪ್ರವಿತತಃ ಸದ್ಧರ್ಮಸಂರಕ್ಷಕಃ ॥
ದುರ್ವಾದೋದ್ಧತಮತ್ತವಾರಣಗಣಪ್ರಧ್ವಂಸಪಂಚಾನನಃ ।
ಕಾಶೀನಾಥಬುಧಃ ಸದಾ ವಿಜಯತಾಮಾಚಾರ್ಯವಂಶಾರುಣಃ ॥೧॥

ವಿದ್ಯಾಬುದ್ಧಿವಿವೇಕಧೈರ್ಯವಿನಯೌದಾರ್ಯಾದಿಭಿಃ ಸದ್ಗುಣೈ ।
ರ್ವಿಖ್ಯಾತಃ ಪೃಥಿವೀತಲೇ ವಿರತಿಮಾನ್ ಶಾಸ್ತ್ರಾರ್ಥಸಂಪತ್ತಿಮಾನ್
ಕಾಶ್ಯಾಂ ಪಂಚಜಗದ್ಗುರೂತ್ತಮಮಹಾಸಮ್ಮೇಲನೇ ಖ್ಯಾತಿಮಾನ್ ।
ಕಾಶೀನಾಥಬುಧಃ ಸದಾ ವಿಜಯತಾಮಾಚಾರ್ಯವಂಶಾರುಣಃ ॥೨॥

ಪಂಚಾಚಾರ್ಯಯಥಾರ್ಥತತ್ತ್ವಕಲನೇ ಪ್ರತ್ಯಕ್ಷವಾಚಸ್ಪತಿಃ ।
ಪಂಚಾಚಾರ್ಯಗುರೂತ್ತಮಾಂಘ್ರಿಭಜತಾಂ ಪ್ರತ್ಯಕ್ಷಚಿಂತಾಮಣಿಃ ॥
ಪಂಚಾಚಾರ್ಯಪವಿತ್ರಪಾದಶತಪತ್ರೋತ್ತುಂಗಭೃಂಗೋಪಮಃ ।
ಕಾಶೀನಾಥಬುಧಃ ಸದಾ ವಿಜಯತಾಮಾಚಾರ್ಯವಂಶಾರುಣಃ ॥೩॥

ಕೇದಾರೋಜ್ಜಯಿನೀಮಹಾಗಿರಿವರಶ್ರೀಕಾಶಿರಂಭಾಪುರೀ ।
ಖ್ಯಾತಶ್ರೀಗುರುಪೀಠಪಂಚಕಮಹಾಸೇವಾಪರಾವಿದ್ಯಯಾ ॥
ಧನ್ಯೋಽಸ್ಮೀತಿ ವಿಭಾವಯನ್ ಪರಶಿವಧ್ಯಾನೇನ ಹೃತ್ತೋಷಯನ್ ।
ಕಾಶೀನಾಥಬುಧಃ ಸದಾ ವಿಜಯತಾಮಾಚಾರ್ಯವಂಶಾರುಣಃ ॥೪॥

ಮಾಯಾಮೋಹವಿದಾರಣೈಕಚತುರೋ ಪಾಪಾಟವೀಪಾವಕೋ ।
ನಿತ್ಯಾನಂದಪದೇ ಸ್ಥಿತೋ ನಿಜಮಹಾಸಂವಿತ್ಪ್ರಕಾಶೇ ಪರೇ ॥
ಸಂವಿತ್ಸೂರ್ಯಸುಕಾಂತಿಕಾಶಿತತನುಃ ಕಾರುಣ್ಯರತ್ನಾಕರಃ ।
ಕಾಶೀನಾಥಬುಧಃ ಸದಾ ವಿಜಯತಾಮಾಚಾರ್ಯವಂಶಾರುಣಃ ॥೫॥

ಶ್ರೀಕೈಲಾಸಲಿಂಗಶಿವಾಚಾರ್ಯಃ
ಶ್ರೀಕೇದಾರಕ್ಷೇತ್ರವಾಸೀ

# ಶ್ರೀಕಾಶೀನಾಥಪಂಡಿತ ಸ್ತೋತ್ರಂ

(ಲೇಖಕ :—ಚನ್ನಕವಿ ಬೃಹನ್ಮಠ, ಸೂರಕೋಡ)

ಶ್ರೀಶೈಲೇಶನ ಬಿಂಬಮೋ ಶಿವಮತಜ್ಞಾನಾದಿಮಸ್ತಂಭಮೋ ।
ಶ್ರೀಶೈವಾಗಮಮೂರ್ತಿಯೋ ಗುರುಕುಲಪ್ರಾಚೀನಸತ್ಕೀರ್ತಿಯೋ ॥
ಶ್ರೀಶೈವಾಂಬುಧಿಚಂದ್ರನೋ ಎನೆ ಜಗನ್ಮಾನ್ಯತ್ವದಿಂ ಶೋಭಿಪಾ ।
ಕಾಶೀನಾಥಬುಧಂ ಸುಖಾತಿಶಯದಿಂದಾರೋಗ್ಯದಿಂ ಬಾಳುಗೆ ॥೧॥

ಆವಾತಂ ನಿಜವೀರಶೈವಜನಕಂ ಸುಜ್ಞಾನಮಂ ಪೇಳ್ವನೋ ।
ಆವಾತಂ ಗುರುವರ್ಗದುದ್ಧರಣಕಂ ಕಷ್ಟಂಗಳಂ ತಾಳ್ವನೋ ॥
ಆವಾತಂ ಕಡುಬ್ರಹ್ಮಚರ್ಯಬಲದಿಂ ಸತ್ಕೀರ್ತಿಯಿಂ ಬಾಳ್ವನೋ ।
ಆ ವಾಗೀಶಸಮಪ್ರಭಂ ಜಯಿಕೆ ಕಾಶೀನಾಥನೀಧಾತ್ರಿಯೊಳ್ ॥೨॥

ನಿನ್ನಂ ಧ್ಯಾನಿಪನಾವನೋ ಶಿವಗವಂ ಸಂಪ್ರೀತನೈ ಪ್ರಾಜ್ಞನೇ ।
ನಿನ್ನಂ ಪೆತ್ತಿಹ ತಂದೆತಾಯಿಗಳು ತಾವ್ ಸಾಮಾನ್ಯರೇ? ಪೂಜ್ಯರೈ ॥
ನಿನ್ನಂ ಭಾರತಮಾತೆಯುಂ ಸುತವತೀ ತಾನಾದಳೇಂ ಭಾಗ್ಯಮೋ ।
ನಿನ್ನಿಂ ರಾಜಿಪ ವೀರಶೈವಸಮಯಂ ಧನ್ಯಂ ಧರಾಮಧ್ಯದೊಳ್ ॥೩॥

ಗುರುವರ್ಗೋನ್ನತಿಸಂಘಮಂ ನೆಲಸಿ ನೀನೆಲ್ಲೆಲ್ಲಿಯುಂ ಮತ್ತಮಾ ।
ಗುರುವರ್ಗಕ್ಕುಪಯುಕ್ತ ಪುಸ್ತಕಗಳಂ ಮುದ್ರಾಕ್ಷರಾಗಾರದೊಳ್ ॥
ಭರದಿಂ ಮುದ್ರಿಸಿ ವೃತ್ತಪತ್ರಿಕೆಯನುಂ ರಕ್ಷಿಪ್ಪೆ ನಿಃಸ್ವಾರ್ಥದಿಂ ।
ಗುರುವರ್ಗೋತ್ತಮಮಾರ್ಗದರ್ಶಕನೆನಲ್ ನಿನ್ನಂ ಬುಧರ್ ಪಾಡುವರ್ ॥೪॥

ಪೆಣ್ಣೇ ಲೋಕದ ಕಣ್ಣದೆಂದುಲಿವರಾ ಪೆಣ್ಣೇ ಭವದ್ದೃಷ್ಟಿಯಿಂ ।
ಮಣ್ಣಿಂ ಮಾಡಿದ ಬೊಂಬೆಯಂತಿರುತಿರಲ್ ಸನ್ಯಾಸಿಗಳ್ ಸಂತತಂ ॥
ಕಣ್ಣಿಂ ಕಾಣದೆ ಭೀತಿಪಟ್ಟಡವಿಯಂ ಪೊಂದಿರ್ಪರೆಂದೆನ್ನಲುಂ ।
ನಿನ್ನಿಂದಾ ಯತಿಗಳ್ ಸುಮಾನ್ಯರಿಹರೇ ಸದ್ಬ್ರಹ್ಮನಿಷ್ಠಾಗ್ರಣೀ ॥೫॥

ಗುರುನಿಂದಾಚಲವಜ್ರನೇ ಗುರುಜನಾನಂದಾಬ್ಧಿಸಚ್ಚಂದ್ರನೇ ।
ಗುರುಕಾರುಣ್ಯದ ಮೂರ್ತಿಯೇ ಗುರುಮತಾಚಾರಾಧ್ವಸಂಚಾರಿಯೇ ॥
ಗುರುತತ್ತ್ವಾಮೃತಸಿಂಧುವೇ ಸ್ವಮತದುದ್ಧಾರಾರ್ಥಮಾ ಸ್ವರ್ಗದಿಂ ।
ಧರೆಗೈತಂದಿಹ ಪುಣ್ಯರಾಶಿಯೆನೆ ನೀಂ ಸುಜ್ಞಾನದಿಂ ಶೋಭಿಪ್ಪೆ ॥೬॥

ಉರುಧೀರತ್ವವನಾಂತ ಶಾಂತವಹ ನಿನ್ನಂ ಕ್ರೂರಕರ್ಮಾತ್ಮರುಂ ।
ಜರೆದರ್ ವಿಘ್ನವನೊಡ್ಡಿದರ್ ನಿನಗವರ್ ಕಷ್ಟಂಗಳಂ ಕೊಟ್ಟರೈ ॥
ತರಿಯಲ್ಪ್ರಾಣಗಳಂ ವೃಥಾ ಕುಮತಿಗಳ್ ಪ್ರಯತ್ನಮಂ ಮಾಡಿದರ್ ।
ಒರೆದರ್ ದುರ್ವಚನಾದೊಡೇಂ ಜಗದಿ ನೀಂ ಸದ್ಧೈರ್ಯದಿಂ ವರ್ತಿಸೈ ॥೭॥

ಪರಮಶ್ರೀಗುರುಭಕ್ತಿಚಾಪಕೆ ಭವತ್ಪಾಂಡಿತ್ಯಮಿಂತೆಂಬುವಾ ।
ಶರಮಂ ಪೂಡುತೆ ವೀರನಾಗುತೆ ಸದಾ ಪಂಚಾರ್ಯರಂ ನಿಂದಿಸಿ ॥
ಚರಿಸುತ್ತಿರ್ಪ ದುರಾತ್ಮದುರ್ಮೃಗಗಳಂ ವಿಧ್ವಂಸನಂ ಗೆಯ್ದು ನೀಂ ।
ಗುರುಸಾಮ್ರಾಜ್ಯವ ಪಾಲಿಸುತ್ತ ಮೆರೆವೈ ವೀರಾಗ್ರಣೀ ಧೀಮಣೀ ॥೮॥

ಮನೆಮಾರುಂ ತೊರೆದಾವಗಂ ಸ್ವಗುರುಪೀಠೋದ್ಧಾರಕಂ ನಿನ್ನಯಾ ।
ತನುವಂ ಮಾನಸವಂ ಸಮರ್ಪಿಸಿ ವಲಂ ನಿಸ್ಸ್ವಾರ್ಥಭಾವಂಗಳಿಂ ॥
ಹೆಣಗುತ್ತಿರ್ಪೆ ಬುಧೇಂದ್ರನೇ ಸ್ವಮತಮೊಂದೆಂದುಂ ಭವತ್ಕಾರ್ಯದಿಂ ।
ಋಣಿಯಾಗಿರ್ಪುದು ವೀರಶೈವಜನಕಂ ತ್ವತ್ಸೇವೆಯೇ ಸಾರ್ಥಕಂ ॥೯॥

ಧೃತಿಯಿಂ ಪರ್ವತಮಂ ಪ್ರತಾಪಗುಣದಿಂದಾದಿತ್ಯನಂ ಯತ್ನದಿಂ ।
ಕ್ಷಿತಿವಿಖ್ಯಾತಭಗೀರಥಕ್ಷಿತಿಪನಂ ಶೈವಾಭಿಮಾನಿತ್ವದಿಂ ॥
ಶ್ರುತದೇವರ್ಷಿದಧೀಚಿಯಂ ಭಕುತಿಯಿಂದುದ್ದಾಲಕಾಚಾರ್ಯನಂ ।
ಸತತಂ ಮೀರಿಸಿ ಸರ್ವಸದ್ಗುಣಗಳಿಂ ರಾರಾಜಿಸುತ್ತಿರ್ಪೆ ನೀಂ ॥೧೦॥

## ಶ್ರೀಕಾಶೀನಾಥಪಂಡಿತರ ಸ್ತುತಿ

ಗುರುಮೂರ್ತಿ ಈತನೆ ಗುರುಮೂರ್ತಿ ।
ಕಾಶೀನಾಥಪಂಡಿತ ಶುಭಮೂರ್ತಿ ॥ಪ॥

ಗುರುವಂಶದಿ ಜನ್ಮವ ಪಡೆದಾತ । ಗುರುವಂಶದ ಶ್ರೇಷ್ಠತೆ ಸಾರಿದಾತ ॥
ಗುರುವಂಶಕೆ ಗೌರವ ತಂದಾತ । ಗುರುವರ್ಗಕೆ ಸ್ಫೂರ್ತಿಯನಿತ್ತಾತ ॥೧॥

ಧರ್ಮದ ಮರ್ಮವನರಿತಾತ । ಧರ್ಮದ ಬೆಳಕನು ತೋರಿದಾತ ॥
ಧರ್ಮದ ಗ್ರಂಥಗಳ ಬರೆದಾತ । ಧರ್ಮದ ಧ್ವಜವನು ಹಿಡಿದಾತ ॥೨॥

ಧರೆಯೊಳು ವಿಜಯದಿ ಮೆರೆದಾತ । ಧರೆಯೊಳು ಮರ್ಮವ ಪೂರೆದಾತ ॥
ದುರುಳರ ದರ್ಪವ ತರಿದಾತ । ದುರ್ವಿರತರ ಹಲ್ಲನು ಮುರಿದಾತ ॥೩॥
ಪಂಚಾಚಾರ್ಯರ ಧ್ವಜವೀತ । ಪಂಚಾಚಾರ್ಯರ ನಿಧಿಯೀತ ॥
ಪಂಚಾಚಾರ್ಯರ ಪ್ರಾಣವೀತ । ಪಂಚಾಚಾರ್ಯರ ಪ್ರತಿಬಿಂಬವೀತ ॥೪॥

ಎಸ್. ಶಂಕರಪ್ಪ, ಚನ್ನಹಳ್ಳಿ

---

## ಶ್ರೀಕಾಶೀನಾಥಪಂಡಿತವಿರಚಿತಂ

# ಶಿವಭಕ್ತಿಪ್ರಭಾವಾಷ್ಟಕಂ

ಆಚಾರ್ಯವರ್ಯಾನ್ ಪರಿಪೂಜಯಂತಃ ।
ಲಿಂಗಂ ಶರೀರೇ ಪರಿಧಾರಯಂತಃ ॥
ಶ್ರೀಜಂಗಮಾಲಿಂ ಪರಿತೋಷಯಂತಃ ।
ಶಿವಭಕ್ತಿಮಂತಃ ಖಲು ಭಾಗ್ಯವಂತಃ ॥೧॥

ಭಸ್ಮತ್ರಿಪುಂಡ್ರಂ ಪರಿಧಾರಯಂತಃ ।
ರುದ್ರಾಕ್ಷರತ್ನಾಭರಣೈರ್ಲಸಂತಃ ॥
ಪಾದೋದಕಂ ಪಾವನಮಾಪಿಬಂತಃ ।
ಶಿವಭಕ್ತಿಮಂತಃ ಖಲು ಭಾಗ್ಯವಂತಃ ॥೨॥

ಶುದ್ಧಪ್ರಸಾದಂ ಪರಿಸೇವಯಂತಃ ।
ಪಂಚಾಕ್ಷರೀಮಂತ್ರವರಂ ಜಪಂತಃ ॥
ಪಂಚಾನನಾರ್ಚಾಕರಣೇ ರಮಂತಃ ।
ಶಿವಭಕ್ತಿಮಂತಃ ಖಲು ಭಾಗ್ಯವಂತಃ ॥೩॥

ವರ್ಣಾಶ್ರಮಾಚಾರವರೈರ್ಲಸಂತಃ ।
ವರ್ಣಾಶ್ರಮಾದೀನ್ ಪರಿಪಾಲಯಂತಃ ॥
ಓಂವರ್ಣತತ್ತ್ವಾರ್ಥವಿಚಾರವಂತಃ ।
ಶಿವಭಕ್ತಿಮಂತಃ ಖಲು ಭಾಗ್ಯವಂತಃ ॥೪॥

ವೇದಾಂತವಿಜ್ಞಾನವನೇ ಚರಂತಃ ।
ಸಿದ್ಧಾಂತಸಿಂಧೌ ಚ ವಿಹಾರವಂತಃ ॥
ವೈರಾಗ್ಯವಂತಃ ಸುವಿವೇಕವಂತಃ ।
ಶಿವಭಕ್ತಿಮಂತಃ ಖಲು ಭಾಗ್ಯಪಂತಃ ॥೫॥

ಲಿಂಗಾಂಗಶಾಸ್ತ್ರಂ ಸತತಂ ಪಠಂತಃ ।
ಲಿಂಗಾಂಗತತ್ತ್ವಂ ಸತತಂ ವದಂತಃ ॥
ಲಿಂಗಾಂಗಯೋಗಂ ಸತತಂ ಭಜಂತಃ ।
ಶಿವಭಕ್ತಿಮಂತಃ ಖಲು ಭಾಗ್ಯವಂತಃ ॥೬॥

ಶಿವಾಯ ಸರ್ವಂ ಚ ಸಮರ್ಪಯಂತಃ ।
ಸರ್ವೇ ಶಿವತ್ವಂ ಪರಿಭಾವಯಂತಃ ॥
ಶಿವಾತ್ಮಬುದ್ಧಿಂ ಪರಿವರ್ಧಯಂತಃ ।
ಶಿವಭಕ್ತಿಮಂತಃ ಖಲು ಭಾಗ್ಯವಂತಃ ॥೭॥

ಕೈಲಾಸನಾಥಂ ಸತತಂ ಸ್ಮರಂತಃ ।
ಕೈವಲ್ಯದಾಚಾರ್ಯವರಾನ್ ಸ್ತುವಂತಃ ।
ಕೈವಲ್ಯಸಾಮ್ರಾಜ್ಯಸುಖಂ ವಹಂತಃ ॥
ಶಿವಭಕ್ತಿಮಂತಃ ಖಲು ಭಾಗ್ಯವಂತಃ ॥೮॥

